ಗಳಗನಾಥ ಸುರಸಗ್ರಂಥಮಾಲ

# ಧರ್ಮರಹಸ್ಯ

ಅಥವಾ

## ಸತ್ಸಮಾಗಮ--ಪ್ರಭಾವ.

ಇದನ್ನು

**ವೇಂಕಟೇಶ ತಿರಕೋ ಕುಲಕರಣಿ ಗಳಗನಾಥ.**

ಇವರು ಬರೆದರು.

೨ನೆಯಾವೃತ್ತಿ ೧೦೦೦ ಪ್ರತಿಗಳು



1933

**ಬೆಲೆ ೧ ರೂಪಾಯಿ:**

# ಪ್ರಸ್ತಾವನೆ.

(ಒಂದನೆಯ ಆವೃತ್ತಿ.

ಶ್ರೀಗುರು ಕೃಪೆಯಿಂದ “ಧರ್ಮರಹಸ್ಯ”ವೆಂಬ ಹೆಸರಿನ ಈ ಕಾದಂಬರಿಯು ಮುಗಿಯಿತು! ಈ ಕಾದಂಬರಿಗೆ ಮೂಲಧನವಾಗಿರುವ ಎರಡು ಪುಸ್ತಕಗಳನ್ನು, ಅಂದರೆ “ಸಾಮ್ರಾಟ್ ಅಶೋಕ” ಮತ್ತು “ಅಶೋಕ ಅಥವಾ ಆರ್ಯಾವರ್ತಾಂತಲಾ ಪಹಿಲಾ ಚಕ್ರವರ್ತಿ ರಾಜಾ” ಎಂಬ ಎರಡು ಮರಾಠೀ ಪುಸ್ತಕಗಳನ್ನು ಓದಿದಬಳಿಕ, ಎಲ್ಲ ಧರ್ಮಗಳ ರಹಸ್ಯವು ಒಂದೇ ಇರುತ್ತವೆಂಬ ನನ್ನ ಭಾವನೆಗೆ ಬಲವಾದ ಸಾಕ್ಷಿಯು ದೊರೆತಂತಾಯಿತು, ಆದ್ದರಿಂದ ಆವೆರಡು ಪುಸ್ತಕಗಳ ಆಧಾರದಿಂದ ಬರೆಯಲ್ಪಟ್ಟಿರುವ ಈ ಪುಸ್ತಕಕ್ಕೆ “ಧರ್ಮರಹಸ್ಯ”ವೆಂಬಹೆಸರು ಕೊಡಲ್ಪಟ್ಟಿರುತ್ತದೆ. ಅದರಂತೆ, ಸತ್ಸಮಾಗಮವಿಲ್ಲದೆ ಧರ್ಮದ ನಿಜವಾದ ರಹಸ್ಯವು ತಿಳಿಯುವದಿಲ್ಲವಾದ್ದರಿಂದ ಇದಕ್ಕೆ “ಸತ್ಸಮಾಗಮಪ್ರಭಾವ”ವೆಂಬ ಮತ್ತೊಂದು ಹೆಸರೂ ಬಂದಿರುವದು. ಎಲ್ಲ ಧರ್ಮಗಳ ಅಂತಿಮಫಲವು ಆತ್ಮಕ್ಕೆ ಶಾಶ್ವತಶಾಂತಿಯು ದೊರೆಯಬೇಕೆಂಬದೇ ಆಗಿರುತ್ತದೆಂದು ಹೇಳಬಹುದು. ಈ ಶಾಂತಿಯು ದೊರೆಯಬೇಕಾದರೆ, ಸ್ವತಃ ಶಾಂತರಾಗಿದ್ದ ಸತ್ಪುರುಷರ ಸಮಾಗಮದಿಂದ ಅವರ ಕೃಪೆಯನ್ನು ಸಂಪಾದಿಸುವದು, ಅಂದರೆ ಕ್ಷಮಾ-ಶಾಂತಿ-ದಯೆ ಮೊದಲಾದ ಸದ್ಗುಣಗಳುಳ್ಳವರಾಗುವದು ಅವಶ್ಯವಾಗಿರುತ್ತದೆಂದು ಎಲ್ಲ ಧರ್ಮಗಳು ಹೇಳುತ್ತಿರಬಹುದು. ಈ ಮಾತಿಗೆ ಈ ಕಾದಂಬರಿಯೊಳಗಿನ ಅಶೋಕನ ವೃತ್ತಿಪರಿವರ್ತನವು ಉತ್ತಮ ಸಾಕ್ಷಿಯಾಗಿರುತ್ತದೆ.

ಪ್ರತಿಒಂದು ಧರ್ಮದ ಸ್ವರೂಪದಲ್ಲಿ ಬಾಹ್ಯಾಂಗ ಅಂತರಂಗ ಎಂಬ ಎರಡು ಮುಖ್ಯ ಭಾಗಗಳಿರುತ್ತವೆಯೆಂದು ಹೇಳಲೇ ಬೇಕಾಗುವದು. ಇವುಗಳಲ್ಲಿ ಅಂತರಂಗವು, ಅಂದರೆ ಆತ್ಮಜ್ಞಾನಪ್ರಾಪ್ತಿಯ ಸಾಧನವು ಅವಿನಾಶಿಯೂ, ಸತ್ಯವೂ ಅಂತೇ ಸನಾತನವು ಆಗಿದ್ದು, ಈ ಮಹತ್ವದ ಭಾಗವನ್ನು, ದೇಶ-ಕಾಲ-ಪರಿಸ್ಥಿತಿಗಳ ಬಾಧೆಯಿಂದ ರಕ್ಷಿಸುವದಕ್ಕಾಗಿ, ಹಾಗು ಆಯಾ ಧರ್ಮಗಳ ವೈಲಕ್ಷಣ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ಬಹಿರಂಗದ ರಚನೆಯಿರುತ್ತದೆ; ಅದರಿಂದಲೇ ಬೇರೆ ಬೇರೆ ಧರ್ಮಗಳ ಬಾಹ್ಯಾಂಗಗಳು ಭಿನ್ನಭಿನ್ನವಾಗಿರುವದು ಆಶ್ಚರ್ಯವಲ್ಲ-ಅಸ್ವಾಭಾವಿಕವೂ ಅಲ್ಲ. ಮುಸಲ್ಮಾನರ ಶಿಖಾನಷ್ಟತೆ- ಬ್ರಾಹ್ಮಣರ ಶಿಖಾಸಂಪನ್ನತೆ, ಸ್ಮಾರ್ತರ ಭಸ್ಮಧಾರಣ-ವೈಷ್ಣವರ ಮುದ್ರಾಧಾರಣ, ಬ್ರಾಹ್ಮಣರ ಯಜ್ಞೋಪವಿತ-ಲಿಂಗಾಯತರ ಲಿಂಗ,

ಹಿಂದೂ ಜನರ ಮೂರ್ತಿಪೂಜೆ—ಮುಸಲ್ಮಾನರ ನಮಾಜು ಇವೇ ಮೊದಲಾದವು, ಅಂದರೆ ಜ್ಞಾನೇಂದ್ರಿಯಗಳಿಂದ ತಿಳಿಯಬಹುದಾದ ಧರ್ಮದಸ್ವರೂಪವು ಧರ್ಮದ ಬಾಹ್ಯಾಂಗವೆನಿಸುವದು. ವೇಷಧಾರಿಗಳಂತೆ ಈ ಬಾಹ್ಯಾಂಗದ ಸಂಬಂಧದಿಂದ ಸ್ಮಾರ್ತನು ಕ್ಷಣದಲ್ಲಿ ವೈಷ್ಣವನೂ, ಬ್ರಾಹ್ಮಣ ಯತಿಯು ಕ್ಷಣದಲ್ಲಿ ಬೌದ್ಧಭಿಕ್ಷುವೂ, ಹಿಂದುವು ಕ್ಷಣದಲ್ಲಿ ಮುಸಲ್ಮಾನನೂ ಆಗಬಹುದು. ಆದರೆ ಧರ್ಮದ ಅಂತರಂಗದ ಸಂಬಂಧದಿಂದ ರೂಪಾಂತರವಾಗಲಿಕ್ಕೆ ಸರ್ವಥಾ ಬರುವದಿಲ್ಲ, ಯಾಕೆಂದರೆ, ಅಂತರಂಗದಿಂದ ಯಾವ ಧರ್ಮಗಳೂ ಪರಸ್ಪರ ತತ್ತ್ವತಃ ಭಿನ್ನವಾಗಿರುವದಿಲ್ಲ. ನಿಜವಾದ ಬ್ರಾಹ್ಮಣ್ಯವು, ನಿಜವಾದ ಇಸ್ಲಾಮತನವು, ನಿಜವಾದ ಕ್ರೈಸ್ತತ್ವವು, ನಿಜವಾದ ಅದ್ವೈತವು, ನಿಜವಾದ ದ್ವೈತವು ಶಾಂತಿಗೆ ಬಾಧಕವಿಲ್ಲ

ಮನುಷ್ಯರ ಲಕ್ಷ್ಯವು ಬಹುತರ ಧರ್ಮದ ಬಾಹ್ಯಾಂಗದ ಕಡೆಗೇ ಹೋಗುವದರಿಂದ, ಅವರಿಗೆ ಅಂತರಂಗದ ವಿಸ್ಮೃತಿಯಾಗಲು, ದುರಭಿಮಾನ ಬೆಳೆಯು ಮಾತ್ಸರ್ಯದಿಂದ ಧಾರ್ಮಿಕ ಕಲಹಗಳು ಉತ್ಪನ್ನವಾಗಿ ರಕ್ತದ ಕಾಲಿವೆಗಳು ಸಹ ಹರಿಯುತ್ತ ಬಂದವು! ಇದು ಬಹು ದುಃಖದ ಸಂಗತಿಯು! ಗುರುಕೃಪೆಯಿಂದ ತನ್ನ ಧರ್ಮದ ಅಂತರಂಗ–ಬಹಿರಂಗಗಳ ಸ್ವರೂಪವನ್ನು ಅರಿತುಕೊಂಡು, ಅವುಗಳಂತೆ ನಿಷ್ಠೆಯಿಂದ ಆಚರಿಸುವದಕ್ಕೆ ಸ್ವಧರ್ಮನಿಷ್ಠೆಯೆನ್ನಬಹುದು ಅದರಂತೆ ಎಲ್ಲ ಧರ್ಮಗಳ ರಹಸ್ಯವು, ಅಂದರೆ ಧರ್ಮದ ಅಂತರಂಗವು ಒಂದೇ ಇರುವದರಿಂದ, ಅವುಗಳ ಬಾಹ್ಯಾಂಗದ ಭಿನ್ನತ್ವದಿಂದುಂಟಾಗಬಹುದಾದ ಅಸೂಯಕ್ಕೆ ಒಳಗಾಗದೆ, ಪರ ಧರ್ಮದವರಲ್ಲ ಪ್ರೇಮವನ್ನು ಕಾಯ್ದು ಕೊಳ್ಳುವದಕ್ಕೆ ಪರಧರ್ಮಸಹಿಷ್ಣುತೆಯೆನ್ನಬಹುದು. ಕೇವಲ ಧರ್ಮದ ಬಾಹ್ಯಾಂಗದಲ್ಲಿ ನಿಷ್ಠೆಯನ್ನು ತೋರಿಸುವದು ಡಾಂಭಿಕತನವೇ ಸರಿ. ಇದರಿಂದ ಶಾಂತಿಯು ಎಂದಿಗೂ ದೊರೆಯಲಾರದು. ಈ ಕಾದಂಬರಿಯನ್ನು ಓದಿದವರಲ್ಲ ಒಬ್ಬರಾದರೂ ಸ್ವಧರ್ಮನಿಷ್ಠೆಯನ್ನೂ, ಪರಧರ್ಮಸಹಿಷ್ಣುತೆಯನ್ನೂ ತಾಳಿ, ಎಲ್ಲ ಧರ್ಮದವರೊಡನೆ ನಿಜವಾದ ಪ್ರೇಮದಿಂದಲೂ, ಗೌರವದಿಂದಲೂ ನಡಕೊಂಡರೆ, ಲೇಖಕನ ಶ್ರಮವು ಸಾರ್ಥಕವಾಯಿತೆಂದು ತಿಳಿಯಲಾಗುವದು. ಪರಧರ್ಮದಲ್ಲಿ ಆದರವೂ, ಪರಧರ್ಮದ ಗುರುಗಳಲ್ಲಿ, ಸತ್ಪುರುಷರಲ್ಲಿ, ದೇವರಲ್ಲಿ ಭಕ್ತಿಯೂ ಯಾವನ ಅಂತರಂಗದಲ್ಲಿ ಉತ್ಪನ್ನವಾಗುವವೋ, ಆ ಭಾಗ್ಯಶಾಲಿಯಲ್ಲಿಯೇ ಸ್ವಧರ್ಮನಿಷ್ಠೆಯಿರುತ್ತದೆಂದು ತಿಳಿಯತಕ್ಕದ್ದು! ಅವನೇ ಧನ್ಯನು!!

## ಎರಡನೆಯ ಆವೃತ್ತಿ.

ಈ ಎರಡನೆಯ ಆವೃತ್ತಿಯನ್ನು ಹೊರಡಿಸುತ್ತಿರುವಾಗ ಈ ಪುಸ್ತಕವನ್ನು ಮೈಸೂರ ವಿಶ್ವವಿದ್ಯಾಲಯದವರು ಮ್ಯಾಟ್ರಿಕ್‌ಕ್ಲಾಸಿನ ಕನ್ನಡ ಪಠ್ಯಪುಸ್ತಕವಾಗಿ ನಿಯಮಿಸಿದ್ದು ಬಹು ಸಮಾಧಾನದ ಸಂಗತಿಯೆಂದು ಕೃತಜ್ಞತೆಯಿಂದ ತಿಳಿಸುವೆವು. ಇದೇ ಸಮಯದಲ್ಲಿ "ಕ್ಷಾತ್ರತೇಜ" ವೆಂಬ ನಮ್ಮ ಇನ್ನೊಂದು ಕಾದಂಬರಿಯನ್ನು, ನಮ್ಮ ಮುಂಬಯಿ ವಿಶ್ವವಿದ್ಯಾಲಯದವರು ಮ್ಯಾಟ್ರಿಕ್ ಕ್ಲಾಸಿನ ಪಠ್ಯಪುಸ್ತಕವಾಗಿನಿಯಮಿಸಿರುವದು ನಮಗೆ ಉತ್ಸಾಹ-ಜನಕವಾದದ್ದೆಂದು ಅತ್ಯಂತ ಕೃತಜ್ಞತೆಯಿಂದ ತಿಳಿಸದೆ ಇರಲಾರೆವು! ನಾವು ಈವರೆಗೆ ಬರೆದಿರುವ ಹತ್ತು ಇಪ್ಪತ್ತು ಕಾದಂಬರಿಗಳು ಕನ್ನಡಿಗರಲ್ಲಿ, ವಿಶೇಷವಾಗಿ ತರುಣ ಕನ್ನಡಿಗರಲ್ಲಿ ಸದ್ಗುಣ-ಸದಭಿರುಚಿಗಳ ಪ್ರಾದುರ್ಭಾವ ಮಾಡುವಂತಹವಿರುವದರಿಂದ, ಅವುಗಳಲ್ಲಿ ಒಂದೊಂದೇ ಪಾಠಶಾಲೆಗಳ ಪಠ್ಯಪುಸ್ತಕವಾಗಿ ನಿಯಮಿಸಲ್ಪಡುತ್ತಿರುವದು ಅತ್ಯಂತ ಸಮಾಧಾನದಸಂಗತಿಯಾಗಿರುತ್ತದೆ! ಈ ಮೊದಲೆ ನಮ್ಮ "ಕುಮುದಿನಿ" ಹಾಗು "ಸತ್ವಸಾರ" ಎಂಬ ಎರಡು ಕಾದಂಬರಿಗಳು ಮುಂಬಯಿ ವಿಶ್ವವಿದ್ಯಾಲಯದ ಬಿ-ಏ-ಕ್ಲಾಸಿನ ಪಠ್ಯಪುಸ್ತಕಗಳಾಗಿ ನಿಯಮಿಸಲ್ಪಟ್ಟಿರುವವು ನಮ್ಮ "ಮಾಧವಕರುಣವಿಲಾಸ" ವೆಂಬ ಗೌರವದ ವಿಸ್ತೃತ ಕಾದಂಬರಿಯನ್ನು ಎಮ್-ಏ-ಪರೀಕ್ಷೆಗೆಪಠ್ಯಪುಸ್ತಕವಾಗಿ ನಿಯಮಿಸಲು ಮುಂಬಯಿ ಯುನಿವರ್ಸಿಟಿಗೆ ಸಿಫಾರಸ ಮಾಡಿರುವದಾಗಿ ಕೇಳುತ್ತಿರುವೆವು ಒಟ್ಟಿಗೆ, ನಮ್ಮ ಅಧಿಕಾರಸಂಪನ್ನ ಪ್ರಿಯತರುಣ ವಿದ್ಯಾರ್ಥಿಗಳು, "ಇವೇನು ಕಾದಂಬರಿಗಳು" ಎಂದು ಉದಾಸೀನಮಾಡದೆ, ನಮ್ಮ ಕಾದಂಬರಿಗಳನ್ನು ಒಮ್ಮೆಯಾದರೂ ಓದಿ, ಗುಣಗ್ರಹಣಮಾಡಬೇಕೆಂದು ಸೂಚಿಸುವೆವು.

ಸದ್ಗುರು ಆಫೀಸ ಹಾವೇರಿ.
ತಾ|| ೨೫-೪-೧೯೨೫.

ವಿಧೇಯ
ವೇ. ತಿ ಗಳಗನಾಥ.

## ೩ನೇ ಆವೃತ್ತಿ.

ಎರಡನೆಯಾವೃತ್ತಿಯ ಪುಸ್ತಕಗಳು ಹೊರಡಿಸಿದಾಗಲೇ ತೀರಿಹೋದರೂ ೩ನೆಯಾವೃತ್ತಿಯನ್ನು ಇಂದಿನವರೆಗೆ ಹೊರಡಿಸಲಿಕ್ಕೆ ಅನುಕೂಲವಾಗಿ ಈಗ ಹೊರಡಿಸಿರುತ್ತದೆ. ಈ ಪುಸ್ತಕಗಳೂ ಕೂಡಲೆ ತೀರಿಹೋಗುವದು ಸಂಶಯವಿಲ್ಲ; ಯಾಕಂದರೆ ನಮ್ಮ ಪುಸ್ತಕಗಳ ಮೇಲಿನ ಕನ್ನಡಿಗರ ಪ್ರೇಮವೇ ಅಂತಹದು!

ಸದ್ಗುರು ಆಫೀಸ ಹಾವೇರಿ.
ತಾ|| ೨೬-೭-೧೯೩೩.

ವಿಧೇಯ
ವೇ. ತಿ. ಕುಲಕರಣಿ.
ಗಳಗನಾಥ.

# ಧರ್ಮರಹಸ್ಯ.

ಅಥವಾ

## ಸತ್ಸಮಾಗಮ-ಪ್ರಭಾವ.

೧ನೆಯ ಪ್ರಕರಣ—ತಪೋಧನನು.

ಶ್ರೀವಿಷ್ಣು—ಪಾದೋದಕವೆನಿಸುವ ಭಾಗೀರಥಿಗೆ ಆರ್ಯಾವರ್ತವನ್ನು ಪ್ರವೇಶಿಸುವದಕ್ಕಾಗಿ ಹಿಮಾಚಲನು ಮಾರ್ಗವನ್ನು ಮಾಡಿಕೊಟ್ಟಿರುವನೋ, ಅನ್ನುವಂತೆ, ಹರಿದ್ವಾರದ ಗಂಗಾಪ್ರವಾಹದ ಎರಡೂ ದಂಡೆಗಳನ್ನು ಹಿಡಿದು ಸಣ್ಣ ಸಣ್ಣ ಪರ್ವತಗಳ ಶ್ರೇಣಿಗಳು ಹಬ್ಬಿಗೊಂಡಿರುವವು ಈ ಪರ್ವತ ಶ್ರೇಣಿಗಳೂ, ಅವುಗಳ ನಡುವಿನ ಕಂದರವೂ ಕೂಡಿ ಗಂಗೆಯದ್ವಾರದಂತೆ ಕಾಣುವದರಿಂದಲೇ ಈ ಮಹಾಕ್ಷೇತ್ರಕ್ಕೆ ಗಂಗಾದ್ವಾರವೆಂಬ ಮತ್ತೊಂದು ಹೆಸರು ಬಿದ್ದಿರುತ್ತದೆ. ಈ ಚಿಕ್ಕಪರ್ವತಗಳ ಹಿಂದೆ ಹಿಂದೆ ಪರ್ವತಗಳು ಎತ್ತರವಾಗುತ್ತಾಗುತ್ತ ಹೋಗಿ, ಕಡೆಗೆ ಆಕಾಶವನ್ನು ಭೇಧಿಸುವಂಥ ಕಾಂಚನಗಡ, ಗೌರೀಶಂಕರ, ಧವಲಗಿರಿ ಮೊದಲಾದ ಶಿಖರಗಳು ಉತ್ಪನ್ನವಾಗಿರುತ್ತವೆ. ಆ ಶಿಖರಗಳಲ್ಲಿ ಕೆಲವು ಎರಡು ಹರದಾರಿಗಳಗಿಂತ ಹೆಚ್ಚು ಎತ್ತರವಾಗಿರುವವು! ಈ ಅಗಾಧವಾದ ಸೃಷ್ಟಿರಚನೆಯನ್ನು ನೋಡಿದ ಮನುಷ್ಯನು ಮುಂದುಗಾಣದೆ ನಿಂತುಕೊಳ್ಳುವನು. ಈ ಮಹಾಕ್ಷೇತ್ರದಲ್ಲಿರುವ ಕನಖಲವೆಂಬ ತೀರ್ಥವು ಪರಮಪವಿತ್ರವೂ, ಚಿತ್ತಾಕರ್ಷಕವೂ ಆಗಿರುವದು. ಭಾಗೀರಥಿಯದೊಂದು ಭಾಗವು ಈ ತೀರ್ಥವಾಗಿರುತ್ತದೆ. ಈ ತೀರ್ಥದಲ್ಲಿ ಸ್ನಾನ ಮಾಡುವದಕ್ಕಾಗಿ ಒಂದು ಚಿಕ್ಕಘಾಟು ಕಟ್ಟಲ್ಪಟ್ಟಿರುವದು. ಘಾಟಿನ ಮೇಲೆ ದೊಡ್ಡ ದೊಡ್ಡ ಆಲದಮರಗಳು ಇರುವವು. ಘಾಟಿಗೆ ಹೊಂದಿ

ಗಂಗಾಪ್ರವಾಹವು ಕಸುವಿನಿಂದ ಹರಿಯುತ್ತಿರುವದು. ಆಗ ಶುಭ್ರವಾದ ಬುರುಗು ಉತ್ಪನ್ನವಾಗುತ್ತಿರುತ್ತದೆ. ಮೊದಲೇ ಭಾಗೀರಥಿಯ ಉದಕವು ಶುಭ್ರ. ಅದರಲ್ಲಿ ಬಿಳಿಯ ನೊರೆ. ದಂಡೆಯಮೇಲಿನ ಬಂಡೆಗಳೂ ಕಲ್ಲುಗಳೂ ಬಿಳಿಯವು. ಎದುರಿಗೆ ಕಾಣುವದೊಂದು ದಿನ್ನೆಯೆಲ್ಲ ಬಿಳಿಯಬಂಡೆಕಲ್ಲುಗಳಿಂದ ತುಂಬಿಹೋಗಿದ್ದು, ಆ ದಿನ್ನೆಯೊಳಗಿಂದ ಸಾವಿರಾರು ಶುಭ್ರಪ್ರವಾಹಗಳು ಹರಿದುಬಂದು ಕೆಳಗೆ ಕನಖಲತೀರ್ಥವನ್ನು ಸೇರುತ್ತವೆ. ಇದನ್ನೆಲ್ಲ ನೋಡಿ ಯಾವನ ಮನಸ್ಸು ಆಶ್ಚರ್ಯಮಗ್ನವಾಗಲಿಕ್ಕಿಲ್ಲ! ಈ ಕ್ಷೇತ್ರದ ನೆರೆಯಪ್ರದೇಶವು ಬಹು ಶಾಂತವಾದದ್ದು. ಅಲ್ಲಿ ಮನುಷ್ಯವಸತಿಯ ಗಂಧವು ಕೂಡ ಇರುವದಿಲ್ಲ. ಈ ಸ್ಥಾನವು ಸಮಾಧಿಗೂ, ಮನಸ್ಸಿನ ಏಕಾಗ್ರತೆಗೂ, ಶಾಂತಿಯ ಸಂಪಾದನೆಗೂ ಯೋಗ್ಯವಾದದ್ದು. ಇಂಥ ಅನಂತ ರಮ್ಯ ಕ್ಷೇತ್ರ-ತೀರ್ಥಗಳು ಹಿಮವಂತನನ್ನು ಆಶ್ರಯಿಸಿರುವದರಿಂದಲೂ, ಔನ್ನತ್ಯದಿಂದ ಆತನು ಇಡಿಯ ಪೃಥ್ವಿಯಲ್ಲಿ ಅಗ್ರೇಸರನಾಗಿರುವದರಿಂದಲೂ, ಆತನ ವಶದಲ್ಲಿ ಬಗೆಬಗೆಯ ಅಪರೂಪದ ಗಗನಚುಂಬಿತ ವೃಕ್ಷಗಳೂ, ವನಸ್ಪತಿಗಳೂ, ಓಷಧಿಗಳೂ ಇರುವದರಿಂದಲೂ, ಆತನು ಪುರಾಣಪ್ರಸಿದ್ಧನಾಗಿರುವದರಿಂದಲೂ ಆತನ ಕೀರ್ತಿಯ ಸ್ಮರಣವು ಹಿಂದೂ ಜನರ ಹೃತ್ಪಟಲದಲ್ಲಿ ಸ್ಥಿರವಾಗಿ ಉಳಿಯುತ್ತಿರುವದು ಆಶ್ಚರ್ಯವಲ್ಲ.

ಪ್ರಿಯವಾಚಕರೇ, ಇಂಥ ಗೌರವಶಾಲಿಯಾದ ಹಿಮವಂತನೊಳಗಿನ ಹರಿದ್ವಾರವೆಂಬ ಕ್ಷೇತ್ರದಲ್ಲಿಯೂ, ಪರಮ ಗೌರವಶಾಲಿಯಾದ ಭರತಭೂಮಿಯಲ್ಲಿಯೂ ನಾವು ಎರಡುವರೆ ಸಾವಿರ ವರ್ಷಗಳ ಹಿಂದೆ ವ್ಯವಹರಿಸುತ್ತಿದ್ದೆವೆಂದು ತಿಳಿಯುವಾ. ಆಗ ಭಗವಾನ್ ಬುದ್ಧದೇವನು ತನ್ನ ತಪೋಬಲದಿಂದ ಆಕಸ್ಮಿಕವಾಗಿ ಅಗಾಧಜ್ಞಾನವನ್ನು ಪಡೆದು ದಯಾಪರನಾಗಿ, ಕಾಶಿಯ ನೆರೆಯ ಪ್ರಾಂತದಲ್ಲಿ ಬೌದ್ಧಧರ್ಮವನ್ನು ಉಪದೇಶಿಸುತ್ತ ಸಂಚರಿಸುತ್ತಿದ್ದನು; ಸನಾತನವಾದ ವೇದಧರ್ಮವು ಹೀನಸ್ಥಿತಿಯನ್ನು ಹೊಂದುತ್ತಲಿತ್ತು; ದ್ವಿಜರೆನಿಸಿಕೊಳ್ಳುವ ಬಹು ಜನರು ಯಜ್ಞ ಯಾಗಾದಿಗಳ ನೆವದಿಂದ ಪ್ರಾಣಿಗಳ ಸಂಹಾರವನ್ನು ಮಿತಿಮೀರಿ

ಮಾಡತೊಡಗಿದ್ದರು; ಮಹಾತ್ಮರಾದ ಬ್ರಹ್ಮನಿಷ್ಠರ ಸಾನ್ನಿಧ್ಯದಿಂದ ದೇವತೆಗಳಿಗೆ ಹವಿರ್ಭಾಗವನ್ನು ಸಮರ್ಪಿಸಿ ಸ್ವಪರಹಿತವನ್ನು ಸಾಧಿಸುವ ಯಜ್ಞದ ಸದುದ್ದೇಶದ ಸದ್ದು ಅಡಗಿ, ದಾಂಭಿಕತನದಿಂದ ಮಂದಿಯ ಕಣ್ಣುಗಳಲ್ಲಿ ಮಣ್ಣು ತುಂಬಿ ವಿಷಯವಾಸನೆಯನ್ನು ಪೂರ್ಣ ಮಾಡಿಕೊಳ್ಳುವ ನೀಚತನವು ನೋಡಿದತ್ತಲ್ಲ ಕಣ್ಣಿಗೆಬೀಳಹತ್ತಿತ್ತು; ನಿಸ್ಪ್ರಹತೆಯ ತೇಜಸ್ಸಿನಿಂದಲೂ, ದಿವ್ಯಜ್ಞಾನದ ಮಹಿಮೆಯಿಂದಲೂ ಲೋಕಪೂಜ್ಯತೆಯನ್ನು ಪಡೆಯುವ ಋಷಿಗಳ ಮಂಡಲವು ಅದೃಶ್ಯವಾಗಿ, ಅದರ ಸ್ಥಳದಲ್ಲಿ, ಐಹಿಕ ಸುಖದ ಆಶೆಯಿಂದ ಅಂಧತ್ವವನ್ನು ಪಡೆದು, ಮಿಥ್ಯಾಜ್ಞಾನದ ಮಾಲಿನ್ಯದಿಂದ ತಿರಸ್ಕರಣೀಯವಾಗಿದ್ದ ನಾಮಧಾರಿ ಬ್ರಾಹ್ಮಣ ವರ್ಗವು ತಲೆದೋರಹತ್ತಿತ್ತು. "ಸರ್ವಂ ವಿಷ್ಣುಮಯಂಜಗತ್" ಎಂಬ ಭಗವದ್ಭಕ್ತರ ಉಕ್ತಿಯಂತೆ, ಜಗತ್ತು ಈಶ್ವರ ಸ್ವರೂಪವೆಂದು ತಿಳಿದು ಅತ್ಯಂತ ಲೀನತೆಯಿಂದ ವರ್ತಿಸುವ ಸಾತ್ವಿಕ ದ್ವಿಜರ ಲೀನಭಾವವು ಅಳಿದು ಹೋಗಿ, ಅದರ ಸ್ಥಳವನ್ನು, ಜಗತ್ತು ತನ್ನ ಸುಖಕ್ಕಾಗಿಯೇ ಇರುತ್ತದೆಂಬ ನಾಸ್ತಿಕರ ಅಹಂಭಾವವು ಆಕ್ರಮಿಸತೊಡಗಿತ್ತು. ಜನರ ಹೃದಯದಲ್ಲ ಭೂತದಯೆಯ ಗಂಧವಿದ್ದಿಲ್ಲ. ನೋಡಿದತ್ತಲ್ಲ ಲೋಭ-ಮಾತ್ಸರ್ಯ-ಕ್ರೌರ್ಯ-ಸಂತಾಪಗಳಿಂದ ಜನರು ಪೀಡಿತರಾಗಿದ್ದರು. ಈ ವಿಪನ್ನಸ್ಥಿತಿಯನ್ನು ನೋಡಿ ಮಹಾತ್ಮನಾದ ಬುದ್ಧದೇವನ ಹೃದಯವು ಕರಗಿ ಹೋಗಿ, ಆತನಿಂದ ಅಹಿಂಸಾ ಧರ್ಮವು ಸ್ಥಾಪಿಸಲ್ಪಟ್ಟಿತು. ಅದನ್ನೇ ಬೌದ್ಧಧರ್ಮವೆಂದು ಕರೆಯುವರು. ಬುದ್ಧನು ಜಾತಿಭೇದವನ್ನು ತೆಗೆದುಹಾಕಿದ್ದರಿಂದ ಬೌದ್ಧ ಧರ್ಮವು ದಿನದಿನಕ್ಕೆ ಹಬ್ಬಹತ್ತಿತು. ಬರಬರುತ್ತ ಬ್ರಾಹ್ಮಣಧರ್ಮವು ಕಳೆಗುಂದಹತ್ತಿ, ಸತ್ವಸ್ಥ ಬೌದ್ಧ ಭಿಕ್ಷುಗಳಮುಂದೆ ಕರ್ಮಠರಾದ ಡಾಂಭಿಕ ಬ್ರಾಹ್ಮಣರು ತೇಜೋಹೀನರಾಗಿ ತೋರಹತ್ತಿದರು; ಆದರೆ ಸೃಷ್ಟಿಯ ಸಾಮಾನ್ಯ ನಿಯಮವನ್ನನುಸರಿಸಿ ಬರಬರುತ್ತ ಬೌದ್ಧಧರ್ಮವೂ ಹೀನತೆಯನ್ನು ಹೊಂದತೊಡಗಲು, ಬುದ್ಧನು ಅವತರಿಸಿ ಇನ್ನೂರಾಐವತ್ತು ವರ್ಷಗಳಾಗುವಷ್ಟರಲ್ಲಿ ಧರ್ಮಮೂಢರಾದ ಬ್ರಾಹ್ಮಣರೂ, ಧರ್ಮಮೂಢರಾದ ಬೌದ್ಧರೂ ತಮ್ಮ ತಮ್ಮ ಧರ್ಮಗಳ

ನಿಜವಾದ ತತ್ವಗಳಂತೆ ನಡೆಯಲಾರದೆ, ದುರಭಿಮಾನದಿಂದ ಬಡಿದಾಡ ಹತ್ತಿದರು. ಬೌದ್ಧಧರ್ಮದಲ್ಲಿಯೂ ಮತಭೇದಗಳುಂಟಾಗಿ ಪರಸ್ಪರ ಕಲಹಗಳು ಬೆಳೆಯಹತ್ತಿದವು. ಬೌದ್ಧಧರ್ಮದ ತತ್ವಗಳಂತೆ ಆಚರಣೆಯು ತೋರದಾಯಿತು. ಎಷ್ಟೋಜನ ಬ್ರಾಹ್ಮಣರು ಬೌದ್ಧಭಿಕ್ಷುಗಳ ವೇಷದಿಂದ ಪ್ರತಿಷ್ಠೆಯನ್ನು ಪಡೆದು ಜೀವಿಸಹತ್ತಿದರು.

ಇಂಥ ಧರ್ಮಸಂಕರಕಾಲದಲ್ಲಿಯೂ, ಚಿದಾನಂದಸ್ವಾಮಿಗಳಂಥ ತಪೋಧನರು ಅರಣ್ಯಮಧ್ಯದೊಳಗಿನ ಆಶ್ರಮಗಳಲ್ಲಿ ವೇದಧರ್ಮದ ಆಧಾರಸ್ತಂಭಗಳಂತೆ ಶಿಷ್ಯವೃಂದದೊಡನೆ ಅಪರೂಪವಾಗಿ ವಾಸಿಸುತ್ತಿದ್ದರು. ಚಿದಾನಂದ ಸ್ವಾಮಿಗಳ ಆಶ್ರಮವು ಹರಿದ್ವಾರದೊಳಗಿನ ಕನಖಲತೀರ್ಥದ ನೆರೆಯಲ್ಲಿತ್ತು. ಬೌದ್ಧಧರ್ಮದ ಸಂರಕ್ಷಕನೂ, ಪ್ರಚಾರಕನೂ, ಪ್ರತಿಪಾಲಕನೂ ಆದ ಸಾಮ್ರಾಟ್ ಅಶೋಕನೂ, ಬೇರೆ ಧರ್ಮನಿರತ ಬೌದ್ಧರೂ ಕೂಡ ಚಿದಾನಂದ ಸ್ವಾಮಿಗಳಲ್ಲಿ ಪೂಜ್ಯಬುದ್ಧಿಯುಳ್ಳವರಾಗಿದ್ದರೆಂದಬಳಿಕ, ಸ್ವಾಮಿಗಳ ಯೋಗ್ಯತೆಯನ್ನೇನು ವರ್ಣಿಸುವದದೆ? ಸ್ವಾಮಿಗಳು ದಯಾಪರರೂ, ಸತ್ವಶೀಲರೂ, ನಿಸ್ಪೃಹರೂ, ಪರಧರ್ಮಸಹಿಷ್ಣುಗಳೂ ಆಗಿದ್ದರು. ಅವರಲ್ಲಿ ಶಾಂತಿಯು ತುಂಬಿ ತುಳುಕುತ್ತಿತ್ತು. ಕ್ಷಮಾಗುಣವು ಅವರ ಅಲಂಕಾರವಾಗಿತ್ತು. ಅವರು ಮೂರ್ತಿಮಂತ ಧರ್ಮವಾಗಿದ್ದರು. ಅವರ ತೇಜಃಪುಂಜವಾದ ಮುಖವನ್ನು ನೋಡಿದ ಮಾತ್ರದಿಂದ, ಮನುಷ್ಯಮಾತ್ರರಲ್ಲಿ ಪೂಜ್ಯಬುದ್ಧಿಯು ಉತ್ಪನ್ನವಾಗುತ್ತಿತ್ತು. ಇಂಥ ಮಹಾಪುರುಷರಿಂದಲೇ ವೇದಧರ್ಮದ ಗೌರವವು ಬೌದ್ಧರ ದೃಷ್ಟಿಯಿಂದಲೂ ಪ್ರಸ್ಥಾಪಿತವಾಗಿತ್ತೆಂದು ಹೇಳಬಹುದು. ಆ ಕಾಲದ ಬ್ರಾಹ್ಮಣ-ಕ್ಷತ್ರಿಯ ಕುಮಾರರು ಚಿದಾನಂದರ ಆಶ್ರಮವನ್ನು ಹೊಂದಿ ಸತ್ಸಮಾಗಮದ ಲಾಭವನ್ನು ಪಡೆಯುತ್ತಿದ್ದರಲ್ಲದೆ, ಪವಿತ್ರಬ್ರಹ್ಮಚರ್ಯವ್ರತದ ಪಾಲನದಿಂದಲೂ, ಸ್ವಾಮಿಗಳ ಸಚ್ಛಿಕ್ಷಣದಿಂದಲೂ ಸತ್ವಶೀಲರೂ, ಬಲಶಾಲಿಗಳೂ ಆಗುತ್ತಿದ್ದರು. ಆಗಿನ ಕಾಲದಲ್ಲಿ ವಿದ್ಯಾರ್ಥಿಗಳ ಸತ್ವಪೋಷಣಮಾಡುವ ಶ್ರೇಷ್ಠತಮ ಗುರುಕುಲವು ಚಿದಾನಂದರ ಆಶ್ರಮವೇ ಆಗಿತ್ತೆಂದು ಹೇಳಬಹುದು. ಕಲಿಂಗಾದಿ ದೇಶಗಳ ಪ್ರಸಿದ್ಧ ಹಿಂದೂರಾಜರ್ಕ ಹಾಗು ಸಣ್ಣ ದೊಡ್ಡ ಹಿಂದೂ ಸಂಸ್ಥಾನಿಕರ ಭಕ್ತಿಗೂ, ಅಭಿಮಾನಕ್ಕೂ

ಚಿದಾನಂದರು ಪಾತ್ರರಾಗಿದ್ದರು. ಸ್ವಾಮಿಗಳ ಇಚ್ಛೆಯನ್ನು ಪೂರ್ಣಮಾಡಿ ಧನ್ಯರಾಗುವ ವಿಷಯದಲ್ಲಿ ಹಿಂದೂ ರಾಜರು ತತ್ಪರರಾಗಿರುತ್ತಿದ್ದರು; ಆದರೆ ಸ್ವಾಮಿಗಳ ನಿಸ್ಪೃಹತೆಯ ಮೂಲಕ ಅಂಥ ಸುಯೋಗವು ಬಹು ಸ್ವಲ್ಪ ಜನರ ಪಾಲಿಗೆ ಮಹದ್ಭಾಗ್ಯ ರೂಪದಿಂದ ಒದಗುತ್ತಿತ್ತು! ಪ್ರಸಿದ್ಧ ಕಲಿಂಗ ದೇಶದ ರಾಜನಾದ ಮೃಗೇಂದ್ರನು ಸ್ವಾಮಿಗಳ ಪಟ್ಟಶಿಷ್ಯನೆನಿಸುತ್ತಿದ್ದನು. ಮೃಗೇಂದ್ರನ ಮಗನಾದ ಜಿತೇಂದ್ರ-ರಾಜಕುಮಾರನು ಉಪನಯನವಾದಂದಿನಿಂದಲೇ ಚಿದಾನಂದ ಸ್ವಾಮಿಗಳ ಆಶ್ರಮದಲ್ಲಿರುತ್ತಿದ್ದನು. ಮಹತ್ವದ ರಾಜಕಾರಣವು ಒದಗಿದಾಗ, ಇಲ್ಲವೆ ಗುರುದರ್ಶನೇಚ್ಛೆಯು ಉತ್ಪನ್ನವಾದಾಗ ಸ್ವತಃ ಮೃಗೇಂದ್ರನು ಹರಿದ್ವಾರಕ್ಕೆ ಬರುತ್ತಿದ್ದನು.

ಒಂದು ದಿನ ಚಿದಾನಂದ ಸ್ವಾಮಿಗಳ ಪರ್ಣಕುಟೀರದ ಮುಂದಿನ ವಿಶಾಲವಾದ ಪಟಾಂಗಣದಲ್ಲಿ ಶಿಷ್ಯವೃಂದವು ನೆರೆದದೆ; ಸೂರ್ಯನ ಮುಂಜಾವಿನ ಹೊಂಬಣ್ಣದ ಕಿರಣಗಳು, ದಟ್ಟವಾದ ಗಿಡಗಳಲ್ಲಿಯು ಸದುವು ನೋಡಿ ನುಗ್ಗಿ ಪಟಾಂಗಣವನ್ನು ಚಿತ್ರಿತವಾಗಿ ಮಾಡತೊಡಗಿವೆ; ಹೋಮಧೂಮದ ಸುಗಂಧವೂ, ಗುಗ್ಗುಳಾದಿ ಧೂಪಗಳ ಸುವಾಸನೆಯೂ ಆಶ್ರಮ-ಪ್ರದೇಶದಲ್ಲಿ ನಾಲ್ಕೂಕಡೆಗೆ ಪಸರಿಸಿವೆ; ಮಾನ್ಯರಿಗೆ ಕುಳಿತುಕೊಳ್ಳುವದಕ್ಕಾಗಿ ಅಲ್ಲಲ್ಲಿ ಆಸನಗಳನ್ನು ಹಾಕಿದೆ; ಸುಂದರವಾದ ರಂಗವಲ್ಲಿಗಳಿಂದಲೂ, ಹರಿದ್ರಾ ಕುಂಕುಮಾದಿಗಳ ಅನುಲೇಪನದಿಂದಲೂ ಪಟಾಂಗಣವು ಮಂಗಲಕರವಾಗಿ ಒಪ್ಪುತ್ತಲಿದೆ; ಆಶ್ರಮಸ್ಥಳದಲ್ಲಿದ್ದ ಉನ್ನತವೃಕ್ಷಗಳು ಮಂದ ಮಾರುತನಿಂದ ಮೆಲ್ಲ ಮೆಲ್ಲನೆ ಅಲ್ಲಾಡುತ್ತಲಿವೆ; ಅದೇ ನೀರುಹಾಕಿದ್ದರಿಂದ ಹೂವಿನ ಗಿಡಬಳ್ಳಿಗಳು ಮಲಮಲ ಅನ್ನುತ್ತ, ವಿರಲವಾದ ಹೂಬಿಸಿಲಿನಿಂದ ಮಿರಿಮಿರಿ ಮಿಂಚುತ್ತ, ಮಮತೆಯುಳ್ಳ ತಾಯಿಯಿಂದ ಉಣಿಸಲ್ಪಟ್ಟ ಹಸುಮಕ್ಕಳಂತೆ ಉಲ್ಲಾಸವನ್ನು ಬೀರುತ್ತಲಿವೆ; ಆಕಳು, ಚಿಗರಿ, ನವಿಲು, ಸಾರಂಗ ಮೊದಲಾದ ಸಾತ್ವಿಕಪ್ರಾಣಿಗಳು ಸ್ವೇಚ್ಛೆಯಿಂದ ಅಲ್ಲಲ್ಲಿ ಸಂಚರಿಸುತ್ತ, ಇದು ಕೇವಲ ನಿರುಪದ್ರವಸ್ಥಾನವೆಂಬ ಭಾವವನ್ನು ವ್ಯಕ್ತಮಾಡುತ್ತಲಿವೆ; ವನರಾಜನೆನಿಸುವ ಸಿಂಹವು ತನ್ನ ಕ್ರೂರಸ್ವಭಾವವನ್ನು ಬಿಟ್ಟು ಗಾಂಭೀರ್ಯದಿಂದ ನಿಂತುಕೊಂಡು, ಜಿತೇಂದ್ರನೆಂಬ ಕಲಿಂಗರಾಜಪುತ್ರನು ತನ್ನ ಬೆನ್ನಮೇಲೆ ಕಯ್ಯಾ

ಡಿಸುತ್ತ, ಹೆಗಲಮೇಲಿನ ಕೂದಲುಗಳ ತೊಡಕುಬಿಡಿಸುತ್ತಿರಲು, ಬಾಲವನ್ನು ಅಲ್ಲಾಡಿಸುತ್ತ ಪ್ರೇಮವನ್ನು ವ್ಯಕ್ತಮಾಡುತ್ತಲಿದೆ; ತಪೋಧನರಾದ ಬ್ರಾಹ್ಮಣರು ಒಬ್ಬೊಬ್ಬರೇ ಬಂದು ಆಸನಗಳ ಮೇಲೆ ಕುಳಿತುಕೊಳ್ಳಹತ್ತಿದ್ದಾರೆ; ಅಷ್ಟರಲ್ಲಿ ಕಲಿಂಗಾಧಿಪತಿಯಾದ ಮೃಗೇಂದ್ರನು, ಅತ್ಯಂತ ಲೀನತೆಯಿಂದ ತಮ್ಮನ್ನು ಹಿಂಬಾಲಿಸಿ ಬರುತ್ತಿರಲು, ಕೇವಲ ಶಾಂತಿಯ ರಾಶಿಯೋ, ಸತ್ವದ ನಿಧಿಯೋ, ಭೂತದಯೆಯ ಭಾಂಡಾರವೋ ಅನ್ನುವಂತೆ, ಶಿಷ್ಯರಿಂದ ಸುತ್ತಿದವರಾಗಿ ಚಿದಾನಂದ ಸ್ವಾಮಿಗಳು ಆ ಪಟಾಂಗಣದ ಕಡೆಗೆ ಬರತೊಡಗಿದರು. ಅವರ ಆವುಗೆಗಳ ಸಪ್ಪಳವಾಗಲು, ಪಟಾಂಗಣದಲ್ಲಿದ್ದವರೆಲ್ಲರು ಅತ್ಯಂತ ಭಕ್ತಿಯಿಂದ ಅವರನ್ನು ನೋಡತೊಡಗಿದರು. ಸ್ವಾಮಿಗಳು ಅದೇ ಪ್ರಾತಃಕಾಲದ ನಿತ್ಯಕರ್ಮಗಳನ್ನು ತೀರಿಸಿಕೊಂಡು ಬಂದವರಾದ್ದರಿಂದ, ಅವರ ಕಣ್ಣುಗಳು ಹೋಮ ಧೂಮದಿಂದ ಸ್ವಲ್ಪ ಕೆಂಪಾಗಿದ್ದವು. ಅವರು ಮೈಗೆ ಹಚ್ಚಿಕೊಂಡಿದ್ದ ವಿಭೂತಿಯು ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಅಳಿಸಿದಂತೆ ಆಗಿತ್ತು. ಪ್ರಾತಸ್ಸಂಧ್ಯೋಪಾಸನಾದಿಗಳಿಂದ ಅವರ ಮುಖಮಂಡಲವು, ಷೋಡಶಕಲಾಯುಕ್ತನಾದ ಚಂದ್ರಮನಂತೆ ಪ್ರಕಾಶಮಾನವಾಗಿಯೂ, ಆಲ್ಹಾದಕರವಾಗಿಯೂ ಒಪ್ಪುತ್ತಿತ್ತು. ಆ ದಿನ ಕಲಿಂಗಾಧಿಪತಿಯು ಬಂದದ್ದರಿಂದ, ಸ್ವಾಮಿಗಳ ಮುಖಚಂದ್ರಮನಿಗೆ ವಸಂತೋದಯವಾದಂತಾಗಿತ್ತು. ಪಟಾಂಗಣದಲ್ಲಿದ್ದವರೆಲ್ಲರು ಪ್ರತ್ಯುತ್ಥಾನಾದಿಗಳಿಂದ ಸತ್ಕರಿಸುತ್ತಿರಲು, ಚಿದಾನಂದಸ್ವಾಮಿಗಳು ಬ್ರಹ್ಮಭಾವನೆಯಿಂದ ಎಲ್ಲರನ್ನು ವಿನಯದಿಂದ ನಮಿಸುತ್ತ, ಮುಖದಲ್ಲಿ ಮೃದುಹಾಸವು ಒಪ್ಪುತ್ತಿರಲು, ಶಿಷ್ಯಮಂಡಲವನ್ನು ವಾತ್ಸಲ್ಯದಿಂದ ನೋಡುತ್ತ, ಮೃಗೇಂದ್ರನಿಗೆ ಯೋಗ್ಯವಾದ ಪೀಠವನ್ನು ತೋರಿಸುತ್ತ, ಎಲ್ಲ ಬ್ರಾಹ್ಮಣ ಸಮೂಹಕ್ಕೆ ಕುಳಿತುಕೊಳ್ಳಲು ವಿಜ್ಞಾಪಿಸುತ್ತ ತಮ್ಮ ಆಸನದ ಮೇಲೆ ಕುಳಿತುಕೊಂಡರು. ಆಗ ಆ ಪಟಾಂಗಣವು, ದೇವೇಂದ್ರನು ಬಂದಿರಲು, ಬ್ರಹ್ಮಋಷಿಮಂಡಲದಿಂದೊಪ್ಪುವ ಬ್ರಹ್ಮದೇವನ ಸಭಾಸ್ಥಾನದ ಸ್ಮರಣವನ್ನು ಮಾಡಿಕೊಡುತ್ತಿತ್ತು.

ಸಭೆಯು ನಿಶ್ಶಬ್ದವಾಗಿರಲು, ಭಾಸ್ಕರಪಂಡಿತನೆಂಬ ಒಬ್ಬ ಬ್ರಾಹ್ಮಣನು ಸ್ವಾಮಿಗಳನ್ನು ಕುರಿತು—ಮಹಾತ್ಮರೆ, ವೇದಧರ್ಮಾಭಿಮಾನಿಯಾದ

ಪ್ರಸಿದ್ಧ ಚಂದ್ರಗುಪ್ತನ ಮೊಮ್ಮಗನೆನಿಸಿದ ಅಶೋಕರಾಜನು ಬೌದ್ಧ ಧರ್ಮವನ್ನು ಸ್ವೀಕರಿಸಿದ್ದರಿಂದ, ವೇದಧರ್ಮವು ಕಳೆಗುಂದಲಿಕ್ಕೆ ಕಾರಣವಾಯಿತು. ಮೊದಲೇ ದುಷ್ಟ ಬೌದ್ಧರ ಕಾಟವು ಬಹಳವಾಗಿದೆ. ಅದರಲ್ಲಿ ಅಶೋಕನಂಥ ಪರಾಕ್ರಮಿಯಾದ ವೈದಿಕ ಅರಸನು ಧರ್ಮಾಂತರಮಾಡಿ ಅವರನ್ನು ಕೂಡಿದ ಬಳಿಕ ಕೇಳುವದೇನು? ಬ್ರಾಹ್ಮಣ್ಯವು ಭರದಿಂದ ನಷ್ಟವಾಗಹತ್ತಿರುವದು. ನೀಚರಾದ ಬೌದ್ಧಶ್ರವಣರ ಮಾತು ಕೇಳಿ ಬೌದ್ಧಧರ್ಮವನ್ನು ಹಬ್ಬಿಸುವ ಉದ್ದೇಶದಿಂದ ಅಶೋಕನು ವೇದಧರ್ಮದ ಅರಸರ ರಾಜ್ಯಗಳನ್ನು ಒಂದರ ಹಿಂದೊಂದು ಕೈಸೇರಿಸಿಕೊಂಡು, ಆ ರಾಜ್ಯದೊಳಗಿನ ಪ್ರಜೆಗಳನ್ನು ಒತ್ತಾಯದಿಂದ ಬೌದ್ಧರನ್ನು ಮಾಡತೊಡಗಿರುವನು ಈಗ ಈ ಸಭಾಸ್ಥಾನವನ್ನು ತನ್ನ ಕ್ಷಾತ್ರತೇಜಸ್ಸಿನಿಂದ ಅಲಂಕರಿಸುತ್ತಿರುವ ಕಲಿಂಗಾಧಿಪತಿಯಾದ ಮೃಗೇಂದ್ರರಾಜನ ಹೊರತು, ಅಶೋಕನನ್ನು ತಡೆಯುವ ರಾಜರು ಈ ಭರತಭೂಮಿಯಲ್ಲಿ ಮತ್ತೊಬ್ಬರು ಉಳಿಯಲಿಲ್ಲ. ಅಶೋಕನ ಪಾಲಿಗೆ ಕಲಿಂಗ ವಿಜಯವು ಕಡೆಯ ವಿಜಯವಾಗಿ ಉಳಿದಂತಾಗಿರುತ್ತದೆ. ಆತನು ಆ ರಾಜ್ಯವನ್ನಷ್ಟು ಗೆದ್ದುಬಿಟ್ಟನೆಂದರೆ, ಚಕ್ರವರ್ತಿಯ ಪದವಿಯನ್ನು ಹೊಂದುವನು. ಈ ಕಲಿಂಗದೇಶಾಧಿಪತಿಯೊಬ್ಬನೇ ಅಶೋಕನ ಆ ಘನತರವಾದ ಚಕ್ರವರ್ತಿ ಪದವಿಗೆ ಅಡ್ಡಾಗಿದ್ದಾನೆ. ಅಶೋಕನು ಮೊದಲು ಸುತ್ತಲಿನ ಸಣ್ಣ ಸಣ್ಣ ರಾಜ್ಯಗಳನ್ನು ಗೆದ್ದು, ಈಗ ಬಲಾಢ್ಯ ಹಿಂದೂರಾಜ್ಯವಾದ ಕಲಿಂಗಕ್ಕೆ ಕೈಹಾಕಬೇಕೆಂದು ಹವಣಿಸ ಹತ್ತಿದ್ದಾನೆ. ಆದರೆ ಮಹಾತ್ಮರಾದ ತಪೋಧನರೆ, ತಮ್ಮಂಥವರ ಕೃಪೆಗೆ ಪಾತ್ರನಾಗಿರುವ ಈ ಮೃಗೇಂದ್ರನಿಗೆ ಸೋಲು ಬರಲಾರದೆಂಬ ನಂಬುಗೆಯು ನಮ್ಮೆಲ್ಲರಿಗಿದ್ದರೂ, ಅಶೋಕನ ಈ ನಿಷ್ಕಂಟಕವಾದ ವಿಜಯವೈಭವವನ್ನು ನೋಡಿ ನಮ್ಮೆಲ್ಲರ ಹೃದಯಗಳು ತಲ್ಲಣಿಸಹತ್ತಿವೆ. ಕಲಿಂಗವೊಂದನ್ನು ಅಶೋಕನು ಗೆದ್ದುಬಿಟ್ಟನೆಂದರೆ, ಬ್ರಾಹ್ಮಣ್ಯವು ತೀರ ನಿರಾಧಾರವಾ ದಂತಾಗಿ, ಭರತಭೂಮಿಯು ಬೌದ್ಧಮಯವಾಗುವದು. ಬುದ್ಧನು ಜಾತಿಭೇದವಿಲ್ಲದೆ ಎಲ್ಲರಿಗೂ ಸರಿಯಾಗಿ ತನ್ನ ಧರ್ಮವನ್ನು ಬೋಧಿಸಿದ್ದರಿಂದ ಅತಿ ವೇಗದಿಂದ ಹಬ್ಬಿದ ಆ ಧರ್ಮಕ್ಕೆ, ಅಶೋಕನಂಥ ಚಕ್ರವರ್ತಿಯು ಆಶ್ರಯಕೊಟ್ಟ ಬಳಿಕ ಕೇಳುವದೇನು? ಕಥೆಯೇ ಮುಗಿಯುವದು. ಬ್ರಾಹ್ಮ

ಣ್ಯವು ತೀರ ನಷ್ಟವಾಗಬೇಕೆಂತಲೂ, ಸನಾತನವಾದ ವೈದಿಕಧರ್ಮವು ಲುಪ್ತವಾಗಬೇಕೆಂತಲೂ ಈಶ್ವರನ ಸಂಕೇತವಿರಬಹುದೋ? ಅಂತೇ ಈವೊತ್ತಿನವರೆಗೆ ಯಾವ ಬಲಾಢ್ಯ ರಾಜನಿಗೂ ದೊರೆಯದ ಚಕ್ರವರ್ತಿಯ ಪದವಿಯು ಅಶೋಕನ ಕೊರಳಿಗೆ ಬೀಳುವದಕ್ಕಾಗಿ ಹಾದಿಯನ್ನು ನೋಡುತ್ತಲಿದೆ! ಅಶೋಕನ ಅಜ್ಜನಾದ ಚಂದ್ರಗುಪ್ತನು ದುರ್ಬಲನೆ? ಆತನ ಮಂತ್ರಿಗಳೆನಿಸಿದ ಚಾಣಕ್ಯ-ರಾಕ್ಷಸರು ಬುದ್ಧಿಹೀನರೇ? ಈಗ ಸನ್ನಿಧಿಯಲ್ಲಿ ಕುಳಿತಿರುವ ಮೃಗೇಂದ್ರನು ಪೌರುಷಹೀನನೇ? ಚಂದ್ರಗುಪ್ತನು ಎಷ್ಟು ಯತ್ನಿಸಿದರೂ, ಚಕ್ರವರ್ತಿಯ ಪದವಿಯನ್ನು ಪಡೆಯಲಿಲ್ಲ. ಅಂಥ ದುರ್ಮಿಳವಾದ ಪದವಿಯು ಬೌದ್ಧ ಭೂಪತಿಯೆನಿಸುವ ಅಶೋಕನಿಗೆ ದೊರೆಯುವದೆಂದಬಳಿಕ, ಭರತಖಂಡವು ಬೌದ್ಧಮಯವಾಗುವ ಯೋಗವು ಸಮೀಪಿಸಿರುವದೆಂದು ತಿಳಿಯಬೇಕಾಗಿರುವದು.

ಭಾಸ್ಕರಪಂಡಿತನ ಈ ಮಾತುಗಳನ್ನು ಕೇಳಿ ಚಿದಾನಂದಸ್ವಾಮಿಗಳು ಮುಗಳುನಗೆ ನಕ್ಕು ಒಮ್ಮೆ ಮೃಗೇಂದ್ರನನ್ನೂ, ಒಮ್ಮೆ ಬ್ರಹ್ಮವೃಂದವನ್ನೂ ನೋಡಿ ಭಾಸ್ಕರಪಂಡಿತನನ್ನು ಕುರಿತು ಗಾಂಭೀರ್ಯದಿಂದ ನುಡಿದರೇನಂದರೆ—ಪಂಡಿತರೆ, ನಿಮ್ಮ ಮಾತಿನಲ್ಲಿ ಸತ್ಯಾಂಶವು ಬಹಳವಿರುವದೆಂದು ನಾನು ತಿಳಿಯುವೆನು. ಬೌದ್ಧಧರ್ಮವು, ಒಂದು ಭರತಖಂಡದಲ್ಲಿಯೇ ಏಕೆ, ಅನ್ಯ ದೇಶಗಳಲ್ಲಿಯೂ, ದ್ವೀಪಾಂತರಗಳಲ್ಲಿಯೂ ಪಸರಿಸುವ ಯೋಗವಿರುತ್ತದೆಂದು ನನಗೆ ತೋರುತ್ತತೆ. ಆದರೆ ನಿಮ್ಮ ಕೆಲವು ವಿಚಾರಗಳನ್ನು ಕುರಿತು ಎರಡುಮಾತುಗಳನ್ನು ಆಡದೆ ಮಾತ್ರ ನಾನು ಇರಲಾರೆನು. ಅಶೋಕನು ಬೌದ್ಧಧರ್ಮವನ್ನು ಸ್ವೀಕರಿಸಿದ್ದರಿಂದ ವೇದಧರ್ಮವು ಕಳೆಗುಂದುವದೆಂಬ ಮಾತೂ, ಬುದ್ಧನು ನಾಸ್ತಿಕನೆಂಬ ಮಾತೂ, ಬೌದ್ಧಶ್ರವಣರು ನೀಚರೆಂಬ ಮಾತೂ, ನನ್ನ ಶಿಷ್ಯನೆನಿಸಿದ ಮಾತ್ರದಿಂದ ಮೃಗೇಂದ್ರನು ಜಯಶಾಲಿಯೇ ಆಗಬೇಕೆಂಬ ಮಾತೂ ಒಪ್ಪತಕ್ಕವಲ್ಲ. ಒಬ್ಬನ ಧರ್ಮಬುದ್ಧಿಯನ್ನು ಮತ್ತೊಬ್ಬನು ಸರ್ವಥಾ ಕೆಡಿಸಲಾರನು. ನಮ್ಮಲ್ಲಿ ನಮ್ಮ ಧರ್ಮದ ಭ್ರಷ್ಟಾಕಾರವಾದರೆ ಮಾತ್ರ, ಅನ್ಯರು ನಮ್ಮನ್ನು ಧರ್ಮಭ್ರಷ್ಟರನ್ನಾಗಿ ಮಾಡಬಹುದು. ನನ್ನ ಮಾತು ಕೆಲವರಿಗೆ ವ್ಯತ್ಯಾಸ

ವಾಗಿ ತೋರಿದರೂ, ನೀವೆಲ್ಲರೂ ಶಾಂತಚಿತ್ತದಿಂದ ಅದನ್ನು ಕೇಳಿಕೊಂಡು ಮನನಮಾಡಿರಿ; ಅಂದರೆ ಅವುಗಳಲ್ಲಿಯ ಸತ್ಯತೆಯು ನಿಮ್ಮ ಅನುಭವಕ್ಕಾದರೂ ಬರಬಹುದು. ಭೂತದಯೆ, ಪರೋಪಕಾರ, ಅಹಿಂಸೆ, ಶಾಂತಿ, ಕ್ಷಮೆ ಮೊದಲಾದ ನೈತಿಕತತ್ವಗಳನ್ನು ಪ್ರತ್ಯಕ್ಷಾಚರಣೆಯಿಂದ ಇಡಿಯ ಮನುಷ್ಯಜಾತಿಗೇ ಬೋಧಿಸಿ, ಮನುಷ್ಯಮಾತ್ರರನ್ನು ದುರ್ಮಾರ್ಗದಿಂದ ತಿರುಗಿಸುವ ಬುದ್ಧದೇವನು ಸಾಮಾನ್ಯನಲ್ಲ. ಜಾತಿಗೆಭೇದವಾದರೂ ನೀತಿಗೆ ಭೇದವಿಲ್ಲವಷ್ಟೆ? ನೀತಿಯು ಯಾವಧರ್ಮಕ್ಕೆಬೇಡ? ನೀತಿಭ್ರಷ್ಟರು ಯಾವ ಧರ್ಮದಮಾತನ್ನು ತಕ್ಕೊಂಡು ಏನು ಮಾಡಬೇಕು? ನೀತಿಯು ಎಲ್ಲ ಧರ್ಮಗಳ ಜೀವನವಾಗಿರುತ್ತದೆ. ಅದನ್ನು ಬೋಧಿಸುವ ಬುದ್ಧನು ನಾಸ್ತಿಕನು ಹೇಗೆ? ಇನ್ನು, ದೇವರ ಅಸ್ತಿತ್ವವನ್ನೂ, ದೇವರಮಹಿಮೆಯನ್ನೂ ಬುದ್ಧನು ಬೋಧಿಸದ್ದರಿಂದ ಆತನನ್ನು ನಾಸ್ತಿಕನೆಂದು ನೀವು ಕರೆಯುತ್ತಿರಬಹುದು; ಆದರೆ ದೇವರನ್ನು ಕಾಣದ ನಾವು ವೇದಧರ್ಮದವರೆನಿಸಿಕೊಂಡಮಾತ್ರದಿಂದ ದೇವರಿದ್ದಾನೆಂದು ಬಾಯಿಂದ ಹೇಳಿ, ವೇದ ಪುರಾಣಾದಿಗಳ ಆಧಾರದಿಂದ ಸಿದ್ಧಮಾಡಿಕೊಟ್ಟರೆ ಆಗುವ ಪ್ರಯೋಜನವೇನು? ಅದರಿಂದ ನಾವು ದೇವರನ್ನು ಕಂಡ ಹಾಗಾಯಿತೇ? ದೇವರನ್ನು ಕಾಣದೆ ಕೇಳಿಕೆಯ ಮಾತಿನಿಂದ ದೇವರು ಇದ್ದಾನೆಂದು ಹೇಳುವವನೊಬ್ಬನು ಮೂರ್ಖನು; ಅದರಂತೆ, ದೇವರನ್ನು ಕಂಡ ಮಹಾತ್ಮರೂ, ವೇದಾದಿ ಅಪೌರುಷೇಯ ಗ್ರಂಥಗಳೂ ದೇವರಿದ್ದಾನೆಂದು ಹೇಳುತ್ತಿರಲು, ಅದನ್ನು ಲೆಕ್ಕಿಸದೆ, ದೇವರಿಲ್ಲೆಂದು ಹೇಳುವವನೊಬ್ಬನೂ ಮೂರ್ಖನೇ; ಆದರೆ ಸತ್ಸಮಾಗಮದಿಂದ ತಮ್ಮ ತಮ್ಮ ಧರ್ಮಮಾರ್ಗಗಳಂತೆ ಭಾವನಾಯುಕ್ತರಾಗಿ ನಡೆದು ದೇವರನ್ನು ಕಾಣುವವರು ಮಾತ್ರ ಜಾಣರು ದೇವರನ್ನು ಕಾಣದೆ ಆತನು ಇದ್ದಾನೆಂದು ಹೇಳುವದೂ, ತಮಗೆ ಕಾಣದ್ದರಿಂದ ಇಲ್ಲೆಂದು ಹೇಳುವದೂ ಮೂರ್ಖತನವೆಂದಬಳಿಕ, ದೇವರನ್ನು ಕಾಣದ ಪಾಮರರನ್ನು ಕುರಿತು ಬುದ್ಧನು ದೇವರಿದ್ದಾನೆಂದೂ, ಆತನನ್ನು ಶರಣುಹೋಗಿರೆಂದೂ, ಆತನೇ ಸೃಷ್ಟಿಸ್ಥಿತಿಲಯಗಳಿಗೆ ಕಾರಣನೆಂದೂ ಬೋಧಿಸಿದರೆ ಆಗುವಪ್ರಯೋಜನವೇನು? ಅಂತೇ ಬುದ್ಧದೇವನು ಮೊದಲಿಗೆ ದೇವರ ಉಸಾಬರಿಗೆ ಹೋಗದೆ "ಭೂತದಯೆಯುಳ್ಳವ

ರಾಗಿರಿ" "ಪರೋಪಕಾರಿಗಳಾಗಿರಿ" "ಶಾಂತರಾಗಿರಿ" "ಬಂಧುಪ್ರೇಮವುಳ್ಳವ ರಾಗಿರಿ" "ಸದಾಚಾರಿಗಳಾಗಿರಿ" ಎಂದು ಬೋಧಿಸಿದ್ದರಲ್ಲಿ ನಾಸ್ತಿಕತ್ವವೇನಿರುವದು? ಬುದ್ಧನ ಉಪದೇಶದಂತೆ ನಡೆದ ಹೊರತು ಮನುಷ್ಯನಿಗೆ ದೇವರ ದರ್ಶನವೇ ಆಗುವಹಾಗಿಲ್ಲ. ಅದರಿಂದಲೇ ಬುದ್ಧನು ದೇವರನ್ನು ಕಾಣುವ ಮಾರ್ಗವನ್ನು ಮಾತ್ರಹೇಳಿದನು. ಜ್ಞಾನಿಗಳ ಸಹಾಯವನ್ನು ಪಡೆದು ಆ ಮಾರ್ಗದಿಂದ ಹೋಗಿ ದೇವರನ್ನು ಕಂಡಬಳಿಕ ದೇವರು ಇದ್ದಾನೆಂದು ಹೇಳಬಹುದು. ಇನ್ನು ಬುದ್ಧನು ಯಜ್ಞಯಾಗಾದಿ ಕರ್ಮಗಳನ್ನು ಹಳಿಯುವದೊಂದು ನಾಸ್ತಿಕತ್ವದ ಲಕ್ಷಣವೆಂದು ನೀವು ಹೇಳಬಹುದು; ಆದರೆ ಸದ್ಭಾವನೆಯಿಲ್ಲದೆ ಕೇವಲ ದಾಂಭಿಕತನದಿಂದ ಯಜ್ಞಯಾಗಾದಿ ಕರ್ಮಗಳನ್ನು ಮಾಡಿ ಪ್ರಾಣಿಹಿಂಸಾ ಪಾಪಕ್ಕೆ ಗುರಿಯಾಗುವದಕ್ಕಿಂತ, ಅದನ್ನು ಮಾಡದಿರುವದುಹಿತಕರವು. ತಿರುಗಿ ಕೇಳಿದರೆ, ವೇದಧರ್ಮದ ತತ್ವಗಳನ್ನು ಬುದ್ಧನು ಕಾಲಕ್ಕನುಸರಿಸಿ ಭಿನ್ನರೂಪದಿಂದ ಬೋಧಿಸಿದನೆಂದು ತಿಳಿಯಬೇಕು. ಜಗತ್ತು ಈಶ್ವರ ಸ್ವರೂಪವೆಂದು ಬೋಧಿಸುವ, ಹಾಗು "ತತ್ವಮಸಿ" "ಸೋಹಮಸ್ಮಿ" "ಅಹಂಬ್ರಹ್ಮಾಸ್ಮಿ" ಇತ್ಯಾದಿ ಮಹಾವಾಕ್ಯಗಳಿಂದ, ತಾನು ಮೊದಲುಗೊಂಡು ಸರ್ವ ಜಗತ್ತು ಬ್ರಹ್ಮಸ್ವರೂಪವೆಂದು ಬೋಧಿಸುವ ಉದಾತ್ತವಾದ ವೇದಧರ್ಮಕ್ಕೆ "ಅಹಿಂಸಾ" "ಭೂತದಯೆ" ಮೊದಲಾದನೈತಿಕ ತತ್ವಗಳು ಹೊಸವೋ? ಆದರೆ ವೇದಧರ್ಮಿಗಳು ವಿವೇಕಭ್ರಷ್ಟರಾಗಿ, ಆಸ್ತಿಕಧರ್ಮಕ್ಕೆ ನಾಸ್ತಿಕಸ್ವರೂಪವನ್ನು ಕೊಡುತ್ತಿರುವಾಗ, "ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ || ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ||" ಎಂಬ ಭಗವದುಕ್ತಿಯಂತೆ, ಭಗವಂತನೇ ದೇಶಕಾಲಪರಿಸ್ಥಿತಿಗನುಸರಿಸಿ ವೈದಿಕಧರ್ಮದ ಸುಲಭತತ್ವಗಳನ್ನು ಸಾರ್ವತ್ರಿಕವಾಗಿ ಬೋಧಿಸಲು ಬುದ್ಧರೂಪದಿಂದ ಅವತರಿಸಬೇಕಾಯಿತು. ಅದರಿಂದಲೇ ವಿಷ್ಣುವಿನ ದಶಾವತಾರಗಳಲ್ಲಿ ಬುದ್ಧಾವತಾರವು ಒಂಬತ್ತನೆಯ ಸ್ಥಾನವನ್ನು ಹೊಂದಿರುವದು.

ಇನ್ನು, ಅಶೋಕನು ಚಕ್ರವರ್ತಿಯಾಗಿ ಭರತಖಂಡವನ್ನು ಬೌದ್ಧಮಯವಾಗಿ ಮಾಡುವನೆಂದು ಭಾಸ್ಕರಪಂಡಿತರು ಹೇಳುವರು; ಆದರೆ ಇದಕ್ಕಾಗಿ ನಾವು ಅಸೂಯೆ ಪಡುವ ಕಾರಣವಿಲ್ಲ. ದ್ವಾಪರದಲ್ಲಿ ಶ್ರೀಕೃಷ್ಣನು ಉಪದೇ

ಶಿಸಿದ ಭಾಗವತ ಧರ್ಮವನ್ನು ಧರ್ಮರಾಜನು ಪ್ರಚುರಗೊಳಿಸಿದನು. ಧರ್ಮ ಪ್ರಸಾರವು ಸಾತ್ವಿಕರಿಂದಲೇ ಆಗುವದೆಂದಬಳಿಕ, ಪರಮ ಸತ್ವಶಾಲಿಯಾದ ಅಶೋಕನು ಭಗವಾನ್ ಬುದ್ಧನಿಂದ ಸ್ಥಾಪಿಸಲ್ಪಟ್ಟ ಬೌದ್ಧಧರ್ಮವನ್ನು ಭರತಭೂಮಿಯಲ್ಲಿಯೇ ಏಕೆ, ಜಗತ್ತಿನ ತುಂಬ ಹಬ್ಬಿಸಿದರೆ ಆಶ್ಚರ್ಯವೇನು? ಧರ್ಮಭ್ರಷ್ಟತೆಯ ಈಗಿನ ಕಾಲದಲ್ಲಿ ಬೌದ್ಧಧರ್ಮವು ಹೀಗೆ ಪ್ರಸರಣಹೊಂದುವದು ದೇವರಿಗೆ ಬೇಕಾಗಿಯೇ ಇರುವದು. ನಿಜವಾದ ಬೌದ್ಧರು ಬ್ರಾಹ್ಮಣರನ್ನೂ, ನಿಜವಾದ ಬ್ರಾಹ್ಮಣರು ಬೌದ್ಧರನ್ನೂ ಸರ್ವಥಾ ತಿರಸ್ಕರಿಸಲಾರರು. ಈಮಾತು ಅಶೋಕನ ಆಳಿಕೆಯಲ್ಲಿ ನಿಮ್ಮ ಅನುಭವಕ್ಕೆ ಬರುವದೆಂಬ ಭವಿಷ್ಯವಾಣಿಯನ್ನು ಈಶ್ವರನು ನನ್ನ ಮುಖದಿಂದ ಈಗ ನುಡಿಸುವನು; ಅದರ ಅನುಭವವನ್ನು ತಕ್ಕೊಳ್ಳಬಹುದು ಅಂದಬಳಿಕ ಬೌದ್ಧಶ್ರವಣರನ್ನು ನಾವು ನೀಚರೆಂದು ಯಾಕೆ ಹಳಿಯಬೇಕು? ಪ್ರತಿ ಒಂದು ಧರ್ಮದಲ್ಲಿ ನೀಚರೂ, ಉಚ್ಚರೂ ಕೂಡಿಯೇ ಇರುವರು. ಉಚ್ಚರ ಸಂಖ್ಯೆಯು ಹೆಚ್ಚಿದ ಮಾನದಿಂದ ಧರ್ಮವು ತೇಜಸ್ವಿತೆಯನ್ನು ಪಡೆಯುವದು; ನೀಚರ ಸಂಖ್ಯೆಯು ಹೆಚ್ಚಿದ ಮಾನದಿಂದ ಧರ್ಮವು ಗ್ಲಾನಿಯನ್ನು ಹೊಂದುವದು, ಆದರೆ ಧರ್ಮದ ನಿಜವಾದ ತತ್ವಗಳು ಎಂದೂ ನಾಶವನ್ನು ಹೊಂದಲಾರವು. ಎಲ್ಲ ಧರ್ಮಗಳಲ್ಲಿ ಒಂದೇ ರಹಸ್ಯವನ್ನು ಕಾಣುವವನೇ ಧರ್ಮನಿರತನು ಧರ್ಮಗ್ಲಾನಿಯಾದಾಗೆಲ್ಲ ಭಗವದವತಾರ[illegible] ಆಗುತ್ತ ಬಂದಿರುವವು; ಅದರಿಂದಲೇ ಸ್ವಧರ್ಮನಿಷ್ಠೆಯೂ, ಪರಧರ್ಮ ಸಹಿಷ್ಣುತೆಯೂ ಶ್ರೇಷ್ಠಗುಣಗಳೆಂದು ಎಣಿಸಲ್ಪಡುವವು. ಈ ಗುಣಗಳು ಮನುಷ್ಯನಲ್ಲಿ ಇದ್ದರೆ ಜೋಡಾಗಿಯೇ ಇರುತ್ತವೆ. ಇಲ್ಲದಿದ್ದರೆ ಒಂದೂ ಇರುವದಿಲ್ಲ. ಸ್ವಧರ್ಮನಿಷ್ಠೆಯಿಲ್ಲದ ಪರಧರ್ಮಸಹಿಷ್ಣುತೆಯೂ, ಪರಧರ್ಮಸಹಿಷ್ಣುತೆಯಿಲ್ಲದ ಸ ಧರ್ಮನಿಷ್ಠೆಯೂ ವ್ಯರ್ಥವು. ಅನುಭವದಿಂದ ಇವೆರಡು ಗುಣಗಳು ಭಿನ್ನ[illegible]ವುಗಳಲ್ಲವೆಂದು ಹೇಳಬಹುದು. ನಮ್ಮ ಸಿಷ್ಯನೆನಿಸುವ ಕಲಿಂಗ ಭೂಪತಿಯು ವೇದಧರ್ಮಾಭಿಮಾನಿಯೆಂದು ಯಾರಾದರೂ ಒಪ್ಪಿಕೊಳ್ಳಬಹುದು; ಆದರೆ ಆತನು ಅಶೋಕನಿಂದ ಪರಧರ್ಮಸಹಿಷ್ಣುತೆಯ ಬೋಧವನ್ನು ಪಡೆದ ಹೊರತು, ನಿಜವಾದ ವೇದಧರ್ಮನಿಷ್ಠೆಯು ಆತನಲ್ಲಿ ಉಂಟಾಗದು. ಈ ಮಾತು ಇಲ್ಲಿ ಕೂಡಿರುವ ತಪೋಧನ

ರಿಗೆ ಅಯೋಗ್ಯವಾಗಿ ತೋರದು; ಆದ್ದರಿಂದ, ಭಾಸ್ಕರಪಂಡಿತರಾಗಲಿ, ಕಲಿಂಗಾಧಿಪತಿಯಾಗಲಿ, ನಾನಾಗಲಿ, ನೀವಾಗಲಿ, ಯಾರೇ ಆಗಲಿ ಧರ್ಮದ ನಿಜವಾದ ರಹಸ್ಯಗಳನ್ನು ತಿಳಕೊಂಡರೆ ಮಾತ್ರ ಶಾಂತಿಯನ್ನು ಪಡೆಯಬಹುದು. ಇಲ್ಲದಿದ್ದರೆ ಧರ್ಮಗಳ ಬಾಹ್ಯ ಚಿಹ್ನಗಳ ಭಿನ್ನತ್ವಕ್ಕಾಗಿ ದುರಭಿಮಾನದಿಂದ ಬಡಿದಾಡಿ, ಧರ್ಮಹೀನರಂತೆ ತಾಪಕ್ಕೆ ಗುರಿಯಾಗಬೇಕಾಗುವದು.

———(೦)———

## ೨ನೆಯ ಪ್ರಕರಣ--ದಯೆಯ ಅಂಕುರ.



ಗುರುಗಳ ಈ ಉಪದೇಶದಿಂದ ಮೃಗೇಂದ್ರನಿಗೆ ಸಮಾಧಾನವಾಗಲಿಲ್ಲ. ವೇದಧರ್ಮದ ವಿಷಯವಾಗಿ ಆತನಲ್ಲಿ ಅಭಿಮಾನವು ಸಂಪೂರ್ಣವಾಗಿ ವಾಸಿಸುತ್ತಿದ್ದದ್ದರಿಂದ, ಆತನು ಬೌದ್ಧಧರ್ಮವನ್ನೂ, ಬೌದ್ಧರನ್ನೂ ಬಹಳವಾಗಿ ತಿರಸ್ಕರಿಸುತ್ತಿದ್ದನು. ದಿನದಿನಕ್ಕೆ ಬೌದ್ಧಧರ್ಮವು ಹಬ್ಬುತ್ತ ನಡೆದದ್ದರಿಂದಲೂ, "ವೇದಧರ್ಮದ ಪ್ರಸಿದ್ಧ ಅಶೋಕರಾಜನು ಬೌದ್ಧ ಧರ್ಮವನ್ನು ಸ್ವೀಕರಿಸಿ, ವೇದಧರ್ಮದವರ ರಾಜ್ಯಗಳನ್ನು ಒಂದರಹಿಂದೊಂದು ವಶಮಾಡಿಕೊಂಡು ಅಲ್ಲಿಯ ಜನರನ್ನು ಒತ್ತಾಯದಿಂದ ಬೌದ್ಧರನ್ನು ಮಾಡಹತ್ತಿದ್ದರಿಂದಲೂ ಬೌದ್ಧರ ವಿಷಯದ ಮೃಗೇಂದ್ರನ ದ್ವೇಷಾಗ್ನಿಯು ಭರದಿಂದ ಹೊತ್ತತೊಡಗಿತ್ತು. ಇಂಥ ಪ್ರಸಂಗದಲ್ಲಿ ಗುರುಗಳ ಸಮತೆಯ ಉಪದೇಶವು ಆತನಿಗೆ ಹೇಗೆ ಸೇರಬೇಕು? ಗುರುಗಳು ಬುದ್ಧದೇವನನ್ನೂ, ಆತನ ಧರ್ಮವನ್ನೂ, ಅಶೋಕನನ್ನೂ ಮೇಲುಗಟ್ಟಿ ಮಾತಾಡಿದ್ದು ಆತನ ಮನಸ್ಸಿಗೆ ಬರಲಿಲ್ಲ. ಗುರುಗಳ ಮೇಲಿನ ಶ್ರದ್ಧೆಯಮೂಲಕ ಅವರ ಮಾತಿನ ವಿರುದ್ಧ ಮಾತಾಡುವ ಧೈರ್ಯವು ಆತನಿಗಾಗಲಿಲ್ಲ. ದುರಾಚಾರಿಗಳಾದ ಬೌದ್ಧರನ್ನು ತಿರಸ್ಕರಿಸಿ, ಸ್ವಧರ್ಮವಾದ ವೇದಧರ್ಮವನ್ನು ರಕ್ಷಿಸುವ ವಿಷ

ಯವಾಗಿ ತನ್ನನ್ನು ಯಾವಾಗಲೂ ಉತ್ತೇಜನಗೊಳಿಸುತ್ತಿದ್ದ ಗುರುಗಳು, ಈ ದಿನ ಹೀಗೆ ಬೌದ್ಧರನ್ನು ಮೇಲುಗಟ್ಟಿ ಯಾಕೆ ಮಾತಾಡಿದರೆಂಬದರ ರಹಸ್ಯವು ಆತನಿಗೆ ತಿಳಿಯದಾಯಿತು. ರಾಜ್ಯಸುಖದಲ್ಲಿ ಮುಳುಗಿ, ಗುರುಸೇವೆಯಲ್ಲಿ ದೇಹವನ್ನು ಸವಿಸದೆ ಉಪಚಾರಕ್ಕಾಗಿ ಶಿಷ್ಯತ್ವವನ್ನು ಸ್ವೀಕರಿಸಿದ್ದ ಅಭಿಮಾನಿಯಾದ ಆ ಮೃಗೇಂದ್ರನಿಗೆ, ಧರ್ಮದ ರಹಸ್ಯವು ಹೇಗೆ ತಿಳಿಯಬೇಕು? ಆತನು ಔದಾಸೀನ್ಯದಿಂದ ಗುರುಗಳ ಅಪ್ಪಣೆಯನ್ನು ಪಡೆದು ತನ್ನ ರಾಜಧಾನಿಯಾದ ಇಂದ್ರಪುರಕ್ಕೆ ಹೋಗುವದಕ್ಕಾಗಿ ಹೊರಟನು. ಆತನ ಔದಾಸೀನ್ಯದ ಕಾರಣವನ್ನು ಚಿದಾನಂದ ಸ್ವಾಮಿಗಳು ಅರಿತಿದ್ದರೂ, ಅವರು ಬಾಯಿಬಿಚ್ಚಿ ಮಾತಾಡದೆ ಶಿಷ್ಯನನ್ನು ರಾಜಧಾನಿಗೆ ಹೋಗಗೊಟ್ಟರು. ಸತ್ಸಂಗವು ದೂರವಾದಂತೆ ಮಾರ್ಗದಲ್ಲಿ ಮೃಗೇಂದ್ರನ ಮನಸ್ಸು ವಿಕಾರವಶವಾಗುತ್ತ ನಡೆಯಿತು. ಬೌದ್ಧಧರ್ಮದ ಹೆಚ್ಚಳದ ಸ್ಮರಣದಿಂದ ಆತನು ಬೌದ್ಧರ ಮೇಲೆ ಬೆಂಕಿಯನ್ನು ಕಾರಹತ್ತಿದನು. ಸ್ವಧರ್ಮ ರಕ್ಷಣದಲ್ಲಿ ಪ್ರಾಣಹಾನಿಯಾದರೂ ಶ್ರೇಯಸ್ಕರವೆಂತಲೂ, ಬೌದ್ಧಧರ್ಮವನ್ನು ನಾಶಗೊಳಿಸುವದು ತನ್ನ ಕರ್ತವ್ಯವೆಂತಲೂ, ಇದರ ವಿರುದ್ಧವಾಗಿ ಪ್ರತ್ಯಕ್ಷ ಗುರುಗಳು ಬೋಧಿಸಿದರೂ ಕೇಳಲಿಕ್ಕಿಲ್ಲವೆಂತಲೂ ಆತನು ನಿಶ್ಚಯಿಸಿಕೊಂಡನು. ಅಶೋಕನನ್ನು ಹಣಿದು ಬೌದ್ಧರನ್ನು ನಾಶಗೊಳಿಸಿ, ಈ ನಾಸ್ತಿಕರ ಸೇಡು ಯಾವಾಗ ತೀರಿಸಿಕೊಂಡೇನೆಂದು ಆತನು ಆತುರಪಡಹತ್ತಿದನು. ಮೃಗೇಂದ್ರನ ಈ ಆತುರವು ವ್ಯರ್ಥವಾದದ್ದಿದ್ದಿಲ್ಲ. ಆ ಪ್ರಬುದ್ಧಕ್ಷತ್ರಿಯವೀರನ ಬಾಹುಬಲದ ಭಯವು ಅಶೋಕನಂಥ ಅಪ್ರತಿಮವೀರನಿಗೂ ಇತ್ತು. ಕಲಿಂಗದೇಶವು ಯಾವತ್ತು ವೇದಧರ್ಮಿಗಳ ರಾಜ್ಯಗಳಲ್ಲಿ ಬಲಿಷ್ಠವಾದದ್ದಿದ್ದು, ಅದು ವಿಶಾಖಾನಂದನಂಥ ಚತುರಮಂತ್ರಿಯ ಮಂತ್ರಾಲೋಚನೆಯಿಂದ ವೈರಿಗಳಿಗೆ ದುರ್ಗಮವಾಗಿತ್ತು. ಸುತ್ತುಮುತ್ತಲಿನ ಸಣ್ಣಪುಟ್ಟ ಮಾಂಡಲಿಕ ರಾಜ್ಯಗಳನ್ನು ಕೈಸೇರಿಸಿಕೊಂಡಬಳಿಕ, ಮುಖ್ಯವಾದಕಲಿಂಗದೇಶವನ್ನು ಕೈವಶಮಾಡಿಕೊಳ್ಳಬೇಕೆಂದು ಅಶೋಕನು ಯೋಚಿಸಿ,ಮೃಗೇಂದ್ರನೊಡನೆ ಯುದ್ಧ ಹೂಡಲಿಕ್ಕೆ ಕಾರಣವನ್ನು ಹುಡುಕುತ್ತಿದ್ದನು

ಅಶೋಕನ ಯೋಗ್ಯತೆಯಾದರೂ ಸಾಮಾನ್ಯವಾದದ್ದಲ್ಲ. ಆತನು ಪ್ರಸಿದ್ಧನಾಗಿದ್ದ ಮೌರ್ಯವಂಶದ ಚಂದ್ರಗುಪ್ತನ ಮೊಮ್ಮಗನೆಂದು ಹಿಂದೆ ಹೇಳಿದೆ. ಅಶೋಕನ ತಂದೆಯ ಹೆಸರು ಬಿಂದುಸಾರ; ಬಿಂದುಸಾರನಿಗೆ ಇಬ್ಬರು ಹೆಂಡಿರಿದ್ದರು. ಹಿರಿಯಳಾದ ಇಂದುಮತಿಯ ಮಗನ ಹೆಸರು ವೀತಾಶೋಕನು. ಚಿಕ್ಕವಳಾದ ಸುಭದ್ರಾಂಗಿಯ ಮಗನೇ ಅಶೋಕನು. ತಂದೆಯ ತರುವಾಯ ಅಶೋಕನೇ ರಾಜ್ಯಪದವನ್ನು ಹೊಂದಿದನು. ಚಂದ್ರ ಗುಪ್ತನ ಕಾಲಕ್ಕೆ ಆತನ ಅರಮನೆಯನ್ನು ಅಂಜುತ್ತಂಜುತ್ತ ಪ್ರವೇಶಿಸತೊಡಗಿದ್ದ ಬೌದ್ಧಧರ್ಮವು, ಅಶೋಕನ ಕಾಲದಲ್ಲಿ ಅರಮನೆಯಲ್ಲೆಲ್ಲ ಕಾಲು ಚಾಚಿ ಕುಳಿತುಕೊಂಡಂತಾಗಿತ್ತು. ಇಂದುಮತಿ—ಸುಭದ್ರಾಂಗಿಯರೇ ಮೊದಲಾದ ರಾಜಸ್ತ್ರೀಯರು ಮೊದಲು ಬೌದ್ಧಧರ್ಮವನ್ನು ಸ್ವೀಕರಿಸಿದರು. ಅಶೋಕನು ಬೌದ್ಧನಾದಬಳಿಕ ಯಾವತ್ತು ರಾಜಪರಿವಾರವೇ ಬೌದ್ಧ ಧರ್ಮವನ್ನು ಸ್ವೀಕರಿಸಿತು. ಆದರೂ ಬೌದ್ಧಮತದ ನಿಜವಾದ ರಹಸ್ಯವು ಯಾರಿಗೂ ಗೊತ್ತಾಗಿದ್ದಿಲ್ಲ. ಪ್ರಬಲವಾಗುತ್ತ ನಡೆದಿದ್ದ ಬೌದ್ಧ ಶ್ರವಣರ (ಸನ್ಯಾಸಿಗಳ) ದುರಭಿಮಾನದ ಉಪದೇಶವೂ, ನಡತೆಯೂ ಬೌದ್ಧಧರ್ಮದ ರಹಸ್ಯವೆಂದು ತಿಳಿದು, ಅಶೋಕನೇ ಮೊದಲಾದವರುಧರ್ಮಮೂಢತನದಿಂದ ನಡೆಯುತ್ತಿದ್ದರು. ಸಾತ್ವಿಕವಾದ ಬೌದ್ಧಧರ್ಮದ ಪರಿಣಾಮವು ಅಶೋಕನ ಕ್ರೂರಸ್ವಭಾವದಮೇಲೆ ಹೇಳಿಕೊಳ್ಳುವಹಾಗೆ ಆಗಿದ್ದಿಲ್ಲ. ಪೂರ್ವ ವಯಸ್ಸಿನಲ್ಲಿ ಅಶೋಕನು ಅತ್ಯಂತ ಕ್ರೂರನಾಗಿದ್ದನು. ಆಗ ಆತನಿಗೆ ಕ್ಷಮಾಗುಣದ ಪರಿಚಯವೇ ಇದ್ದಿಲ್ಲ. ಸಣ್ಣ ತಪ್ಪಿಗಾದರೂ ಆತನು ಅಪರಾಧಿಗಳಿಗೆ ಮರಣ ಶಿಕ್ಷೆಯನ್ನು ವಿಧಿಸುತ್ತಿದ್ದನು. ಪ್ರತ್ಯಕ್ಷ ತನ್ನ ರಾಣಿಯರನ್ನು ಕೂಡ ಕ್ರೂರತನದಿಂದ ಶಿಕ್ಷಿಸಲಿಕ್ಕೆ ಆತನು ಹಿಂದೆ ಮುಂದೆ ನೋಡಲಿಲ್ಲ. ತನ್ನ ಕುರೂಪವನ್ನು ಆಡಿಕೊಂಡದ್ದಕ್ಕಾಗಿ ತನ್ನ ಹೆಂಡಿರನ್ನು ಆತನು ಅಗ್ನಿಕುಂಡದಲ್ಲಿ ಹಾಕಿಸಿ ಸುಡಿಸಿದನು. ಈತನ ಕ್ರೂರತನಕ್ಕೆ ಅಲೌಕಿಕ ಪರಾಕ್ರಮದ ಜೋಡೂ, ಧೃಢನಿಶ್ಚಯದ ಸಹಾಯವೂ, ಸಾಹಸದ ಸಂಪತ್ತೂ, ಸ್ವಚ್ಛಂದದ ಬಲವೂ, ಧನದ ಮದವೂ, ಹೊಸ ಧರ್ಮದ ದುರಭಿಮಾನವೂ ಜೋಡಿಸಿದ್ದರಿಂದ, ಮಾಂಡಲಿಕರಾಜರು ಕೂಡ ಆತನನ್ನು ಕಂಡು ಗದಗುಟ್ಟಿ ನಡಗು

ತ್ತಿದ್ದರು. ಬೌದ್ಧ ಧರ್ಮವನ್ನು ಹಬ್ಬಿಸುವ ನೆವದಿಂದ ದಿನದಿನಕ್ಕೆ ಹೊಸ ಹೊಸ ರಾಜ್ಯಗಳನ್ನು ಗೆಲ್ಲುತ್ತಾ, ಅನಂತ ಪ್ರಾಣಿಗಳ ಸಂಹಾರವನ್ನು ಮಾಡುತ್ತಾ ಅಶೋಕನು ಗರ್ವದ ಶಿಖರವನ್ನು ಹತ್ತಿ ಕುಳಿತುಕೊಂಡಿದ್ದನು. ಬರಬರುತ್ತ ಆತನ ಗರ್ವವು ನೆಲೆಗೆಟ್ಟು, ಆತನು ತನ್ನ ಅಧಿಕಾರವನ್ನು ದೇವತೆಗಳ ಅಧಿಕಾರಕ್ಕೆ ಸಮಾನವೆಂದು ಭಾವಿಸಹತ್ತಿದನು. ತಾನು ಇಂದ್ರನಿಗೆ ಸಮಾನನೆಂತಲೂ, ತನ್ನ ಐಶ್ವರ್ಯ–ಅಧಿಕಾರ–ಸಾಮರ್ಥ್ಯಗಳು ಇಂದ್ರನ ಐಶ್ವರ್ಯ–ಅಧಿಕಾರ–ಸಾಮರ್ಥ್ಯಗಳಿಗಿಂತ ಕಡಿಮೆಯವಲ್ಲೆಂತಲೂ, ತನ್ನ ರಾಜಧಾನಿಯಾದ ಪಾಟಲೀಪುತ್ರವು ಇಂದ್ರನ ರಾಜಧಾನಿಯಾದ ಅಮರಾವತಿಯನ್ನು ಹೋಲುವದೆಂತಲೂ ಆತನು ತಿಳಿಯಹತ್ತಿದನು; ಆದರೆ ದೇವಲೋಕದಲ್ಲಿ ಅಪರಾಧಿಗಳ ಶಾಸನಕ್ಕಾಗಿ ನರಕವನ್ನು ಸ್ಥಾಪಿಸಿರುವಂತೆ, ತನ್ನ ರಾಜ್ಯದಲ್ಲಿ ಸ್ಥಾಪಿಸಿಲ್ಲೆಂಬದೊಂದೇ ಕೊರತೆಯು ಆತನಿಗೆ ತೋರಿ, ಅದನ್ನು ದೂರ ಮಾಡಬೇಕೆಂದು ಆತನು ಶಾಸ್ತ್ರೋಕ್ತವಾಗಿ ತನ್ನ ರಾಜಧಾನಿಯಲ್ಲಿ ಒಂದು ನರಕವನ್ನೂ ಸ್ಥಾಪಿಸಿದನು. ಒಂದು ವಿಸ್ತಾರವಾದ ಬಯಲಿನ ಸುತ್ತಲು ಭದ್ರವಾದ ಗೋಡೆಯನ್ನು ಕಟ್ಟಿಸಿ, ಅದರೊಳಗೆ ಘೋರಯಾತನೆಯ ಯಾವತ್ತು ಸಾಧನಗಳನ್ನು, ಅಂದರೆ ಶಸ್ತ್ರಗಳು–ಚಕ್ರಗಳು–ಕಾದಎಣ್ಣೆಯ ಕೊಪ್ಪರಿಗೆ–ಲೋಹದ ಶೂಲ ಮೊದಲಾದ ವಸ್ತುಗಳನ್ನು ಸಂಗ್ರಹಿಸಿದ್ದನು. ಮೊದಮೊದಲಿಗೆ ಅಪರಾಧಿಗಳನ್ನು ಮಾತ್ರ ನರಕಕ್ಕೆ ಕಳಿಸಿ ಶಿಕ್ಷಿಸುತ್ತಿದ್ದರು; ಬರಬರುತ್ತ ನರಕಸ್ಥಾನಕ್ಕೆ ಬಂದವರನ್ನು ಎತ್ತಿ ನರಕದಲ್ಲಿ ಒಗೆದು, ಪ್ರಾಣಹರಣ ಮಾಡುವ ಕ್ರಮಕ್ಕೆ ಆರಂಭವಾಯಿತು. ಅಶೋಕನ ಪಾಕಶಾಲೆಯಲ್ಲಿ ಪ್ರತಿನಿತ್ಯ ಸಹಸ್ರಾವಧಿ ಪ್ರಾಣಿಗಳ ಸಂಹಾರವಾಗುತ್ತಿತ್ತು. ಪರಧರ್ಮ ದ್ವೇಷಕ್ಕಾದರೂ, ಅಶೋಕನಲ್ಲಿ ಕೊರತೆಯಿದ್ದಿಲ್ಲ. ಆತನು ಬೌದ್ಧಧರ್ಮವನ್ನು ಸ್ವೀಕರಿಸುವ ಮೊದಲು ಬೌದ್ಧರನ್ನು ಬಹಳವಾಗಿ ಪೀಡಿಸಿದನು. ಬುದ್ಧನ ಜ್ಞಾನೋದಯಸ್ಥಾನವಾದ ಬೋಧಿವೃಕ್ಷವನ್ನು ಈತನೇ ಕಡಿಸಿದನಂತೆ!

ಇಂಥ ಅಶೋಕನು, ಮುಂದೆ ಬೌದ್ಧಧರ್ಮವನ್ನು ಸ್ವೀಕರಿಸಿದ ಬಳಿಕ

ಕೆಲಮಟ್ಟಿಗೆ ಸೌಮ್ಯನಾದರೂ, ಮೇಲೆ ಹೇಳಿದಂತೆ ಧರ್ಮವನ್ನು ಹಬ್ಬಿಸುವ ನೆವದಿಂದ ಮಿತಿಮೀರಿ ಮನುಷ್ಯಸಂಹಾರವನ್ನು ಮಾಡಲಿಕ್ಕೆ ಆತನು ಹೇಸಲಿಲ್ಲ; ಮತ್ತು ತಾನು ಸ್ಥಾಪಿಸಿದ ನರಕವನ್ನಾದರೂ ಆತನು ತೆಗೆದು ಹಾಕಲಿಲ್ಲ. ವಿಜಯವೈಭವದಿಂದ ಮತ್ತನಾಗಿದ್ದ ಆ ಪ್ರತಾಪಿಯು, ಕಲಿಂಗದೇಶದ ಮೃಗೇಂದ್ರರಾಜನೊಡನೆ ಕಾಲುಕೆದರಿ ಜಗಳ ತೆಗೆಯುವದಕ್ಕಾಗಿ, ಆತನ ಮಗಳಾದ ಪ್ರಣಯಿನಿಯೆಂಬ ಸುಂದರಿಯನ್ನು ತನ್ನ ತಮ್ಮನಾದ ವೀತಾಶೋಕನಿಗೆ ಕೊಡಬೇಕೆಂದು ಪತ್ರ ಬರೆದುಕಳಿಸಿದನು. ಪತ್ರವನ್ನು ತಂದ ಅಧಿಕಾರಿಯು ಇಂದ್ರಪುರವನ್ನು ಪ್ರವೇಶಿಸಿದ ಸ್ವಲ್ಪ ಹೊತ್ತಿನಲ್ಲಿಯೇ, ಮೃಗೇಂದ್ರನು ಹರಿದ್ವಾರದಿಂದ ಬಂದು ಅರಮನೆಯನ್ನು ಪ್ರವೇಶಿಸಿದನು. ಮೃಗೇಂದ್ರನು ಸಿಂಹಾಸನದಲ್ಲಿ ಕುಳಿತುಕೊಂಡಿರಲು, ಅಶೋಕನ ಅಧಿಕಾರಿಯು ವಂದಿಸಿ ಪತ್ರವನ್ನು ಆತನಿಗೆ ಒಪ್ಪಿಸಿದನು. ಮೃಗೇಂದ್ರನು ಅದನ್ನು ಓದುತ್ತ ಹೋದಂತೆ ಆತನ ಕಣ್ಣುಗಳು ಕೆಂಪಾಗುತ್ತ ಹೋದವು. ಸಂತಾಪದಿಂದ ಆತನ ಸರ್ವಾಂಗದಲ್ಲಿ ಕಂಪವು ಉತ್ಪನ್ನವಾಯಿತು. ಕೂಡಲೆ ಆತನು ಅದೇ ಪತ್ರದ ಕೆಳಗೆ ಅಶೋಕನನ್ನು ಕುರಿತು— "ಮಗಧಭೂಪತಿಯೇ, ನೀನು ನಾಸ್ತಿಕನಿರುತ್ತೀ; ಸನಾತನವಾದ ವೈದಿಕಧರ್ಮದಿಂದ ಭ್ರಷ್ಟನಾಗಿರುತ್ತೀ; ಪರಮ ಪೂಜ್ಯವಾದ ಭರತಭೂಮಿಯನ್ನು ನಿನ್ನ ವಾಸ್ತವ್ಯದಿಂದ ದೂಷಿತವಾಗಿ ಮಾಡಿರುತ್ತೀ; ಹೀಗೆ ಬಹಿಷ್ಕಾರದಿಂದ ದೂಷಿತನಾಗಿರುವ ನೀನು, ಪರಮಪೂಜ್ಯವಾದ ಇಂದ್ರಪುರದ ಅರಸುಮನೆತನದೊಡನೆ ಶರೀರಸಂಬಂಧ ಮಾಡುವ ಕಲ್ಪನೆಯೇ ನನಗೆ ಅಪಮಾನಕಾರಕವಾಗಿ ತೋರುತ್ತಿರಲು, ನೀನು ನನ್ನ ಕುಮಾರಿಯನ್ನು ಪ್ರತ್ಯಕ್ಷ ಕೇಳಲಿಕ್ಕೆ ಅಧಿಕಾರಿಯನ್ನು ಕಳಿಸಿರುತ್ತೀಯಲ್ಲ! ನರಿಯು ಸಿಂಹದ ಹೆಣ್ಣುಮರಿಯನ್ನು ಸಂಪಾದಿಸುವ ಗೊಡವಿಗೆ ಹೋಗದಿರುವದು ಜಾಣತನವು" ಎಂಬರ್ಥದ ಪತ್ರವನ್ನು ಬರೆದು ಕಳುಹಿದನು. ಈ ಪತ್ರವು ಅಶೋಕನ ಕೈಗೆ ಸೇರಿದ ಕೂಡಲೆ, ಆತನ ಪ್ರಚಂಡ ಸೈನ್ಯವು ಇಂದ್ರಪುರವನ್ನು ಮುತ್ತುವದಕ್ಕಾಗಿ ಹೊರಟಿತು. ಕಲಿಂಗಭೂಪತಿಯೊಡನೆ ಯುದ್ಧಪ್ರಸಂಗವಿದ್ದದ್ದರಿಂದ, ಸೇನಾಪತಿಯಮೇಲೆ ಯಾವತ್ತು ಭಾರವನ್ನು ಹಾಕಿ, ರಾಜಧಾನಿಯಲ್ಲಿ ತಾನು ಕುಳಿತುಕೊಳ್ಳುವದು ಅಶೋಕನಿಗೆ ಇಷ್ಟವಾಗಿ ತೋರಲಿಲ್ಲ.

ರಾಜಮಾತೆಯಾದ ಕಠೋರಹೃದಯದ ಬುದ್ಧಿಮತಿಯು, ಅಶೋಕನೇ ಪ್ರತ್ಯಕ್ಷವಾಗಿ ಯುದ್ಧಕ್ಕೆ ಹೋಗಬೇಕೆಂತಲೂ, ತನ್ನ ಮಗನಾದ ವೀತಾಶೋಕನು ಆತನ ಸಹಾಯಕ್ಕಾಗಿ ಹೋಗಬೇಕೆಂತಲೂ ಅಧಿಕಾರಯುಕ್ತವಾದ ಇಚ್ಛೆಯನ್ನು ವ್ಯಕ್ತಮಾಡಿದಳು. ಮಾರ್ಗದಲ್ಲಿ ಯಾವಪ್ರಕಾರದ ತೊಂದರೆಯೂ ತಟ್ಟದೆ, ಅಶೋಕನ ಸೈನ್ಯವು ಇಂದ್ರಪುರಕ್ಕೆ ಮುತ್ತಿಗೆಯನ್ನು ಹಾಕಲು, ಮೃಗೇಂದ್ರನ ಕಣ್ಣುಗಳು ತೆರೆದವು. ಹೀಗೆ ಏನಾದರೂ ಸಂಕಟ ಬಂದೀತೆಂದು ವಿಶಾಖಾನಂದನು ಮೃಗೇಂದ್ರನಿಗೆ ಮೊದಲೇ ಸೂಚಿಸಿದ್ದನು. ನಿಮ್ಮ ಅಪಮಾನಕಾರಕವಾದ ಉತ್ತರವನ್ನು ಅಶೋಕನು ಸಮಾಧಾನದಿಂದ ಕೇಳಿಕೊಳ್ಳಲಾರನೆಂತಲೂ, ಆತನು ತನಗಾದ ಅಪಮಾನದ ಪರಿಮಾರ್ಜನವನ್ನು ಮಾಡಿಕೊಳ್ಳದೆ ಎಂದೂ ಬಿಡನೆಂತಲೂ ಆ ವೃದ್ಧಮಂತ್ರಿಯು ಸ್ಪಷ್ಟವಾಗಿ ಹೇಳಿದ್ದನು; ಆದರೆ ಮೃಗೇಂದ್ರನು ಅದಕ್ಕೆ ನಕ್ಕು—" ಅಂಥ ಪ್ರಸಂಗ ಒದಗಿದರೆ, ತೋಳಿನ ಸಾಮರ್ಥ್ಯವನ್ನು ತೂಗಿ ನೋಡಲಿಕ್ಕೆ ಅನುಕೂಲವಾಗುವದೆ"ಂದು ಉತ್ತರಕೊಟ್ಟಿದ್ದನು. ಆದರೂ ವಿಶಾಖಾನಂದನು ಸುಮ್ಮನೆ ಕುಳಿತುಕೊಂಡಿದ್ದಿಲ್ಲ. ಆತನು ಕೋಟೆ—ಕೊತ್ತಳಗಳನ್ನು ಭದ್ರಪಡಿಸಿ, ಯುದ್ಧಕ್ಕಾಗಿ ಸೈನ್ಯವನ್ನು ಸಜ್ಜುಗೊಳಿಸಿ, ಶಸ್ತ್ರಾಸ್ತ್ರಗಳ ಸಂಗ್ರಹವನ್ನು ಸಮೃದ್ಧವಾಗಿ ಮಾಡಿದನು. ತನ್ನ ಮಂತ್ರಿಯ ಭವಿಷ್ಯವು ನಿಜವಾಗಿ, ತನ್ನ ಹೆಮ್ಮೆಯ ಮಾತಿನ ಸತ್ಯತೆಯನ್ನು ತೋರಿಸುವ ಪ್ರಸಂಗ ಒದಗಿದ್ದರಿಂದ, ಶೂರ ಮೃಗೇಂದ್ರನು ಅತ್ಯಂತವಾದ ಉತ್ಸಾಹದಿಂದ ಶತ್ರುವಿನೊಡನೆ ಯುದ್ಧಮಾಡಲು ಸಿದ್ಧನಾದನು.

ಅಶೋಕನು ಇಂದ್ರಪುರವನ್ನು ಮುತ್ತಿ ನಾಲ್ಕು ತಿಂಗಳಾದರೂ ಆತನಿಗೆ ಜಯದ ಆಶೆಯು ತೋರದಾಯಿತು. ಪ್ರತಿದಿನ ತನ್ನ ಸೈನ್ಯದ ಸಂಹಾರವು ಮಿತಿಮೀರಿ ಆಗಹತ್ತಿ, ಶತ್ರುವಿನ ಸೈನ್ಯವು ವಿಶೇಷ ನಾಶಹೊಂದದೆ ಸುರಕ್ಷಿತವಾಗಿರುವದನ್ನು ಆತನು ಕಣ್ಣುಮುಟ್ಟಿ ನೋಡುತ್ತಿದ್ದನು. ಆದರೂ ಅಭಿಮಾನದಿಂದ ಧರ್ಮಪ್ರಸಾರ ಮಾಡುವದರಲ್ಲಿ ಮಗ್ನನಾಗಿದ್ದ ಆ ಬೌದ್ಧ ನೃಪತಿಯು, ಅದನ್ನು ಲೆಕ್ಕಿಸಲಿಲ್ಲ. ಧರ್ಮದ ದುರಭಿಮಾನದಿಂದ ಸುಮ್ಮನೆ ರೆತಿದ್ದ ಆತನ ಬೌದ್ಧ ಸೈನ್ಯವು, ಕೋಟೆಯ ಮೇಲಿಂದಾಗುವ ಅಗ್ನಿವೃಷ್ಟಿಗೆ

ಆಸುಗೊಳ್ಳದೆ, ಕೋಟೆಯನ್ನು ಕೈಸೇರಿಸಿಕೊಳ್ಳಬೇಕೆಂದು ಮುಂದಮುಂದಕ್ಕೆ ಸಾಗುತ್ತಿತ್ತು; ಆದರೆ ಮೃಗೇಂದ್ರನ ಶೂರಸೈನಿಕರು ಅವರನ್ನು ಮುಂದಕ್ಕೆ ಬರಗೊಡಷೆ ಶಸ್ತ್ರಾಸ್ತ್ರಗಳಿಂದ ಹಣಿದು ಹಿಂದಹಿಂದಕ್ಕೆ ಅಟ್ಟುತ್ತಲಿದ್ದರು. ಪ್ರತಿ ಕ್ಷಣದಲ್ಲಿ ಅಶೋಕನ ಸೈನ್ಯವು ಒಂದೊಂದುಹೆಜ್ಜೆ ಹಿಂದಕ್ಕೆ ಸರಿಯುತ್ತಲಿತ್ತು. ತನ್ನ ಸೈನಿಕರನ್ನು ಪ್ರೋತ್ಸಾಹಿಸುತ್ತ, ವಿದ್ಯುದ್ವೇಗದಿಂದ ಕೋಟೆಯ ಗೋಡೆಯಮೇಲೆ ಸಂಚರಿಸುತ್ತಿದ್ದ ಮೃಗೇಂದ್ರನು, ಕೋಟೆಯಕೆಳಗಿದ್ದವರಿಗೆ ಕ್ಷಣಮಾತ್ರ ಇಲ್ಲಿಕಂಡರೆ ಮತ್ತೊಂದು ಕ್ಷಣದಲ್ಲಿ ಮತ್ತೊಂದು ಕಡೆಯಲ್ಲಿ ಕಾಣುತ್ತಿದ್ದನು; ಆದರೆ ಗುರಿಯಿಟ್ಟು ಹೊಡೆಯಬೇಕೆನ್ನುವಷ್ಟರಲ್ಲಿ ಆತನು ತಟ್ಟನೆ ಸರಿದು ಹೋಗುವನು. ಅಶೋಕನ ಸೈನ್ಯದ ಸಂಹಾರವಾಗುತ್ತ ಹೋದಂತೆ, ಇಂದ್ರಪುರದ ಆರ್ಯರ ಮನಸ್ಸು ಪ್ರಫುಲ್ಲಿತವಾಗಹತ್ತಿತು. ಎರಡು ನಿಷ್ಟೆನ ಜನರೂ ಧರ್ಮಮೂಢರಾಗಿ ಜೀವಿತವನ್ನು ತೃಣಕ್ಕೆ ಸರಿ ಮಾಡಿ ಆವೇಶದಿಂದ ಕಾದುತ್ತಲಿದ್ದರು; ಆದರೆ ಜಯಲಕ್ಷ್ಮಿಯು ಮೃಗೇಂದ್ರನ ಕೊರಳಿಗೆ ಮಾಲೆಹಾಕುವ ಲಕ್ಷಣವು ತಟಸ್ಥವೃತ್ತಿಯವರಿಗೆ ಸ್ಪಷ್ಟವಾಗಿ ತೋರ ಹತ್ತಿತು.

ಈವರೆತ್ತಿನವರೆಗೆ ಅಜಿಂಕ್ಯವೆಂದು ಪ್ರಸಿದ್ಧವಾಗಿದ್ದ ಅಶೋಕನ ಸೈನ್ಯವು, ಇಂದ್ರಪುರದ ಮುತ್ತಿಗೆಯಲ್ಲಿ ತೇಜೋಹೀನವಾಗುವ ಶಂಕೆಯು ವಿಚಾರವಂತ ರಾದ ಬೌದ್ಧರಲ್ಲಿ ಉತ್ಪನ್ನವಾಯಿತು. ಪ್ರತಿನಿತ್ಯ ಸಾವಿರಗಟ್ಟಲೆ ಅಶೋಕನ ಸೈನಿಕರು ರಣಭೂಮಿಯಲ್ಲಿ ಬೀಳಹತ್ತಿದರು. ಗಾಯಪಟ್ಟ ಸೈನಿಕರ ಆರೈಕೆಯು ಸರಿಯಾಗಿ ಆಗದಂತಾಯಿತು. ಹೆಣಗಳ ವ್ಯವಸ್ಥೆಯಾಗದೆ ಅವು ಬಿದ್ದಲ್ಲಿ ಬಿದ್ದು ಕೊಳೆಯಹತ್ತಿದ್ದರಿಂದ, ಹವೆ ಕೆಟ್ಟು ಅಶೋಕನ ಸೈನ್ಯದಲ್ಲಿ ಭಯಂಕರ ರೋಗವು ಉತ್ಪನ್ನವಾಯಿತು. ಒಂದು ಕಡೆಯಿಂದ ಮೃಗೇಂದ್ರನ ಸೈನಿಕರ ಭಯಂಕರವಾದ ಹೊಡತ, ಮತ್ತೊಂದು ಕಡೆಯಿಂದ ಭಯಂಕರ ರೋಗದ ಕಾಟ; ಹೀಗೆ ಎರಡು ಬಗೆಯ ಸಂಕಟಗಳ ಇರುಕಿನಲ್ಲಿ ಅಶೋಕನ ಸೈನ್ಯವು ಸಿಕ್ಕು ನುಗ್ಗಾಗಹತ್ತಿತು. ಇದೇ ಸ್ಥಿತಿಯು ಬಹು ದಿವಸ ನಡೆದರೆ ತನ್ನ ಸೈನ್ಯವು ಸಂಪೂರ್ಣ ನಷ್ಟವಾಗುವದೆಂಬ ಭಯವು ಅಶೋಕನ ಮನಸ್ಸಿನಲ್ಲಿ ಉತ್ಪನ್ನವಾಯಿತು. ಒಡಂಬಡಿಕೆಯನ್ನು ಮಾಡಿಕೊಂಡು

ಹಿಂದಕ್ಕೆ ಸರಿಯುವದು ಅಶೋಕನಂಥ ಬಹುಮಾನದ ಪುರುಷನಿಗೆ ಮಾನ್ಯ ವಾಗುವಹಾಗಿದ್ದಿಲ್ಲ. ಜಯವನ್ನು ಸಂಪಾದಿಸದೆ ಒಡಂಬಡಿಕೆಯನ್ನು ಮಾಡಿ ಕೊಂಡು ಪಾಟಲೀಪುತ್ರಕ್ಕೆ ತಿರುಗಿ ಹೋಗಬೇಕೆಂಬ ಕಲ್ಪನೆಯು ಮನಸ್ಸಿನಲ್ಲಿ ಉತ್ಪನ್ನವಾದ ಕೂಡಲೆ, ಅಶೋಕನ ಮನಸ್ಸು ವ್ಯಥಿತವಾಗುತ್ತಿತ್ತು. ಒಡಂಬಡಿಕೆ ಮಾಡಿಕೊಳ್ಳದಿದ್ದರೆ ತನ್ನ ಸೈನ್ಯದ ಗತಿಯೇನಾದೀತೆಂಬದು ಅಶೋಕನ ಕಣ್ಣಿಗೆ ಕಟ್ಟಿದಂತಾಗಿತ್ತು. ಹೀಗೆ ಬಹು ಕಠಿಣ ಪ್ರಸಂಗ ಒದಗಿದ್ದರಿಂದ ಆತನಿಗೆ ಏನೂತೋಚದಾಯಿತು.

ಮಧ್ಯರಾತ್ರಿಯಾಗಿತ್ತು. ಗಾಯಪಟ್ಟ ಸೈನಿಕರ ನೆರಳುವ ಹೃದಯ ದ್ರಾವಕ ಧ್ವನಿಯು, ಹಾಗು ಹೆಣಗಳನ್ನು ಹರಿದು ತಿನ್ನುವ ಕ್ರೂರಪಕ್ಷಿಗಳ ಭಯಂಕರ ಧ್ವನಿಯ ಹೊರತು ಬೇರೆ ಧ್ವನಿಗಳು ಕೇಳಬರುತ್ತಿದ್ದಿಲ್ಲ. ಹೆಣಗಳ ದುರ್ಗಂಧವನ್ನು ಸಹಿಸಲಾರದೆ ಕಾವಲುಗಾರರು ಮೂಗುಕಟ್ಟಿಕೊಂಡು, ರಕ್ತದಿಂದ ನೆನೆದು ಜಾರಿಕೆಯಾದ ರಣಭೂಮಿಯಲ್ಲಿ ಜೋಲಿಯನ್ನು ಹಿಡಿದು ತಿರುಗುತ್ತಲಿದ್ದರು. ಅಶೋಕನ ಡೇರೆಯಲ್ಲಿ ಇನ್ನೂ ದೀಪವು ಉಜ್ವಲವಾಗಿ ಉರಿಯುತ್ತಿತ್ತು. ಈವೊತ್ತಿನವರೆಗೆ ಅಶೋಕನು ಹಲವು ಯುದ್ಧಗಳನ್ನು ಮಾಡಿದ್ದರೂ, ಇಂದಿನಂತೆ ಆತನ ಪ್ರಸನ್ನ ಮುಖವು ಎಂದೂ ಖಿನ್ನವಾಗಿದ್ದಿಲ್ಲ. ಸ್ವಲ್ಪ ಹೊತ್ತಿನಮೇಲೆ ಅಶೋಕನ ಚಿಂತೆಯ ಮುಖಮುದ್ರೆಯಲ್ಲಿ ನಿಶ್ಚಯದ, ಅಥವಾ ಅಲ್ಪ ಶಾಂತತೆಯ ಚಿಹ್ನವು ತೋರುತ್ತಿರಲು, ಹೊರಗೆ ಏನೋ ಬಿದ್ದ ಸಪ್ಪಳವಾಯಿತು. ಅಶೋಕನು ಹೊರಗೆ ಬಂದು ನೋಡುವಾಗ, ಕಾವಲುಗಾರನು ರಕ್ತದ ಜಾರಿಕೆಯಲ್ಲಿ ಕಾಲುಜಾರಿ ಬಿದ್ದಿದ್ದನು. ಆಗ ಅಶೋಕನು ಕಾವಲುಗಾರನನ್ನು ಕುರಿತು—

ಅಶೋಕ—ಮೋಹನನೇ, ಏನೂ ಪೆಟ್ಟು ಹತ್ತಲಿಲ್ಲವಷ್ಟೆ?

ಮೋಹನ—ಭಗವನ್, ಇಲ್ಲ. ಪೆಟ್ಟುಗಿಟ್ಟು ಹತ್ತಲಿಲ್ಲ. ಬರೇ ಕಾಲು ಜಾರಿತು!

ಅಶೋಕ—ಕಕ್ಕಂದಿರ ಡೇರೆಯಲ್ಲಿ ಇನ್ನೂ ಬೆಳಕುಕಾಣುತ್ತದಲ್ಲವೆ?

ಮೋಹನ—ಅಹುದು, ಬೆಳಕುಕಾಣುತ್ತದೆ. ಪ್ರಧಾನರು ಇನ್ನೂ ಎಚ್ಚತ್ತಿರುತ್ತಾರೆ; ದಂಡಿನೊಳಗಿನ ಮುಖ್ಯ ಮುಖ್ಯ ಅಧಿಕಾರಿಗಳು ಇದೇ

ಈಗ ಪ್ರಧಾನರವರ ಡೇರೆಯೊಳಗಿಂದ ಹೋದರು. ಪ್ರಭುಗಳ ಇಚ್ಛೆಯಿದ್ದರೆ,

ಅಶೋಕ—ಅಹುದು, ಹೋಗು, ಅವರನ್ನು ನನ್ನ ಡೇರೆಗೆ ಕರಕೊಂಡು ಬಾ-

ಮೋಹನನು ಬಹು ವಿನಯದಿಂದ ಅಶೋಕನನ್ನು ನಮಿಸಿ, ರಾಧಾಗುಪ್ತನನ್ನು ಕರಕೊಂಡು ಬರುವದಕ್ಕಾಗಿ ಆತನ ಡೇರೆಗೆ ಹೋದನು. ಕಾಲುಗಳಿಗೆಯೊಳಗಾಗಿ ರಾಧಾಗುಪ್ತನು ಅಶೋಕನ ಬಳಿಗೆ ಬಂದನು. ರಾಧಾಗುಪ್ತನಂಥ ರಾಜನಿಷ್ಠಮಂತ್ರಿಯು ಆ ಕಾಲದಲ್ಲಿ ಅಶೋಕನ ರಾಜ್ಯದೊಳಗೆ ಮತ್ತೊಬ್ಬನಿದ್ದಿಲ್ಲ. ಬೌದ್ಧರ ಪಾಟಲೀಪುತ್ರ ರಾಜಧಾನಿಯಲ್ಲಿ, ಬೌದ್ಧರ ಸಾಮ್ರಾಜ್ಯದಲ್ಲಿ, ಅಶೋಕನಂಥ ಬೌದ್ಧಭೂಪತಿಯು ಸಿಂಹಾಸನವೇರಿರುವಾಗ ರಾಧಾಗುಪ್ತನಂಥ ವೇದಧರ್ಮಿಯು ಮುಖ್ಯ ಪ್ರಧಾನನಾಗಿದ್ದದ್ದು ಪರಮಾಶ್ಚರ್ಯವೇ ಸರಿ. ಅಶೋಕನ ಹೊರತಾಗಿ ಯಾವತ್ತು ಬೌದ್ಧರು ಆತನನ್ನು ತಿರಸ್ಕರಿಸುತ್ತಿದ್ದರು. ರಾಜಮಾತೆಯಾದ ಬುದ್ಧಿಮತಿಯು ಆತನನ್ನು ನಾಶಗೊಳಿಸಲಿಕ್ಕೆ ಒಂದೆರಡು ಉಪಾಯಗಳನ್ನು ಮಾಡಲಿಲ್ಲ; ರಾಜಗುರುವೆನಿಸುವ ಸಂಪುಷ್ಪಾಚಾರ್ಯನೆಂಬ ಬೌದ್ಧಭಿಕ್ಷುವು, ಆ ವೃದ್ಧಮಂತ್ರಿಯ ನಾಶಕ್ಕಾಗಿ ತನ್ನಿಂದಾದಷ್ಟು ಯತ್ನಿಸಿದನು; ಆದರೆ ರಾಧಾಗುಪ್ತನು ಕಂಟಕಯುಕ್ತವಾದ ಈ ಮಾರ್ಗದೊಳಗಿಂದ ತನ್ನ ಆಯುಷ್ಯದ ಬಹು ದೊಡ್ಡಭಾಗವನ್ನು ಸುರಕ್ಷಿತವಾಗಿ ಕ್ರಮಿಸಿದ್ದನು. ಆತನ ಅರವತ್ತು ವರ್ಷದ ಆಯುಷ್ಯದಲ್ಲಿ ವೇದಧರ್ಮದ ಅಭಿಮಾನದ ಮೂಲಕ ಆತನಿಂದ ಒಂದಾದರೂ ರಾಜದ್ರೋಹದ ಕಾರ್ಯವು ಒದಗಿದ್ದದ್ದು ಶತ್ರುಗಳ ಕಣ್ಣಿಗೆಸಹ ಬೀಳಲಿಲ್ಲ. ಇಂಥ ಘನತರವಾದ ಯೋಗ್ಯತೆಯ ವೃದ್ಧಮಂತ್ರಿಯು, ಡೇರೆಯಲ್ಲಿ ತೀರ ಅಶೋಕನಹತ್ತರ ಹೋಗಿ—ಭಗವನ್, ಇಷ್ಟುರಾತ್ರಿ ತಾವು ನಿದ್ದೆಗೆಟ್ಟು ಕುಳಿತಿರಬಹುದೆಂಬ ಕಲ್ಪನೆಕೂಡ ನನ್ನ ಮನಸ್ಸಿನಲ್ಲಿ ಬಂದಿದ್ದಿಲ್ಲ, ಎಂದು ನುಡಿದನು. ಅದಕ್ಕೆ—

ಅಶೋಕ—ಕಕ್ಕಾ, ಮುಪ್ಪಿನಕಾಲದಲ್ಲಿ ಇಂಥ ಅಪರಾತ್ರಿಯಲ್ಲಿ ನಿಮಗೆ ತ್ರಾಸಕೊಡುವದು ಅಪರಾಧವೇಸರಿ; ಆದರೆ ಮಾಡಲೇನು? ನಾನು ಬಂದ ಉದ್ದೇಶವು ಒತ್ತಟ್ಟಿಗೆ ಉಳಿದು, ಶತ್ರುಗಳ ಹೊಡತದಿಂದಲೂ, ರೋಗಬಾಧೆ

ಯಿಂದಲೂ ಸೈನ್ಯದ ಸಂಹಾರವು ಮಿತಿಮೀರಿ ಆಗತೊಡಗಿದೆ. ಇದನ್ನು ನೋಡುತ್ತ ನಾವು ಎಷ್ಟುದಿವಸ ಕುಳಿತುಕೊಳ್ಳಬೇಕು? ಈ ನೆಲೆಯಿಲ್ಲದ ಪ್ರಾಣಿಹಿಂಸೆಯನ್ನು ನೋಡಿ ನನ್ನ ಕಠಿಣಹೃದಯವೂ ಕರಗಿ ನೀರಾಗಿದೆ. ಪ್ರಾಣಕ್ಕಿಂತಲೂ ಪ್ರಿಯವಾಗಿರುವ ನಮ್ಮ ಜನರ ಸಂಹಾರಮಾಡಿ, ಹಲವು ವೀರರ ರಕ್ತವನ್ನು ಪ್ರತಿಯಾಗಿ ಕೊಟ್ಟು ಒತ್ತಾಯದಿಂದ ಇಂದ್ರಪುರದವರನ್ನು ಬೌದ್ಧರನ್ನಾಗಿ ಮಾಡುವದು ಯಾವ ನಿಜವಾದ ಬೌದ್ಧನಿಗೆ, ಅಥವಾ ಭಗವಾನ್ ಗೌತಮಬುದ್ಧನ ಅನುಯಾಯಿಯೆನಿಸುವ ಯಾವನಿಗೆ ಸಮ್ಮತವಾದೀತು?

ರಾಧಾಗುಪ್ತ—ಭಗವನ್, ತಮಗೆ ಕಠಿಣಪ್ರಸಂಗವೊದಗಿರುವದು ನಿಜವು. ಸಾವಿರಾರು ಜನರ ಸಂಹಾರವನ್ನು ನೋಡುವ ನನ್ನ ಕಣ್ಣುಗಳು ಈ ಮುಪ್ಪಿನಲ್ಲಿ ಯಾಕೆ ಕುರುಡವಾಗಲೊಲ್ಲವೆನ್ನುವಹಾಗೆ ನನಗೆ ಆಗಿದೆ. ನನ್ನ ಮೈಯಲ್ಲಿ ತ್ರಾಣವಿದ್ದರೆ, ಈಗಲೇ ಇಂದ್ರಪುರದ ಕೋಟೆಗೆ ಲಗ್ಗೆಹತ್ತಿ ಆ ಕ್ಷಣದಲ್ಲಿ ಶತ್ರುಗಳಮೇಲೆ ದುಮುಕುತ್ತಿದ್ದೆನು.

ಅಶೋಕ—ಕಕ್ಕಾ, ಅದು ಸರಿ; ತಮ್ಮತನಕ ಯಾಕೆ? ನಮ್ಮ ಸೈನ್ಯದಲ್ಲಿ ವೈರಿಗಳಿಗೆ ಬೆನ್ನು ತೋರಿಸದ ರಣಶೂರರು ಸ್ವಲ್ಪ ಜನರಿರುವರೆಯೇ? ಈವೊತ್ತಿನವರೆಗೆ ಅಂಜಿಕ್ಯರೆನಿಸಿಕೊಂಡಿರುವ ನನ್ನ ಸೈನಿಕರು ಜೀವದ ಪರಿವೆಯಿಲ್ಲದೆ ಕಾದುತ್ತಲಿದ್ದಾರೆ; ಆದರೆ ನಮಗೆ ಬಲವಾದ ಕೋಟೆಯ ಆಶ್ರಯವಿಲ್ಲದ್ದರಿಂದಲೂ, ನಮಗೆ ಅನ್ನನೀರಿನ ಪೂರಯಿಕೆ ಯಿಲ್ಲದ್ದರಿಂದಲೂ, ನಾವು ರೋಗಪೀಡಿತರಾಗಿದ್ದದ್ದರಿಂದಲೂ ಈವೊತ್ತಿಗೆ ಮೃಗೇಂದ್ರನ ಕೈಯು ಮೇಲಾಗಿರುತ್ತದೆ.

ರಾಧಾಗುಪ್ತ—ಇಂದು ಆತನ ಕೈಯು ಮೇಲಾಗಿದ್ದರೆ, ನಾಳೆ ತಮ್ಮ ಕೈಯು ಮೇಲಾದೀತು. ಅದಕ್ಕಾಗಿ ಚಿಂತೆಮಾಡಬಾರದು.

ಅಶೋಕ—ಕಕ್ಕಾ, ಏನಾದರೂ ಸಮಾಧಾನದ ಮಾತುಹೇಳಿ ಕಾಲಹರಣ ಮಾಡುವದು ನಿಮಗೆ ಒಪ್ಪುವದಿಲ್ಲ. ಅದಕ್ಕಾಗಿ ನಾನು ನಿಮ್ಮನ್ನು ಕರೆಸಿರುವದಿಲ್ಲ. ಈ ಧರ್ಮಯುದ್ಧವನ್ನು ಹೇಗೆ ಮುಗಿಸಬೇಕೆಂಬಬಗ್ಗೆ ನೀವು ಸ್ಪಷ್ಟವಾಗಿ ಹೇಳಿರಿ. ನೀವು ಒಡಂಬಡಿಕೆಮಾಡಿಕೊಳ್ಳೆಂದು ಹೇಳಿದರೆ, ನಾಳೆಗೇ ಮಾಡಿಕೊಳ್ಳುವೆನು.

ರಾಧಾಗುಪ್ತ—ಭಗವನ್, ನನ್ನ ಮೇಲಿರುವ ನಿಮ್ಮ ವಿಶ್ವಾಸಕ್ಕಾಗಿ ನಾನು ತಮ್ಮ ಋಣಿಯಾಗಿದ್ದೇನೆ. ತಾವು ನನ್ನಂಥ ವೇದಧರ್ಮದವನಿಗೆ—ಬೌದ್ಧಧರ್ಮದ ಶತ್ರುವಿಗೆ ನಮ್ಮ ಧರ್ಮದ ಪ್ರಸಿದ್ಧ ಅರಸನೊಡನೆ ನಡೆದಿರುವ ಯುದ್ಧವನ್ನು ಮುಗಿಸುವಬಗ್ಗೆ ಅಭಿಪ್ರಾಯವನ್ನು ಕೇಳುತ್ತೀರಿ! ಸ್ವಾಮಿಯ ಕಾರ್ಯವನ್ನು ಏಕನಿಷ್ಠೆಯಿಂದ ಮಾಡುವವರ ಹೊರತು ನನಗೆ ಅನ್ಯಧರ್ಮವಿಲ್ಲ; ಸ್ವಾಮಿಯ ಕಲ್ಯಾಣವನ್ನು ಚಿಂತಿಸುವದಕ್ಕಿಂತ ನನಗೆ ಹೆಚ್ಚಿನ ಸುಖವಿಲ್ಲ; ಆದರೆ ಪ್ರಭುಗಳ ಬಳಿಯಲ್ಲಿ ನಾನು ಬೇಡಿಕೊಳ್ಳುವದೇನಂದರೆ, ಯುದ್ಧಮಾಡುವದೊಂದೇ ನಮ್ಮ ಕೈಯಲ್ಲಿರುವವಲ್ಲದೆ, ಒಡಂಬಡಿಕೆ ಮಾಡುವದು ನಮ್ಮ ಕೈಯಲ್ಲಿರುವದಿಲ್ಲ. ರಾಜ್ಯಕಾರಭಾರದ ಸೂತ್ರಗಳು ರಾಜಮಾತೆಯವರ ಕೈಯಲ್ಲಿಯೂ, ಕ್ಷುದ್ರರಾದ ಬೌದ್ಧಭಿಕ್ಷುಗಳ ಕೈಯಲ್ಲಿಯೂ ಇದ್ದಂತಾಗಿರುತ್ತವೆ. ರಾಜಕಾರಣದ ಆಜ್ಞೆಗಳು ಅವರಿಂದ ಹೊರಡುತ್ತಲಿವೆ. ಅದರಿಂದ ರಾಜ್ಯಕಾರಭಾರದಲ್ಲಿ ಹಲವು ಅನ್ಯಾಯಗಳು ಆಗುತ್ತವೆ. ಅದು ಹೇಗೇ ಇರಲಿ, ನಾಳಿಗೇ ಒಡಂಬಡಿಕೆಯನ್ನು ಮಾಡಿಕೊಳ್ಳಬಾರದು.

ಅಶೋಕ—ಅದೇಕೆ? ಹೀಗೆಯೇ ಮನುಷ್ಯಸಂಹಾರವನ್ನು ಮಾಡಿರೆಂದು ನೀವು ನನಗೆ ಹೇಳುತ್ತೀರೋ?

ರಾಧಾಗುಪ್ತ— ಹೇಗಿದ್ದರೂ ನಾಳೆ ಒಂದು ದಿನ ಪ್ರಭುಗಳು ತಡೆಯಲೇಬೇಕು. ರಾಜಮಾತೆಯಾದ ಬುದ್ಧಿಮತಿಯವರನ್ನೂ, ಅವರ ಮಂತ್ರಾಲೋಚಕರಾದ ಬೌದ್ಧಶ್ರವಣರನ್ನೂ, ನಾಳಿಗೆ ಇಂದ್ರಭುವನದ ಚೈತ್ಯಾಲಯಕ್ಕೆ ಕರೆಸಿಕೊಳ್ಳಬೇಕು. ಅವರ ಮುಂದೆ ಯುದ್ಧದ ಪ್ರಸಕ್ತಿಯನ್ನು ತೆಗೆಯೋಣ. ಅವರು ಒಡಂಬಡಿಕೆಗೆ ಒಪ್ಪಿಕೊಂಡರೆ ನೆಟ್ಟಗೇ ಆಯಿತು.

ಅಶೋಕ—ಕಕ್ಕಾ, ಅವರ ಒಪ್ಪಿಗೆಯ ಅವಶ್ಯವು ನನಗಿರುವದಿಲ್ಲ. ತಮ್ಮ ಸೂಚನೆಯಂತೆ ನಾಳಿಗೆ ಅವರನ್ನು ಅವಶ್ಯವಾಗಿ ಕರೆಸಿಕೊಳ್ಳುವೆನು; ಆದರೆ ಯುದ್ಧವನ್ನು ಯಾವರೀತಿಯಿಂದ ಮುಗಿಸತಕ್ಕದ್ದೆಂಬಬಗ್ಗೆ ಸ್ಪಷ್ಟವಾಗಿ ಹೇಳಿರಿ. ಈ ಕಲಿಂಗಯುದ್ಧದಿಂದ ನನ್ನ ಕಠಿಣ ಹೃದಯದಲ್ಲಿ ದಯೆಯ ಅಂಕುರವು ಉತ್ಪನ್ನವಾಯಿತು.

ರಾಧಾಗುಪ್ತ—ಪ್ರಭುಗಳೇ, ಒಡಂಬಡಿಕೆಮಾಡಿಕೊಂಡ ಹೊರತು ಅನ್ಯ ಮಾರ್ಗವಿಲ್ಲ.

ಈಮೇರೆಗೆ ನಿಶ್ಚಿತವಾದ ಮಾತನ್ನು ರಾಧಾಗುಪ್ತನು ಹೇಳಿದ್ದರಿಂದ ಅಶೋಕನಿಗೆ ಸಮಾಧಾನವಾಯಿತು. ಸ್ವಲ್ಪಹೊತ್ತಿನಲ್ಲಿ ಒಂಟಿಯುಸವಾರರು ಪಾಟಲೀಪುತ್ರಕ್ಕೆ ಸಾಗಿದರು. ರಾಧಾಗುಪ್ತನು ಅಶೋಕನ ಅಪ್ಪಣೆಯಿಂದ ತನ್ನಡೇರೆಗೆ ಹೋದನು. ಅಶೋಕನ ಚಿತ್ತವೃತ್ತಿಯು ಬಹುಮಟ್ಟಿಗೆ ಶಾಂತ ವಾದದ್ದರಿಂದ, ಆತನಿಗೆ ಸ್ವಲ್ಪಹೊತ್ತಿನಲ್ಲಿ ನಿದ್ರೆಯು ಹತ್ತಿತು.

---

## ೩ನೆಯ ಪ್ರಕರಣ--ಅಸಂಗತಕಾರ್ಯ.

ಮರುದಿವಸ ಎರಡುತಾಸು ರಾತ್ರಿಯ ಸುಮಾರಕ್ಕೆ ಅಶೋಕನು ಇಂದ್ರ ಭುವನದ ಬಳಿಯ ಗುಡ್ಡದಲ್ಲಿದ್ದ ಚೈತ್ಯಾಲಯದ ಸಭಾಮಂಟಪದಲ್ಲಿ ತಾನು, ವೀತಾಶೋಕನು, ರಾಧಾಗುಪ್ತಮಂತ್ರಿಯು, ಹೀಗೆ ಮೂವರು ಪೀಠಗಳಮೇಲೆ ಕುಳಿತುಕೊಂಡು, ಮಾತೆಯಾದ ಬುದ್ಧಿಮತಿಯು, ಹಾಗು ಗುರುಗಳಾದ ಸಂಪು ಷ್ಟಾಚಾರ್ಯರ ಹಾದಿಯನ್ನು ನೋಡುತ್ತಲಿದ್ದರು. ಚೈತ್ಯಾಲಯದ ಬಾಗಿ ಲಲ್ಲಿ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ಕಾವಲುಗಾರರು ಇತ್ತಿಂದ—ಅತ್ತ, ಅತ್ತಿಂದ—ಇತ್ತ ತಿರುಗುತ್ತಲಿದ್ದರು. ಅಂದು ಆ ಚೈತ್ಯಾಲಯದ ಸಭಾಮಂಟಪವು ಉತ್ತಮರೀತಿಯಿಂದ ಪ್ರಕಾಶಿಸಲ್ಪಟ್ಟಿತ್ತು. ಅಶೋಕನ ನಂಬಿಗೆಯ ನಾಲ್ಕೈದುಜನ ಅಂಗರಕ್ಷಕರು ಆತನಬಳಿಯಲ್ಲಿ ವ್ಯಾಸಪೀಠದಹತ್ತರ ಕುಳಿತು ಕೊಂಡಿದ್ದರು. ಉಳಿದ ಸಭಾಮಂಟಪದಲ್ಲಿ ಮನುಷ್ಯರು ಇಲ್ಲದ್ದರಿಂದ, ಅದು ಶೂನ್ಯವಾಗಿ ತೋರುತ್ತಿತ್ತು. ವ್ಯಾಸಪೀಠದಮೇಲೆ ಇನ್ನೂ ಕೆಲವು ಪೀಠ ಗಳು ತೆರವಾಗಿದ್ದವು. ಎಲ್ಲರ ಲಕ್ಷವು ಸಭಾದ್ವಾರದ ಕಡೆಗೆ ಇತ್ತು. ಹತ್ತು ಗಳಿಗೆ ರಾತ್ರಿಯಾಗಲು, ಸಭೆಯಹೊರಗಿನಿಂದ "ರಾಜಮಾತೆಯವರ ಜಯ ಜಯಕಾರವು" ಎಂದು ಕಾವಲುಗಾರರು ಉಚ್ಚರಿಸಿದ ಗಂಭೀರಧ್ವನಿಯು ಸಭಾಸ್ಥಾನವನ್ನು ತುಂಬಿ ಅಶೋಕಾದಿಗಳ ಕರ್ಣರಂಧ್ರವನ್ನು ಪ್ರವೇಶಿಸಿತು.

ಅಷ್ಟರಲ್ಲಿ, ಶುಭ್ರವಸ್ತ್ರವನ್ನು ಉಟ್ಟುಕೊಂಡಿದ್ದ ಒಬ್ಬ ಪ್ರೌಢಸ್ತ್ರೀಯು ತನ್ನ ತೀಕ್ಷ್ಣವಾದ ದೃಷ್ಟಿಯಿಂದ ನಾಲ್ಕೂಕಡೆಗೆ ನೋಡುತ್ತ, ಮೃದುಹಾಸದೊಡನೆ ಮಂದಗಮನದಿಂದ ವ್ಯಾಸಪೀಠದಕಡೆಗೆ ಬರತೊಡಗಿದಳು. ಆಕೆಯ ಗಾಂಭೀರ್ಯಪೂರ್ಣವಾಗಿದ್ದ ಮುಖಮುದ್ರೆಯು ಅಂತ್ಯಂತ ಹೃದಯಭೇದಕವಾಗಿತ್ತು. ಆಕೆಯ ಮುಖದಲ್ಲಿ ಒಪ್ಪುತ್ತಿದ್ದ ಶಾಂತತೆಯಲ್ಲಿ ಮರ್ಮಭೇದಕತನವು ತೋರುತ್ತಿತ್ತು. ಆಕೆಯ ಕೆಳದುಟಿಯಲ್ಲಿ ವ್ಯಕ್ತವಾಗುವ ಮೃದುಹಾಸವು ಅತ್ಯಂತ ಕಠೋರವಾಗಿತ್ತು. ಆಕೆಯ ಅಧಿಕಾರಯುಕ್ತ ಮುದ್ರೆಯು, ಆಕೆಯ ಶುಭ್ರದಂತಪಂಕ್ತಿಗಳಿಂದಲೂ-ಶುಭ್ರಕೇಶಕಲಾಪದಿಂದಲೂ-ಶುಭ್ರವಸ್ತ್ರಪರಿಧಾನದಿಂದಲೂ ಬಹುಭೂಷಿತವಾಗಿ ಒಪ್ಪುತ್ತಿತ್ತು. ಆಕೆಯ ವೃದ್ಧಾಪ್ಯವನ್ನು ಸಿದ್ಧಮಾಡಲಿಕ್ಕೆ ಆಕೆಯ ಶುಭ್ರಕೇಶಕಲಾಪದ ಹೊರತು ಎರಡನೆಯ ಸಾಧನಗಳಿದ್ದಿಲ್ಲ. ರಾಜಮಾತೆಯಾದ ಬುದ್ಧಿಮತಿಗೆ ಅಷ್ಟೇನು ದಿನಗಳಾಗಿದ್ದಿಲ್ಲ. ಪತಿಯಾದ ಬಿಂದುಸಾರನು ದೇಹತ್ಯಾಗಮಾಡಿದಂದಿನಿಂದ ಆಕೆಯು ಅಲಂಕಾರಗಳನ್ನು ಮುಟ್ಟಿದ್ದಿಲ್ಲ. ಆಕೆಯು ಸನ್ಯಸ್ತವೇಷದಿಂದ ಕಾಲಹರಣಮಾಡುತ್ತಿದ್ದಳು. ಆದರೂ ಸ್ತ್ರಿಯರಕೋಮಲತ್ವಕ್ಕೆ ಒಪ್ಪದ ತೇಜೋವಿಶೇಷದಿಂದ ಆಕೆಯು ಅಸಾಮಾನ್ಯ ಸ್ತ್ರೀಯೆಂದು ನೋಡುವವರಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ರಾಜಮಾತೆಯಾದ ಬುದ್ಧಿಮತಿಯೊಡನೆ ನಾಲ್ವರು ತರುಣಭಿಲ್ಲದಾಸಿಯರು ಶಸ್ತ್ರಗಳನ್ನು ಧರಿಸಿ, ಶುಭ್ರವಸ್ತ್ರಗಳನ್ನುಟ್ಟುಕೊಂಡು ಸಭಾಮಂಟಪವನ್ನು ಪ್ರವೇಶಿಸಿದರು. ಅವರಲ್ಲಿ ಒಬ್ಬಳ ಹೆಗಲಮೇಲೆ ಕೈಯನ್ನಿಟ್ಟು, ಒಬ್ಬಳ ಕೈಯನ್ನು ಹಿಡಕೊಂಡು ರಾಜಮಾತೆಯು ಮಂದಗಮನದಿಂದ ಬರುತ್ತಿರಲು, ಅಶೋಕನೂ, ವೀತಾಶೋಕನೂ, ರಾಧಾಗುಪ್ತಮಂತ್ರಿಯೂ ಎದ್ದು ನಿಂತು ಆಕೆಯನ್ನು ವಂದಿಸಿದರು. ಆಗ ಬುದ್ಧಿಮತಿಯು ಆಢ್ಯತೆಯಿಂದ ತಲೆಬಾಗಿಸಿ ಅವರ ನಮಸ್ಕಾರಗಳನ್ನು ಸ್ವೀಕರಿಸುತ್ತ, ತನ್ನ ಪೀಠದ ಮೇಲೆ ಕುಳಿತುಕೊಂಡಳು. ಆಮೇಲೆ ಆಕೆಯು ತನ್ನ ದಾಸಿಯರಿಗೆ ಎರಡುಗಳಿಗೆಯವರೆಗ ಹೊರಗೆ ಹೋಗಲಪ್ಪಣೆಕೊಟ್ಟು, ಅಂತಃಕರಣದಲ್ಲಿ ಪ್ರೇಮವಿಲ್ಲದೆ ಹೊರಗೆ ಪ್ರೇಮತೋರಿಸುವ ಸೋಗಿನಿಂದ ಅಶೋಕನನ್ನು ಕುರಿತು—

ಬುದ್ಧಿಮತಿ—ಬಾಳಾ, ಅಶೋಕಾ, ನೀನು ಬಹಳ ಸೊರಗಿದಹಾಗೆ

ಕಾಣುತ್ತೀ ? ಯುದ್ಧದ ದುಷ್ಪರಿಣಾಮವು ನಿನ್ನ ಮೇಲೆ ಆದಂತೆ ತೋರುತ್ತದೆ.

ಅಶೋಕ—ಅವ್ವಾ, ಯುದ್ಧದಿಂದ ನನ್ನ ಶರೀರದಮೇಲೆ ಯಾವಾಗಲೂ ಸತ್ಪರಿಣಾಮವೇ ಆಗುತ್ತದೆ. ಯುದ್ಧವು ನನಗೆ ಸೇರುವದು.

ರಾಧಾಗುಪ್ತ—ಭಗವಾನರವರ ಶರೀರದಮೇಲೆ ಆಗಿರುವ ದುಷ್ಪರಿಣಾಮವು ಯುದ್ಧದ್ದಲ್ಲ, ಚಿಂತೆಯದು.

ಬುದ್ಧಿಮತಿ (ರಾಧಾಗುಪ್ತನನ್ನು ತ್ವೇಷದಿಂದ ನೋಡುತ್ತ)—ಏನು? ಚಿಂತೆಯಪರಿಣಾಮವೇ? ಅಶೋಕನಂಥ ಬಾಲಕನಮೇಲೆ ಯಾವ ಚಿಂತೆಯ ಪರಿಣಾಮವಾಗಬೇಕು? ಗುಡ್ಡದಂಥ ಹಿರಿಯರು ನಾವು ಇರುತ್ತಿರಲು, ಆತನಿಗೇನು ಬಂದಿದೆ? ಮಂತ್ರಿಗಳೇ, ಯುದ್ಧವು ನಡೆದಿರಲು, ಪಕ್ವಾನ್ನಗಳ ಮೇಲೆ ಪಕ್ವಾನ್ನಗಳನ್ನು ಹೊಡೆಯುತ್ತ, ಚಕ್ಕಂದದಿಂದ ಡೇರೆಯಲ್ಲಿ ಹೊರಳಾಡುತ್ತಿರುವ ನೀವು, ಚಿಂತೆಮಾಡುವ ಗುತ್ತಿಗೆಯನ್ನು ಹಿಡಿದರೆ ನೆಟ್ಟಗಾಗಲಿಕ್ಕಿಲ್ಲವೆ?

ಈಮೇರೆಗೆ ರಾಧಾಗುಪ್ತ ಮಂತ್ರಿಯಮೇಲೆ ರಾಜಮಾತೆಯು ಆಕ್ಕಸದಿಂದ ಹರಿಹಾಯುತ್ತಿರಲು, "ಭಿಕ್ಷುಶ್ರೇಷ್ಠ ಸಂಪುಷ್ಪಾಚಾರ್ಯರಿಗೆ ಜಯಜಯಕಾರವು" ಎಂಬ ಕೋಲಾಹಲವು ಸಭಾಮಂಟಪದ ದ್ವಾರದಲ್ಲಿ ಆಗಹತ್ತಿತು. ಅದರಿಂದ ರಾಧಾಗುಪ್ತಮಂತ್ರಿಯಮೇಲೆ ರಾಜಮಾತೆಯು ಸುರಿಸುತ್ತಲಿದ್ದ ಪುಷ್ಪವೃಷ್ಟಿಯು ಅಷ್ಟಕ್ಕೆ ನಿಂತು, ಒಬ್ಬರಹಿಂದೊಬ್ಬರಂತೆ ಎಡೆಬಿಡದೆ ಬೌದ್ಧಭಿಕ್ಷುಗಳು ಸಭಾಸ್ಥಾನವನ್ನು ಪ್ರವೇಶಿಸತೊಡಗಿದರು. ಅವರ ಆವುಗೆಗಳ ಖಣಿಖಟಲೆಂಬ ಧ್ವನಿಪ್ರತಿಧ್ವನಿಗಳಿಂದ ಸಭಾಸ್ಥಾನವು ತುಂಬಿಹೋಯಿತು. ಸರ್ವಾಂಗಕ್ಷೌರವನ್ನು ಮಾಡಿಸಿಕೊಂಡಿದ್ದ ಬೌದ್ಧಭಿಕ್ಷುಗಳೆಲ್ಲರು ಪೀತವಸ್ತ್ರಗಳನ್ನು ಧರಿಸಿ, ಕೈಯಲ್ಲಿ ಕಮಂಡಲುಗಳನ್ನು ಹಿಡಿದಿದ್ದರು. ಸಂಪುಷ್ಪಾಚಾರ್ಯರ ಪ್ರೀತಿಯ ಈ ಶಿಷ್ಯಪರಿವಾರವು, ಅರ್ಧತಾಸುಗಳವರೆಗೆ ಸಭಾಸ್ಥಾನವನ್ನು ಪ್ರವೇಶಿಸಿತು. ಶಿಷ್ಯರು ಒಬ್ಬೊಬ್ಬರೇ ಅಶೋಕನ ಬಳಿಗೆ ಹೋಗಿ " ಭಗವಾನ್ ಅಶೋಕನಿಗೆ ಧರ್ಮವೃದ್ಧಿಯ ಸಲುವಾಗಿ ಯಶಃಪ್ರಾಪ್ತಿಯಾಗಲಿ " ಎಂದು ಆಶೀರ್ವದಿಸುತ್ತ ಸಭಾಮಂಟಪದಲ್ಲಿ ಕುಳಿತುಕೊಳ್ಳು

ತ್ತಿದ್ದರು. ಈ ವಿಧಿಯು ಒಂದೇಸವನೆ ಅರ್ಧ ತಾಸು ನಡೆದು ಮುಗಿದಮೇಲೆ, ಸಂಪುಷ್ಟಾಚಾರ್ಯರು ಕೈಯಲ್ಲ ಸುವರ್ಣದಂಡವನ್ನು ಹಿಡಕೊಂಡು, ಭಿಕ್ಷು ಕುಲಪತಿಯು ಅಧಿಕಾರವನ್ನು ವ್ಯಕ್ತಪಡಿಸುತ್ತ, ಆಢ್ಯತೆಯಿಂದ ಸಭಾಸ್ಥಾನ ವನ್ನು ಪ್ರವೇಶಿಸಿದರು. ಬುರುಕೆಯನ್ನು ಹಾಕಿಕೊಂಡಿದ್ದ ಒಬ್ಬ ತರುಣಿಯು ಅವರನ್ನನುಸರಿಸಿ ಸಾಗಿದ್ದಳು. ಸಂಪುಷ್ಟಾಚಾರ್ಯರ, ಹಾಗು ಕೋಮಲಾಂಗಿ ಯಾದ ತರುಣಿಯ ಈ ಯೋಗವನ್ನು ನೋಡಿ, ಎಲ್ಲರೂ ಆಶ್ಚರ್ಯಮಗ್ನ ರಾದರು. ಈ ಕೋಮಲಾಂಗಿಯಾದ ಸ್ತ್ರೀಯುಯಾರು? ಇಲ್ಲಿಗೆ ಈಕೆಯು ಯಾಕೆ ಬಂದಿರುವಳು? ಸಂಪುಷ್ಟಾಚಾರ್ಯರು ಈಕೆಯನ್ನು ಯಾಕೆ ಬೆನ್ನು ಹತ್ತಿಸಿಕೊಂಡಿರುವರು? ಎಂದು ಕೇಳುವ ಧೈರ್ಯವು ಯಾರಿಗೂ ಇದ್ದಂತೆ ತೋರಲಿಲ್ಲ. ಸಂಪುಷ್ಟಾಚಾರ್ಯರು ವ್ಯಾಸಪೀಠದ ಹತ್ತರಬಂದಕೂಡಲೆ ಅವರು ಅಶೋಕನಮೇಲೆ ಆಶೀರ್ವಚನಗಳ ಮಳೆಸುರಿಸುತ್ತ ತಮ್ಮ ಪೀಠದಲ್ಲಿ ಕುಳಿ ತುಕೊಳ್ಳುತ್ತಿರಲು, ಹತ್ತರ ಕುಳಿತುಕೊಂಡಿದ್ದ ರಾಧಾಗುಪ್ತಮಂತ್ರಿಯು ಅವರ ಕಣ್ಣಿಗೆ ಬಿದ್ದನು. ಕೂಡಲೆ ಆಚಾರ್ಯರು ಪೀಠದಿಂದ ಕೆಳಗೆ ಮುಮುಕಿ ಆಶ್ಚರ್ಯದಿಂದ ಅಶೋಕನನ್ನು ಕುರಿತು—“ ಭಗವನ್,ನಮ್ಮಂಥ ಸಂಸಾರ-ವಿರಕ್ತರನ್ನು ಇಂಥ ಸಬ್ ಗೋಲಂಕಾರದ ಸಭೆಗೆ ಕರಿಸದಿರುವದು ನೆಟ್ಟಗೆ. ಅಧರ್ಮದಿಂದ ನಡೆಯುವ ನರಪಶುಗಳ ನೆರಳಿನ ಮೈಲಿಗೆ ಸಹಲಾಗಬಾರದೆಂದು, ಮನುಷ್ಯವಸತಿಯನ್ನು ಬಿಟ್ಟು ದೂರ ಆರಣ್ಯದಲ್ಲಿ ನಾವು ವಾಸಿಸುತ್ತೇವೆ, ಆದರೆ ನೀವು ಇಂಥ ಧರ್ಮಹೀನ ಮನುಷ್ಯರ ಸಂಸರ್ಗಮಾಡುವದಕ್ಕಾಗಿ ಮೋಸ ಮಾಡುತ್ತೀರಿ ” ಎಂದು ನುಡಿದರು. ಅವರ ಮಾತಿಗೆ ಅಶೋಕನು ಉತ್ತರ ಕೊಡುವದರೊಳಗೆ ರಾಜಮಾತೆಯು ಸಂಪುಷ್ಟಾಚಾರ್ಯರನ್ನು ಕುರಿತು—ಗುರುಮಹಾರಾಜರೇ, ನಮ್ಮಿಂದ ಅಪರಾಧವಾದದ್ದೇನು, ಅಪ್ಪಣೆ ಕೊಡಿಸ ಬೇಕು; ಅಂದರೆ ಕೂಡಲೆ ಆದರ ಪ್ರತಿಕಾರಮಾಡುವೆವು.

ಸಂಪುಷ್ಟಾಚಾರ್ಯ—ರಾಜಮಾತೆಯೇ, ಭಗವಾನ್ ಬುದ್ಧದೇವನು ತಿರಸ್ಕರಿಸಿದ್ದ ವೈದಿಕಧರ್ಮದ ಅಧ್ಯಯನಮಾಡುವ, ನಮ್ಮ ನಿರ್ವಾ ಣಪ್ರಾಪ್ತಿಯ ಮಾರ್ಗವನ್ನು ಹಳಿಯುವ, ಪಾಟಲಿಪುತ್ರ ರಾಜಧಾನಿಗೆ ಲಾಂಛನನಾದ, ಮಗಧದೇಶದ ರಾಜಸಿಂಹಾಸನಕ್ಕೆ ಹತ್ತಿದ ಹುಳದಂತೆ ಇದ್ದ,

ನಮ್ಮ ಧರ್ಮಪ್ರಸಾರಕ್ಕೆ ಅಡ್ಡಾಗಿದ್ದ ರಾಹುವೆನಿಸುವ ಈ ನಿಮ್ಮ ಮಂತ್ರಿ ರಾಧಾಗುಪ್ತನು ಮಗ್ಗಲಲ್ಲಿ ನನ್ನ ಭುಜಕ್ಕೆ ಭುಜವನ್ನು ಆನಿಸಿ ಕುಳಿತು ಕೊಂಡಿರಲು, ನಾನು ಪೀಠದಮೇಲೆ ಕುಳಿತುಕೊಳ್ಳುವದು ಹೇಗೆ?

ರಾಧಾಗುಪ್ತ (ಅಶೋಕನು ಬೇಡವೆನ್ನುತ್ತಿರಲು,)—ಗುರುಮಹಾರಾಜರೇ, ತಮ್ಮಂಥ ಷಡ್ರಿಪುಗಳ ದಮನ ಮಾಡಿದವರಿಗೆ ಇಂಥ ವ್ಯರ್ಥವಾದ ಕೋಪವು ಒಪ್ಪುವದಿಲ್ಲ

ಬುದ್ಧಿಮತಿ[ಕರ್ಕಶಸ್ವರದಿಂದ]—ಮಂತ್ರಿಗಳೇ, ಬೌದ್ಧರ ಸಭೆಗೆಬಂದು ಬುದ್ಧದೇವನ ಪ್ರತಿ ಅವತಾರವೆನಿಸುವ ಸಂಪುಷ್ಟಾಚಾರ್ಯರನ್ನು ಹಳಿಯುವ ನೀವು, ಜೀವವನ್ನು ತೃಣಕ್ಕೆ ಸರಿಮಾಡಿಕೊಂಡಂತೆ ಕಾಣುತ್ತದೆ

ಸಂಪುಷ್ಟಾಚಾರ್ಯ—ನಿಮ್ಮಲ್ಲಿ ಜಾಣತನವೂ, ರಾಜಕಾರಣದ ಪರಿಚಯವೂ ಸ್ವಲ್ಪವಾದರೂ ಇರುತ್ತಿದ್ದರೆ, ಈಗಲೇ ನೀವು ಪೀಠದಿಂದಿಳಿದು ಸಭಾ ಮಂಟಪದಲ್ಲಿ ಕುಳಿತುಕೊಳ್ಳಿರಿ

ಅಶೋಕ (ಜಗಳವನ್ನು ನಿಲ್ಲಿಸುವದಕ್ಕಾಗಿ)—ಗುರುವರ್ಯರೇ, ಹೀಗೆ ಅನ್ಯಾಯವನ್ನು ಮಾಡಬೇಡಿರಿ, ಕಕ್ಕಂದಿರ ಮಾನಹಾನಿಯನ್ನು ಮಾಡಬೇಡಿರಿ. ಅವರು ನಿಜವಾಗಿ ಈ ಸ್ಥಳದಲ್ಲಿ ಕುಳಿತುಕೊಳ್ಳಲಿಕ್ಕೆ ಯೋಗ್ಯರಾದದ್ದರಿಂದ, ನಾನೇ ಅವರನ್ನು ಕುಳ್ಳಿರಿಸಿದ್ದೇನೆ

ಬುದ್ಧಿಮತಿ—ಅಶೋಕಾ, ನಿನಗೆ ಇದೆಲ್ಲಿಯ ಭ್ರಮವು ಉತ್ಪನ್ನವಾಯಿತು? ಪ್ರತ್ಯಕ್ಷ ಬುದ್ಧಾವತಾರವಾದ ಗುರುಮಹಾರಾಜರು, ಪೀಠವನ್ನು ಬಿಟ್ಟು ಇಳಿಯುವದಕ್ಕಾಗಿ ರಾಧಾಗುಪ್ತನನ್ನು ಆಜ್ಞಾಪಿಸುತ್ತಿರಲು, ನೀನು ಗುರುಗಳ ಆಜ್ಞೆಗೆ ವಿರುದ್ಧವಾಗಿ ಮಂತ್ರಿಯನ್ನು ಮೇಲುಗಟ್ಟಿ ಮಾತಾಡುತ್ತೀಯಾ?

ಅಶೋಕ—ಅವ್ವಾ, ಭಿಕ್ಷುಗಳು ಇಂಥ ದುರಭಿಮಾನದ ಅಪ್ಪಣೆಯನ್ನು ಎಂದೂ ಮಾಡಲಾರರು. ಸಮತ್ವ–ಬಂಧುಪ್ರೀತಿ–ಭೂತದಯೆ ಮೊದಲಾದ ಉಚ್ಚತಮ ತತ್ವಗಳನ್ನು ಪ್ರತಿಪಾದಿಸುವ ಯಾವ ನಿಸ್ಸೀಮ ಬುದ್ಧಭಕ್ತನಿಗೇ ಆಗಲಿ, ಕಕ್ಕಂದಿರಂಥ ಪವಿತ್ರಾಚರಣೆಯ ಮನುಷ್ಯರು ತಿರಸ್ಕರಣೀಯರಾಗಿ ತೋರಲಿಕ್ಕಿಲ್ಲ. ಸರ್ವತ್ರ ಸಮದರ್ಶಿಗಳಾದ ನಮ್ಮಂಥ ಬೌದ್ಧ

ರಿಗೆ, ದುರ್ವ್ಯಸನದ ಹರಿಗೆಬಿದ್ದ ದುರ್ಗಂಧಯುಕ್ತ ಶರೀರದ ಮನುಷ್ಯನೂ ಅತ್ಯಂತ ಪ್ರಿಯನಾಗಿರುವನು. ಅಂದಬಳಿಕ ಕಕ್ಕನಂಥ ಸತ್ವಶೀಲ ಮನುಷ್ಯನ ಮಾತೇಕೆ?

ಸಂಪುಷ್ಪಾಚಾರ್ಯ—( ಅಧಿಕಾರಯುಕ್ತವಾಣಿಯಿಂದ ) ಭಗವನ್, ನಿನಗಿಂತ ನಾವು ಬಹಳವರ್ಷ ಪೃಥ್ವಿಯಲ್ಲಿ ಬಾಳಿರುತ್ತೇವೆ. ಬೌದ್ಧಧರ್ಮದ ತತ್ವಗಳು ನಿನಗಿಂತನಮಗೆ ಚನ್ನಾಗಿ ತಿಳಿಯುತ್ತವೆ. ಅವನ್ನು ನಿನ್ನಬಳಿಯಲ್ಲಿ ನಾವು ಕಲಿಯಬೇಕೆನ್ನುವಹಾಗಿಲ್ಲ. ಧರ್ಮಗುರುವಿನ ಆಜ್ಞೆಯನ್ನು ಪಾಲಿಸುವ ಮನಸ್ಸು ನಿನಗಿದ್ದರೆ, ರಾಧಾಗುಪ್ತನನ್ನು ಪೀಠದಿಂದ ಇಳಿಸಿ ಸಭಾಮಂಟಪದಲ್ಲಿ ಕುಳ್ಳಿರಿಸು. ಬೌದ್ಧಸಮಾಜದ ಅಗ್ರಸ್ಥಾನದಲ್ಲಿ ಕುಳಿತುಕೊಳ್ಳುವ ಮಾನವು, ನಮ್ಮಂಥ ಸನ್ಯಾಸಿಗಳಿಗೆ, ಅಥವಾ ಆ ಸನ್ಯಾಸಿಗಳ ಮತದಂತೆ ರಾಜ್ಯಕಾರಭಾರವನ್ನು ಸಾಗಿಸುವ ನಿಮ್ಮಂಥ ರಾಜಕುಲೋತ್ಪನ್ನರಿಗೆ ಮಾತ್ರ ಇರುತ್ತದೆಂಬಮಾತು ಈದಿನ ರಾಧಾಗುಪ್ತನಿಗೆ ಚನ್ನಾಗಿ ಗೊತ್ತಾಗಲಿ.

ಬುದ್ಧಿಮತಿ ( ಸಂತಾಪದಿಂದ )—ರಾಧಾಗುಪ್ತ, ಗುರುಗಳ ಆಜ್ಞೆಯು ನಿಮಗೆ ಕೇಳುವದಿಲ್ಲವೆ? ತಟ್ಟನೆ ಕೆಳಗಿಳಿದು ಸಭಾಮಂಟಪದಲ್ಲಿ ಕುಳಿತುಕೊಳ್ಳಿರಿ.

ರಾಧಾಗುಪ್ತ(ಸಮಾಧಾನದಿಂದ)—ಮಾತೃಶ್ರೀ, ಮಗಧದ ರಾಜ್ಯವು ಬೌದ್ಧಭಿಕ್ಷುಗಳ ಸ್ವಾಧೀನವಾಗುವವರೆಗೆ, ಮಗಧದೇಶದ ರಾಜಮುಕುಟವು ಮೌರ್ಯವಂಶದ ಶಿರಸ್ಸಿನಿಂದ ಅಪಹರಿಸಲ್ಪಟ್ಟದ್ದಾಗಿ ಬೌದ್ಧಭಿಕ್ಷುಗಳ ಮುಂಡನಮಾಡಿದ ಶಿರಸ್ಸಿನಲ್ಲಿ ಸ್ಥಾಪಿತವಾಗುವವರೆಗೆ, ಮಗಧರಾಜ್ಯದ ಸಿಂಹಾಸನವು ಬೌದ್ಧಭಿಕ್ಷುಗಳ ಆವುಗೆಗಳಿಂದ ಮುದ್ರಿತವಾಗುವವರೆಗೆ ರಾಧಾಗುಪ್ತನು ಯಾವ ಬೌದ್ಧ ಭಿಕ್ಷುವಿನ ಆಜ್ಞೆಯ ಮುಂದೆಯೂ ಶಿರಸ್ಸನ್ನು ಬಾಗಿಸಲಾರನು. ಪ್ರಭುಗಳವರ ಅಪ್ಪಣೆಯಾಗುವವರೆಗೆ ಪೀಠದಿಂದಿಳಿಯುವ ಕಾರಣವಿಲ್ಲೆಂದು ನನಗೆ ತೋರುತ್ತದೆ.

ಈ ಮೇರೆಗೆ ರಾಧಾಗುಪ್ತನು ನುಡಿಯಲು, ಸಭಾಮಂಟಪದೊಳಗಿನ ಭಿಕ್ಷುಗಳ ಹಿಂಡು "ರಾಧಾಗುಪ್ತನನ್ನು ಕೆಳಗಿಳಿಸಿರಿ, ರಾಧಾಗುಪ್ತನನ್ನು

ಕೆಳಗಿಳಿಸಿರಿ" ಎಂದು ಗದ್ದಲಮಾಡಹತ್ತಿತು. ನಾಲ್ಕೈದುಂಜನ ಭಿಕ್ಷುಗಳು ರಾಧಾಗುಪ್ತನನ್ನು ಒತ್ತಾಯದಿಂದ ಕೆಳಗಿಳಿಸುವದಕ್ಕಾಗಿ ಮುಂದುವರಿದರು. ಆಗ ಅಶೋಕನು ಸಿಟ್ಟಿನಿಂದ—ಎಚ್ಚರಿಕೆ! ಮುಂದಕ್ಕೆ ಒಂದು ಹೆಜ್ಜೆಯನ್ನಿಟ್ಟರೆ ಪರಿಣಾಮವಾಗಲಿಕ್ಕಿಲ್ಲ ನನ್ನ ಆಜ್ಞೆಯಂತೆ ಪೀಠದಲ್ಲಿ ಕುಳಿತುಕೊಂಡಿರುವ ಕಕ್ಕಂದಿರು ಕೆಳಗಿಳಿಯಲಾರರು. ಆಚಾರ್ಯಮಹಾರಾಜರೇ, ಕಕ್ಕಂದಿರೊಡನೆ ವ್ಯಾಸಪೀಠದಲ್ಲಿ ಕುಳಿತುಕೊಳ್ಳುವ ಇಚ್ಛೆಯು ನಿಮಗಿರದಿದ್ದರೆ, ನಿಮ್ಮ ಸಲುವಾಗಿ ಬೇರೆಯೊಂದು ಉಚ್ಚಪೀಠವನ್ನು ಸಿದ್ಧಪಡಿಸುವೆನು, ಕುಳಿತುಕೊಳ್ಳಬೇಕು. ಇನ್ನುಮೇಲೆ ಅಸಭ್ಯತನದ ಗದ್ದಲವನ್ನು ನಿಲ್ಲಿಸಲಿಕ್ಕೆ ನಾನು ಆಜ್ಞಾಪಿಸುತ್ತೇನೆ, ಅನ್ನಲು, ಇನ್ನು ಹೆಚ್ಚುಬಿಗಿಹಿಡಿದರೆ ಪರಿಣಾಮವಾಗದೆಂದು ತಿಳಿದು, ಸಂಪುಷ್ಟಾಚಾರ್ಯರು ತಮಗಾಗಿ ಸಿದ್ಧಪಡಿಸಿದ ಉಚ್ಚಾಸನದ ಮೇಲೆ ಕುಳಿತುಕೊಂಡರು. ಸಭಾಮಂಟಪವೆಲ್ಲ ನಿಶ್ಶಬ್ದವಾಯಿತು. ಆಗ ಅಶೋಕನು ಆಚಾರ್ಯರನ್ನು ಕುರಿತು—ಸ್ವಾಮೀ, ಆಚಾರ್ಯರೇ, ತಮ್ಮ ಸಂಗಡ ಬಂದಿರುವ ಈ ಭಿಕ್ಷು ಮಂಡಲವೂ, ಈ ತರುಣ ಸ್ತ್ರೀಯೂ ವಿಶ್ವಾಸಕ್ಕೆ ಪಾತ್ರರಿರುವರಲ್ಲವೇ? ನಾವು ಇಲ್ಲಿ ಒಂದು ಮಹತ್ವದ ರಾಜಕಾರಣವನ್ನು ಕುರಿತು ಆಲೋಚಿಸಬೇಕಾಗಿದೆ, ಆ ಸಂಗತಿಯು ಅತ್ಯಂತ ಗುಪ್ತವಾಗಿರಬೇಕೆಂದು ನಾನು ಇಚ್ಛಿಸುವೆನು. ಎಂದನು. ಅದಕ್ಕೆ ಸಂಪುಷ್ಟಾಚಾರ್ಯರು ಸ್ವಲ್ಪ ತಲೆಯಲ್ಲಾಡಿಸಿ—ಏನೂ ಚಿಂತೆಯಿಲ್ಲ. ಅವಶ್ಯವಾಗಿ ಆಲೋಚಿಸಬಹುದು, ಎಂದು ಹೇಳಲು, ಅಶೋಕನು ರಾಜಮಾತೆಯನ್ನೂ, ಆಚಾರ್ಯರನ್ನೂ ಕುರಿತು—ಪೂಜ್ಯರೇ, ಕಲಿಂಗದೇಶವನ್ನು ಗೆದ್ದು, ಅಲ್ಲಿಯ ಪ್ರಜೆಗಳನ್ನು ಬೌದ್ಧರನ್ನು ಮಾಡಬೇಕೆಂದು ಆ ದೇಶದೊಡನೆ ಯುದ್ಧವನ್ನು ಆರಂಭಿಸಿ, ಮೂರುವರ್ಷಗಳಾದವು. ಮೊದಲು ಸುತ್ತುಮುತ್ತಲಿನ ಸಣ್ಣ ಸಣ್ಣ ರಾಜ್ಯಗಳನ್ನು ಗೆದ್ದೆವು. ಕಲಿಂಗರಾಜನು ನಮ್ಮೊಡನೆ ಶರೀರ ಸಂಬಂಧ ಮಾಡಲು ಒಪ್ಪಿಕೊಳ್ಳದ್ದರಿಂದ, ಇಂದ್ರಪುರವನ್ನು ಮುತ್ತಿ ಈವೊತ್ತಿಗೆ ನಾಲ್ಕು ತಿಂಗಳಾಯಿತು. ಇಂದ್ರಪುರವೊಂದು ಸ್ವಾಧೀನವಾದರೆ ದಿಗ್ವಿಜಯವು

ಮುಗಿದಂತಾಗುವದು; ಆದರೆ ಈ ಯುದ್ಧದಲ್ಲಿ ನಮಗೆ ಜಯಪ್ರಾಪ್ತಿಯಾಗುವ ಲಕ್ಷಣವು ತೋರುವದಿಲ್ಲ. ಶತ್ರುಗಳ ಹೊಡತದಿಂದಲೂ, ರೋಗಬಾಧೆಯಿಂದಲೂ ನಮ್ಮ ಸೈನ್ಯದ ಸಂಹಾರವು ಮಿತಿಮೀರಿ ಆಯಿತು. ಮುತ್ತಿಗೆ ಹಾಕುವಾಗ ಇದ್ದ ಸೈನ್ಯದ ಕಾಲುಪಾಲು ಸೈನ್ಯವು ಈಗ ಉಳಿದಿರುವದಿಲ್ಲ. ಈಗ ಉಳಿದಿರುವ ಸೈನ್ಯವೂ ಮುಖ್ಯವಾಗಿ ರೋಗಬಾಧೆಯಿಂದ ಸ್ವಲ್ಪ ದಿನಗಳಲ್ಲಿ ನಾಶಹೊಂದಬಹುದಾಗಿದೆ; ಆದ್ದರಿಂದ ಇನ್ನುಮುಂದೆ ಯುದ್ಧವನ್ನು ಸಾಗಿಸಬೇಕೋ, ಒಡಂಬಡಿಕೆಯನ್ನು ಮಾಡಿಕೊಂಡು ತಿರುಗಿ ಪಾಟಲೀಪುತ್ರಕ್ಕೆ ಹೋಗಬೇಕೋ ಎಂದು ಕೇಳುವದಕ್ಕಾಗಿ ನಿಮ್ಮನ್ನು ಕರೆಯಿಸಿರುತ್ತದೆ. ಎಂದು ನುಡಿದು ರಾಜಮಾತೆಯ ಹಾಗು ಸಂಪುಷ್ಟಾಚಾರ್ಯರ ಮುಖದಿಂದ ಏನು ಉತ್ತರಬರುತ್ತದೆಂಬವರ ಹಾದಿಯನ್ನು ನೋಡುತ್ತ ಕುಳಿತುಕೊಂಡನು. ಆಗ

ಬುದ್ಧಿಮತಿ—ಶತ್ರುಗಳ ವರ್ಚಸ್ಸನ್ನು ಒಪ್ಪಿಕೊಂಡು ಅವರ ಅಪ್ಪಣೆಗೆ ತಲೆಹಾಕುವ ಅಪಮಾನದ ಪ್ರಸಂಗವು ಬೌದ್ಧ ಸಾಮ್ರಾಟನಿಗೆ ಇನ್ನೂ ಬಂದಿರುವದಿಲ್ಲ.

ಸಂಪುಷ್ಟಾಚಾರ್ಯ — ಧರ್ಮಪ್ರಸಾರದಸಲುವಾಗಿ ಮಾಡುವ ಯುದ್ಧಗಳಲ್ಲಿ ಬೌದ್ಧಭೂಪತಿಗೆ ಇಂದಿನವರೆಗೆ ಅಪಯಶಸ್ಸು ಬಂದಿರುವದಿಲ್ಲ.

ಅಶೋಕ—ರಕ್ತಪಾತಮಾಡಿ ಒತ್ತಾಯದಿಂದ ಧರ್ಮವನ್ನು ಹಬ್ಬಿಸುವದು ಬುದ್ಧದೇವನಿಗೆ ಸಮ್ಮತವಲ್ಲ. ಬ್ರಾಹ್ಮಣರ ಯಜ್ಞಯಾಗಾದಿಗಳಲ್ಲಿ ಆಗುವ ಪ್ರಾಣಿಹಿಂಸೆಯನ್ನು ನೋಡಿ ಕಸಿಕರಪಟ್ಟು ಬೌದ್ಧಧರ್ಮವನ್ನು ಸ್ಥಾಪಿಸಿದ ಆ ತಥಾಗತನು, ಜನರನ್ನು ಹಿಂಸೆ ಪಡಿಸಿ ಧರ್ಮವನ್ನು ಹಬ್ಬಿಸಲು ಆಜ್ಞಾಪಿಸಬಹುದೋ?

ರಾಜಮಾತೆ—(ಸಿಟ್ಟಿನಿಂದ) ಹೀಗೆ ಧರ್ಮದ ನೆವದಿಂದ ಯುದ್ಧವನ್ನು ನಿಲ್ಲಿಸಿ ಒಡಂಬಡಿಕೆ ಮಾಡಿಕೊಳ್ಳುವದು ನಿನ್ನಂಥ ಶೂರನಿಗೆ ಒಪ್ಪುವದಿಲ್ಲ. ಮೃಗೇಂದ್ರನು ಮಾಡಿದ ಅಪಮಾನವನ್ನು ನೀನು ಮರೆತೆಯೋ? ಸೇಡು ತೀರಿಸಿಕೊಳ್ಳುವ ವಿಷಯದಲ್ಲಿ ಮೌರ್ಯಕುಲವು ಪ್ರಸಿದ್ಧ

ವಾದದ್ದು. ಕ್ಷುಲ್ಲಕ ತಪ್ಪಿಗಾಗಿ ನಂದಕುಲವನ್ನೇ ನಾಶಮಾಡಿ ನಿನ್ನ ಅಜ್ಜನಾದ ಚಂದ್ರಗುಪ್ತನನ್ನು ಮಗಧ ರಾಜ್ಯದ ಪಟ್ಟಕ್ಕೆ ಕುಳ್ಳಿರಿಸಿದ ಚಾಣಿಕ್ಯನ ನೀತಿಯನ್ನು, ಮೌರ್ಯರು ಮೂರೇ ತಲೆಗಳಲ್ಲಿ ಮರೆಯುವದು ಅಸಂಭವವಾಗಿರುವದು. ಅಶೋಕರಾಜನೇ, ಯುದ್ಧವನ್ನು ಮುಂದಕ್ಕೆ ಸಾಗಿಸಲೇಬೇಕು.

ಸಂಪುಷ್ಟಾಚಾರ್ಯ—ಪ್ರಭುಗಳು ಯುದ್ಧವನ್ನು ನಡಿಸಲೇಬೇಕು.

ಅಶೋಕ—ಯುದ್ಧದ ವಿಷಯವಾಗಿ ಮತವನ್ನು ಕೇಳುವದಕ್ಕಾಗಿ ನಿಮ್ಮನ್ನು ಕರೆಸಿರುವೆನಲ್ಲದೆ, ನಿಮ್ಮ ಅಪ್ಪಣೆಯನ್ನು ಕೇಳುವದಕ್ಕಾಗಿ ನಾನು ಕರೆಸಿರುವದಿಲ್ಲ. ರಾಜಕಾರಣಕ್ಕೆ ಸಂಬಂಧಿಸಿದ ನಿಮ್ಮ ಅಯೋಗ್ಯ ಅಪ್ಪಣೆಯನ್ನಂತು ನಾನು ಸರ್ವಥಾ ನಡಿಸಲಾರೆನು. ಮೃಗೇಂದ್ರನು ಅಪರಾಧಿಯಲ್ಲ. ನಮ್ಮ ಧರ್ಮಪ್ರಸಾರಕ್ಕೆ ಆತನು ಪ್ರತಿಬಂಧ ಮಾಡಿರುವದಿಲ್ಲ ತನ್ನ ಮಗಳನ್ನು ತನ್ನ ಮನಸ್ಸಿಗೆ ಬಂದವರಿಗೆ ಕೊಡಲು ಆತನು ಸ್ವತಂತ್ರನಾದದ್ದರಿಂದ, ನಮ್ಮೊಡನೆ ಶರೀರಸಂಬಂಧವನ್ನು ಮಾಡಲಿಕ್ಕೆ ನಿರಾಕರಿಸುವದರಿಂದ ಆತನು ನಮ್ಮ ಅಪಮಾನಮಾಡಿದಹಾಗೂ ಆಗುವದಿಲ್ಲ

ಬುದ್ಧಿಮತಿ—ನಿನ್ನ ಅಪಮಾನವಾಗದಿದ್ದರೆ, ಹಾಗೂ ಯುದ್ಧದಿಂದ ಧರ್ಮಪ್ರಸಾರ ಮಾಡುವದು ಅಯೋಗ್ಯವಾಗಿದ್ದರೆ ನೀನು ಮೃಗೇಂದ್ರನೊಡನೆ ಯುದ್ಧವನ್ನು ಯಾಕೆ ಆರಂಭಿಸಿದೆ?

ಅಶೋಕ—ಯುದ್ಧವನ್ನು ಆರಂಭಿಸುವಾಗ ಅಶೋಕನು ಅಂಧನಾಗಿದ್ದನು. ಆಗ ಆತನು ಸ್ವತಂತ್ರ ವಿಚಾರದಿಂದ ನಡೆಯುತ್ತಿದ್ದಿಲ್ಲ. ರಾಜಮಾತೆಯ ವಿಚಾರದಂತೆ, ಉಪಧ್ಯಾಯಿಗಳಾದ ಭಿಕ್ಷುಗಳ ವಿಚಾರದಂತೆ, ಸಂಪುಷ್ಟಾಚಾರ್ಯರ ವಿಚಾರದಂತೆ ನಡೆಯುತ್ತಿದ್ದನು. ಆದ್ದರಿಂದ ಬುದ್ಧದೇವನ ಅತ್ಯಂತ ಪವಿತ್ರವಾದ ಧರ್ಮತತ್ವಗಳಿಗೆ ಕುಂದನ್ನುಂಟುಮಾಡುವಂಥ, ಮನುಷ್ಯತ್ವಕ್ಕೆ ಲಾಂಛನಾಸ್ಪದವಾದಂಥ, ಪಾಷಾಣವೂ ಕರಗಿ ನೀರಾಗುವಂಥ ಕ್ರೂರಕೃತ್ಯಗಳು ಆತನಿಂದ ಘಟಿಸಿದವು; ಅದಕ್ಕಾಗಿ ಆತನಿಗೆ ಈಗ ಪೂರ್ಣ ಪಶ್ಚಾತ್ತಾಪವಾಗಿದೆ. ಮಾತೃಶ್ರೀ, ನಿನ್ನ

ಮಹತ್ವಾಕಾಂಕ್ಷೆಯ ಬಲೆಗೆಬಿದ್ದು, ಆಚಾರ್ಯರೇ, ಸ್ವತತ್ವವಿಘಾತಕಗ ಳಾದ ನಿಮ್ಮ ಮತಗಳ ಮೇಲೆ ಅಂಧಶ್ರದ್ಧೆಯನ್ನಿಟ್ಟು, ನಿಜವಾದ ಬೌದ್ಧರಿಗೆ ಲಾಂಛನಾಸ್ಪದವಾದ ಕ್ರೂರಕೃತ್ಯಗಳನ್ನು ನಾನು ಮಾಡಿ ದೆನು. ಈಗ ನಾನು ಜಾಗರೂಕನಾಗಿದ್ದೇನೆ. ಧರ್ಮಪ್ರಸಾರದ ಸಲುವಾಗಿ ಇಂದಿನಿಂದ ನನ್ನ ಖಡ್ಗವು ಒರೆಯಿಂದ ಹೊರಬೀಳದು. ಇದು ನನ್ನ ಪೂರ್ಣ ನಿಶ್ಚಯವು. ನಾಳಿಗೇ ಮೃಗೇಂದ್ರನೊಡನೆ ಒಡಂಬಡಿಕೆಯನ್ನು ಮಾಡಿ, ಪಾಟಲೀಪುತ್ರಕ್ಕೆ ಹೋಗುವೆನು.

ಅಶೋಕನ ಇಂದಿನ ವಿಚಾರಗಳನ್ನೂ, ಆತನ ಸ್ವಾತಂತ್ರ್ಯದ ವಿಲಕ್ಷಣ ತೇಜಸ್ಸನ್ನೂ ನೋಡಿ ಎಲ್ಲರೂ ದಂಗಾಗಿ ಕುಳಿತುಕೊಂಡರು ಎಷ್ಟು ಹೊತ್ತಾದರೂ ಒಬ್ಬರ ಮುಖದಿಂದಲೂ ಮಾತುಗಳು ಹೊರಡದಾದವು. ಆಗ ಅಶೋಕು—ನಿಮ್ಮೆಲ್ಲರ ಮೌನದಿಂದ ಒಡಂಬಡಿಕೆಯ ವಿಚಾರಕ್ಕೆ ನಿಮ್ಮ ಒಪ್ಪಿ ಗೆಯಿರುವದೆಂದು ತಿಳಿಯುವೆನು, ಎಂದು ನುಡಿಯಲು, ಸಂಪುಷ್ಟಾ ಚಾರ್ಯರು—

ಸಂಪುಷ್ಟಾಚಾರ್ಯ—ಭಗವನ್, ಏನೇ ಆಗಲಿ, ಈವರೆಗೆ ಯುದ್ಧ ಮಾಡಿದಂತೆ ಇನ್ನು ಎರಡು ದಿನ ಯುದ್ಧಮಾಡಿರಿ. ಅಷ್ಟರಲ್ಲಿ ತಮಗೆ ಯಶಸ್ಸು ದೊರೆಯದಿದ್ದರೆ ಒಡಂಬಡಿಕೆಯನ್ನು ಮಾಡಿಕೊಳ್ಳಬಹುದು.

ಅಶೋಕ—ಧರ್ಮಪ್ರಸಾರಕ್ಕಾಗಿ ಯುದ್ಧಮಾಡಲಿಕ್ಕಿಲ್ಲೆಂದು ನಾನು ಆಡಿದ ನಿರ್ಧಾರದ ಮಾತಿನಲ್ಲಿ ನಿಮ್ಮ ವಿಶ್ವಾಸವಿಲ್ಲದಿದ್ದರೆ, ಬುದ್ಧದೇವನ ನಿರ್ಮ ಲಕೀರ್ತಿಯನ್ನು ಸ್ಮರಿಸಿ ಪ್ರತಿಜ್ಞೆಮಾಡಿ ಹೇಳುತ್ತೇನೆ, ಕೇಳಿರಿ. ಧರ್ಮ ಪ್ರಸಾರಕ್ಕಾಗಿ ಇನ್ನು ಎಂದೂ ಅಶೋಕನು ಯುದ್ಧವನ್ನು ಮಾಡಲಾರನು.

ಸಂಪುಷ್ಟಾಚಾರ್ಯ [ ದೈನ್ಯದಿಂದ ]—ಭಗವನ್, ಎರಡೇ ದಿನಗಳ ಅವಕಾಶವನ್ನು ಬೇಡಿಕೊಳ್ಳುತ್ತೇನೆ.

ರಾಧಾಗುಪ್ತ—ಪ್ರಭುಗಳೇ, ಆಚಾರ್ಯರ ಮಾತನ್ನು ತಾವು ನಡಿಸ ಬೇಕು. ತಾವು ಯುದ್ಧವನ್ನು ಮಾಡದಿದ್ದರೆ, ಆಚಾರ್ಯರು ಸೇನಾಪತಿಯ ಅಧಿಕಾರವನ್ನು ಬೇರೆ ಯಾರಿಗಾದರೂ ಕೊಡುವರು, ಇಲ್ಲವೆ ಸ್ವತಃ ತಾವಾ ದರೂ ಸ್ವೀಕರಿಸುವರು. ಭಿಕ್ಷುಗಳಿಗೆ ಒಮ್ಮೆ ಯುದ್ಧದ ಶಿಕ್ಷಣವು ದೊರೆತರೆ

ನೆಟ್ಟಗಾಗುವದು.

ಅಶೋಕ—ನಾಳಿನ ಬೆಳಗಿನಿಂದ ನಾಡದು ಸಾಯಂಕಾಲದವರೆಗೆ ನನ್ನ ಯಾವತ್ತು ಸೈನ್ಯವು ಸಂಪುಷ್ಟಾಚಾರ್ಯರ ಅಪ್ಪಣೆಯಲ್ಲಿ ನಡಕೊಳ್ಳುವದು. ನಾಡದು ಸೂರ್ಯಾಸ್ತಕ್ಕೆ ಯುದ್ಧವು ಮುಗಿಯಲೇ ಬೇಕು.

ಸಂಪುಷ್ಟಾಚಾರ್ಯ—ಬರೇಮುಗಿಯುವದೇ ಏಕೆ, ಇಂದ್ರಪುರದ ಕೋಟೆಯ ಮೇಲೆ ಪಾಟಲೀಪುತ್ರದ ಶುಭ್ರಪತಾಕೆಯು ನಟ್ಟು ಯುದ್ಧವು ಮುಗಿಯುವದು.

ಅಶೋಕ— ನಾಲ್ಕು ತಿಂಗಳಲ್ಲಿ ನಮ್ಮಿಂದಾಗದ ಕಾರ್ಯವನ್ನು, ಎರಡು ದಿನಗಳಲ್ಲಿ ಮಾಡುವೆನೆಂದು ಹೇಳುವ ಮಾತು ಶೂರರಿಗೆ ಒಪ್ಪುವದಿಲ್ಲ, ನಿಮ್ಮಂಥ ಭಿಕ್ಷುಂಗಳಿಗೆ ಒಪ್ಪುವದು.

ಸಂಪುಷ್ಟಾಚಾರ್ಯ—ಅಶೋಕನಿಂದ ಮೂರುವರ್ಷ ನಾಲ್ಕು ತಿಂಗಳಲ್ಲಿ ಆಗದ ಕಾರ್ಯವನ್ನೇ ಸಂಪುಷ್ಟಾಚಾರ್ಯನು ಎರಡು ದಿನಗಳಲ್ಲಿ ಮಾಡಿ ತೋರಿಸುವನು. ಬಹಳ ಮಾತಾಡುವದರಲ್ಲಿ ಅರ್ಥವಿಲ್ಲ, ನನ್ನ ಮಾತಿನ ಸತ್ಯತೆಯ ಅನುಭವವು ಪ್ರಭುಗಳಿಗೆ ಆಗಬಹುದು.

ಸಂಪುಷ್ಟಾಚಾರ್ಯರು ಕೈಕೊಂಡಿದ್ದ ಕಾರ್ಯವು ತೀರ ಅಸಂಗತವಾದ ದ್ದರಿಂದ, ಅವರ ಮಾತು ಉತ್ತರಕೊಡಲಿಕ್ಕೆ ಯೋಗ್ಯವಲ್ಲದಷ್ಟು ಲಘುತ್ವ ವುಳ್ಳದ್ದೆಂದು ತಿಳಿದು, ಅಶೋಕನು ತಿರುಗಿ ಮಾತಾಡದೆ, ರಾಧಾಗುಪ್ತನ ಕೈಯನ್ನು ಹಿಡಕೊಂಡು ತನ್ನ ಡೇರೆಗೆ ಹೊರಟುಹೋದನು.

---

## ೪ನೆಯ ಪ್ರಕರಣ--ಸ್ತ್ರೀಚಾರಿತ್ರ್ಯ.



ಮರುದಿನ ಬೆಳಗಾಯಿತು. ಎಳಿಯಬಿಸಿಲು ಮೃಗೇಂದ್ರನ ಅರಮನೆಯ ಶಿಖರಗಳನ್ನು ಅಲಂಕರಿಸತೊಡಗಿತು. ಮೃಗೇಂದ್ರನ ಸೈನಿಕರು ಬೌದ್ಧ

ಸೇನೆಯ ಚಲನವಲನವನ್ನು ನೋಡುವದಕ್ಕಾಗಿ ಇಂದ್ರಪುರದ ಕೋಟೆಯ ಗೋಡೆಯ ಮೇಲೆ ತಿರುಗಹತ್ತಿದರು. ಆದರೆ ಪ್ರತಿನಿತ್ಯದಂತೆ ಸೈನ್ಯದಲ್ಲಿ ಲಕಲಕಿಸುತ್ತಿದ್ದ ಅಶೋಕನ ಸುವರ್ಣಮುಕುಟವು ಕಾಣದಾಯಿತು. ಮತ್ತು ಸೈನಿಕರು ಯುದ್ಧಕ್ಕೆ ಸನ್ನದ್ಧರಾಗದೆ ಸ್ವಸ್ಥವಾಗಿ ಕುಳಿತಿದ್ದರು. ಮಗಧ ದೇಶದ ಶುಭ್ರಯಶೋಧ್ವಜವು ಇಂದ್ರಪುರದ ಸಮರಾಂಗಣದಲ್ಲಿ ನರ್ತಿಸದೆ, ಅದು ಇನ್ನೂ ಅಶೋಕನ ಡೇರೆಯ ಹೊರಮಗ್ಗಲಲ್ಲಿ ಒಪ್ಪುತ್ತಿತ್ತು. ಇದನ್ನೆಲ್ಲ ನೋಡಿ ಆಶ್ಚರ್ಯಮಗ್ನನಾದ ಮೃಗೇಂದ್ರನಿಗೆ ಅಶೋಕನ ವಿಚಾರವು ತಿಳಿಯದಾಯಿತು. ಮೆಲ್ಲಮೆಲ್ಲನೆ ನಾಲ್ಕು ಗಳಿಗೆ ಹೊತ್ತು ಏರಿದರೂ ಅಶೋಕನ ಸೈನ್ಯವು ಸ್ಥಳಬಿಟ್ಟು ಕದಲಲಿಲ್ಲ. ಅಶೋಕನು ಯುದ್ಧವನ್ನು ನಿಲ್ಲಿಸಿ ಸೈನ್ಯದೊಡನೆ ತನ್ನ ರಾಜಧಾನಿಗೆ ಹೋಗುವ ವಿಚಾರ ಮಾಡಿರಬಹುದೆಂದು ಮೃಗೇಂದ್ರನು ಮೊದಲು ತರ್ಕಿಸಿದನು; ಆದರೆ ಅಶೋಕನು ಯಶಸ್ಸನ್ನು, ಇಲ್ಲವೆ ಮರಣವನ್ನು ಅಲ್ಲದೆ ಬೇರೊಂದನ್ನು ಆರಿಸಿಕೊಳ್ಳನೆಂತಲೂ, ಹಟಮಾರಿಗಳಾದ ಬೌದ್ಧರು ಎಂದಿಗೂ ಯುದ್ಧವನ್ನು ನಿಲ್ಲಿಸರೆಂತಲೂ ಆತನ ಮನಸ್ಸಿಗೆ ತೋರಿದ್ದರಿಂದ, ಏನೆಂಬದನ್ನು ನಿಶ್ಚಯಿಸಲು ಆತನು ಅಸಮರ್ಥನಾದನು ಮಂತ್ರಿಯಾದ ವಿಶಾಖಾನಂದನನ್ನು ಕರೆಸಿಕೊಂಡು ಕೇಳುವವರೆಗೆ ಮನಸ್ಸು ನಿಲ್ಲದ್ದರಿಂದ, ಆತನು ಕುದುರೆಯನ್ನು ಸರಕ್ಕನೆ ತಿರುಗಿಸಿ ವಿದ್ಯುದ್ವೇಗದಿಂದ ಮಂತ್ರಿಯ ಮನೆಗೆ ಹೋದನು ಬೌದ್ಧರು ತನ್ನ ರಾಜಧಾನಿಗೆ ಮುತ್ತಿಗೆ ಹಾಕಿದಂದಿನಿಂದ, ತನ್ನ ವೃದ್ಧಮಂತ್ರಿಗೆ ಆಯಾಸವಾಗಬಾರದೆಂದು ಮೃಗೇಂದ್ರನು ಮೇಲಿಂದಮೇಲೆ ಮಂತ್ರಿಯ ಮನೆಗೆ ತಾನಾಗಿ ಹೋಗುತ್ತಿದ್ದನು. ಆದ್ದರಿಂದ ಅರಸನು ಈಗ ಆಕಸ್ಮಿಕವಾಗಿ ಬಂದದ್ದಕ್ಕಾಗಿ ಮಂತ್ರಿಯ ಸೇವಕರಿಗೆ ಆಶ್ಚರ್ಯವಾಗಲಿಲ್ಲ. ಅವರಲ್ಲಿ ಒಬ್ಬನು ಕುದುರೆಯನ್ನು ಹಿಡಕೊಂಡು ನಿಂತನು; ಮತ್ತೊಬ್ಬನು ವಿಶಾಖಾನಂದನ ಬಳಿಗೆ ಆತನನ್ನು ಕರಕೊಂಡು ಹೋದನು. ಆಗ ವಿಶಾಖಾನಂದನು ಗುಪ್ತಚಾರರ ಮುಖದಿಂದ ಯುದ್ಧವಾರ್ತೆಯನ್ನು ಕೇಳುತ್ತ ಕುಳಿತುಕೊಂಡಿದ್ದನು. ಆತನು ಮೃಗೇಂದ್ರನನ್ನು ನೋಡಿದಕೂಡಲೆ ಸ್ವಲ್ಪ ಎದ್ದುನಿಂತು ನಗೆಮೊಗದ ಸ್ವಾಗತಮಾಡಿದನು. ಆಗ ಮೃಗೇಂದ್ರನು

ವಿಶಾಖಾನಂದನನ್ನು ಕುರಿತು ಆತುರದಿಂದ—

ಮೃಗೇಂದ್ರ—ಮಂತ್ರಿವರರೆ, ಇಂದು ಬೌದ್ಧರು ಶಾಂತರಾಗಿರುತ್ತಾರೆ. ಅವರು ತಮ್ಮ ಪಾಳಯದಲ್ಲಿ ಸ್ವಸ್ಥವಾಗಿ ಕುಳಿತುಕೊಂಡಿರುವರು. ಇದಕ್ಕೆ ಕಾರಣವೇನಿರಬಹುದು!

ವಿಶಾಖಾನಂದ—ಪ್ರಭುಗಳೇ, ಈ ಶಾಂತತೆಯ ಲಕ್ಷಣವು ನೆಟ್ಟಗೆ ಕಾಣುವದಿಲ್ಲ. ಅಶೋಕರಾಜನು ಒಡಂಬಡಿಕೆ ಮಾಡಿಕೊಳ್ಳಬೇಕೆನ್ನು ತ್ತಾನಂತೆ, ಅದಕ್ಕಾಗಿ ಆತನು ಯುದ್ಧವನ್ನು ನಿಲ್ಲಿಸಿರುವನೆಂದು ಸುದ್ದಿಯು ಬಂದದೆ.

ಮೃಗೇಂದ್ರ—ಏನು! ಅಶೋಕರಾಜನು ಒಡಂಬಡಿಕೆ ಮಾಡಿಕೊಳ್ಳಲು ಒಪ್ಪಿದನೊ!!! ಈ ಆನಂದದ ಸುದ್ದಿಯನ್ನು ಯಾರು ತಂದರು?

ವಿಶಾಖಾನಂದ—ಪ್ರಭುಗಳೇ, ಸ್ವಲ್ಪ ತಡೆಯಬೇಕು. ಈಗಲೆ ಇನಾಮು ಕೊಡಹೋಗಬಾರದು. ಈ ಸುದ್ದಿಯನ್ನು ಒಬ್ಬನೇ ಚಾರನು ತಂದಿರದೆ, ಬೇರೆ ಬೇರೆ ವೇಷಗಳನ್ನು ಹಾಕಿಕೊಂಡು ಹೋಗಿದ್ದ ನನ್ನ ಎಂಟು-ಹತ್ತು ಜನ ಚಾರರು ತಂದಿರುವರು.

ಮೃಗೇಂದ್ರ—ಹೀಗಿದ್ದರೆ, ಸುದ್ದಿಯು ಮತ್ತಿಷ್ಟು ವಿಶ್ವಸನೀಯವಾ ಯಿತು, ಎಲ್ಲರೂ ಇನಾಮು ಪಡೆಯಲಿ.

ವಿಶಾಖಾನಂದ—ಆದರೆ ಈ ಸುದ್ದಿಯು ನನಗೆ ವಿಶ್ವಸನೀಯವಾಗಿ ತೋರುವದಿಲ್ಲ; ಎಂಟು ಹತ್ತು ಜನರು ಒಂದೇ ಸುದ್ದಿಯನ್ನು ಹೇಳಿದ್ದರಿಂದಂತು, ಅದರಲ್ಲಿ ಏನಾದಗೂ ಮೋಸವಿರಬೇಕೆಂದು ನಾನು ತರ್ಕಿಸುತ್ತೇನೆ. ಒಡಂಬ ಡಿಕೆಯನ್ನು ಮಾಡಿಕೊಳ್ಳುವದು ಅಪಮಾನಕರವಾಗಿದ್ದು, ಬೌದ್ಧರು "ನಾವು ಒಪ್ಪಂದಮಾಡಿಕೊಳ್ಳುತ್ತೇವೆ" ಎಂದು ಆನಂದದಿಂದ ಅನ್ನಹತ್ತಿದ್ದಾರೆ. ಆದ್ದರಿಂದ ಈ ಸುದ್ದಿಯು ಸುಳ್ಳು. ಬೇಗನೆ ನಮ್ಮ ಮೇಲೆ ಭಯಂಕರ ಸಂಕ ಟವು ಒದಗುವದೆಂದು ನಾನು ತರ್ಕಿಸುತ್ತೇನೆ.

ಮೃಗೇಂದ್ರ—ಮಂತ್ರಿವರ್ಯರೇ, ಸುದ್ದಿಯು ಸುಳ್ಳೆಂದು ಹೇಳುವ ಹಾಗಿಲ್ಲ. ಈ ವರೆಗೆ ಬೌದ್ಧರ ಅಸಂಖ್ಯ ಸೈನ್ಯವು ನಾಶವಾಗಿರುತ್ತದೆ. ದಿನಾಲು ಸಾವಿರಾರು ಜನರು ಸಾವಿಗೆ ಈಡಾಗುತ್ತಲಿದ್ದಾರೆ. ಇಂಥ ಹೊತ್ತಿನಲ್ಲಿ ಎಲ್ಲ

ಶನ್ನು ಮೃತ್ಯುವಿಗೆ ಆಹುತಿ ಕೊಡುವದಕ್ಕಿಂತ, ಸದ್ಯಕ್ಕೆ ಒಡಂಬಡಿಕೆ ಮಾಡಿಕೊಂಡು ಹೋಗುವದೇ ಅಶೋಕನಿಗೆ ಹಿತಕರವಾಗಿರುತ್ತದೆ.

ವಿಶಾಖಾನಂದ—ಕಲಿಂಗಭೂಪತಿಯೇ, ಈವರೆಗೆ ಅಶೋಕನು ಎಂದಾದರೂ ಯುದ್ಧದಲ್ಲಿ ಹಿಂದಕ್ಕೆ ಸರಿದಿರುವನೇ? ವಿಜಯವನ್ನು ಸಂಪಾದಿಸದೆ ಮೌರ್ಯ ಸಾಮ್ರಾಟನು ಎಂದಾದರೂ ವೈರಿಗಳಿಗೆ ಬೆನ್ನು ತೋರಿಸಿರುವನೇ? ಒಡಂಬಡಿಕೆಯ ವಿಚಾರವು ಮಗಧಭೂಪತಿಗೆ ಸ್ವಪ್ನದಲ್ಲಿ ಕೂಡ ಎಂದಾದರೂ ಬಂದಿರುವದೇ?

ಮೃಗೇಂದ್ರ[ಅಭಿಮಾನದಿಂದ]—ಕಲಿಂಗಭೂಪತಿಯ ಸ್ಥಿತಿಯಾದರೂ ಹಾಗೆಯೇ ಇರುತ್ತದೆ. ಅಶೋಕನು ಈ ಯುದ್ಧದಲ್ಲಿ ಹಿಂದಕ್ಕೆ ಸರಿಯಲೇ ಬೇಕಾಗುವದು; ಆತನು ಜಯವನ್ನು ಸಂಪಾದಿಸದೆ ನಮಗೆ ಬೆನ್ನು ತೋರಿಸಿ ಪಾಟಲೀಪುತ್ರಕ್ಕೆ ಹೋಗಲೇಬೇಕಾಗುವದು. ಈ ಅಭಿಮಾನಿಯಾದ ಮೃಗೇಂದ್ರನ ಮುಂದೆ ಅಶೋಕನು ಒಡಂಬಡಿಕೆಯ ಮಾತನ್ನು ತೆಗೆಯಲೇಬೇಕಾಗುವದು. ಮುತ್ಸದ್ದಿಗಳೆನಿಸುವ ನಿಮ್ಮಂಥವರ ಜನ್ಮವು ಇಲ್ಲದ ಸಂಶಯವನ್ನು ಕಲ್ಪಿಸುವದರಲ್ಲಿಯೇ ಹೋಗುವದು.

ವಿಶಾಖಾನಂದ—ಹಿಂದಕ್ಕೆ ಇದೇ ಯುದ್ಧಪ್ರಸಂಗದಲ್ಲಿ ಪ್ರಭುಗಳು ನನ್ನ ಮಾತಿಗೆ ನಕ್ಕದ್ದು ನೆನಪಿನಲ್ಲಿರಬಹುದು.

ಮೃಗೇಂದ್ರ—ಹೌದು, ನೆನಪಿನಲ್ಲಿರುತ್ತದೆ. ಅಂತೇ, ಯಾವತ್ತು ಸೈನ್ಯದವರಿಗೆ ಆನಂದೋತ್ಸವವನ್ನು ಮಾಡಲಿಕ್ಕೆ ಅಪ್ಪಣೆಕೊಡಬೇಕೆಂದು ಯೋಚಿಸಿದ್ದನ್ನು ಬಿಟ್ಟು ಬಿಟ್ಟೆನು. ಯುದ್ಧಮುಗಿಯುವವರೆಗೆ ನಿಮ್ಮ ಮಾತಿನಂತೆ ನಡಕೊಳ್ಳುವೆನು.

ವಿಶಾಖಾನಂದ—ಈ ಮಾತು ನಿಜವಷ್ಟೇ?

ಮೃಗೇಂದ್ರ—ಮೃಗೇಂದ್ರರಾಜನು ಒಂದೇ ಮಾತನ್ನು ಎರಡುಸಾರೆ ನುಡಿಯುತ್ತಿರುವದಿಲ್ಲ.

ವಿಶಾಖಾನಂದ—ಹಾಗಾದರೆ, ರಾಣಿಯವರನ್ನೂ, ಪ್ರಣಯಿನೀ ರಾಜಕುಮಾರಿಯನ್ನೂ ವೇಷಾಂತರದಿಂದ ಈಗಲೇ ಚಿದಾನಂದಸ್ವಾಮಿಗಳ ಆಶ್ರಮಕ್ಕೆ ಕಳಿಸಿರಿ, ಅವರು ಸುರಕ್ಷಿತ ಸ್ಥಳದಲ್ಲಿರುವದು ಇಷ್ಟವಾಗಿದೆ.

ಮೃಗೇಂದ್ರ—ಮಂತ್ರಿಗಳೇ, ನಿಗ್ಗರದಿಂದ ಯುದ್ಧವ್ಯಾಪಾರವು ಸಾಗಿ, ಒಬ್ಬರಿಗೂ ಒಂದು ಕ್ಷಣದ ನಂಬಿಗೆಯಿಲ್ಲದಾಗ ಯಾರನ್ನೂ ಸುರಕ್ಷಿತಸ್ಥಳಕ್ಕೆ ಕಳಿಸಲಿಲ್ಲ; ಈಗ ಎಲ್ಲಕಡೆಯಲ್ಲಿ ಶಾಂತತೆಯು ತೋರುತ್ತಿದ್ದು, ಒಡಂಬಡಿಕೆ ಯಾಗುವದೆಂಬ ಸುದ್ದಿಯು ಎಲ್ಲ ಕಡೆಗೆ ಹಬ್ಬಿರುತ್ತದೆ. ಅಂದಬಳಿಕ ಮನೆ ಯವರನ್ನು ಹರಿದ್ವಾರಕ್ಕೆ ಕಳಿಸುವದೇಕೆ? ಪ್ರತ್ಯಕ್ಷ ಯುದ್ಧಪ್ರಸಂಗಕ್ಕಿಂತ ನಿಮಗೆ ಒಡಂಬಡಿಕೆಯ ಸುದ್ದಿಯು ಭಯಂಕರವಾಗಿ ತೋರುತ್ತದೆಯೇನು?

ವಿಶಾಖಾನಂದ — ಅಶೋಕರಾಜನು ನಮ್ಮೊಡನೆ ಒಡಂಬಡಿಕೆ ಮಾಡುವನೆಂಬ ಸುದ್ದಿಯು, ಆತನೊಡನೆ ಪ್ರತ್ಯಕ್ಷ ನಡೆದ ಯುದ್ಧಕ್ಕಿಂತ ಹಲವು ಪಟ್ಟು ಭಯಂಕರವಾದದ್ದು. ಈವೊತ್ತಿನವರೆಗೆ ಎರಡೂ ಪಕ್ಷದ ವರು ಸರಳ ಮಾರ್ಗದ ಅವಲಂಬನ ಮಾಡಿದ್ದರಿಂದ ಅಷ್ಟು ಭಯಪಡುವ ಕಾರಣವಿದ್ದಿಲ್ಲ. ತಮಗೆ ಯುದ್ಧದಲ್ಲಿ ಯಶಸ್ಸು ದೊರೆಯುವದಿಲ್ಲವೆಂದು ತಿಳಿದು ಬೌದ್ಧರು ಸರಳಮಾರ್ಗವನ್ನು ಬಿಟ್ಟುಕೊಟ್ಟಿರುವರು. ಈಗ ಅವರು ಫಿತೂರಿಯ ಅಡ್ಡ ಮಾರ್ಗವನ್ನು ಹಿಡಿದಿರುವರು. ಇನ್ನು ಮೇಲೆ ಅವರು ಧರ್ಮಯುದ್ಧವನ್ನು ಕಾಲಿನಿಂದ ತುಳಿದು, ಯುದ್ಧದ ನಿಯಮಗಳನ್ನು ಮೀರುವರು; ಹಗಲು ಹಾಡೇ ಅನೀತಿಯಿಂದ ನಡೆಯುವರು; ಆದ್ದರಿಂದ ಈಗ ಕಾಣುವ ಶಾಂತತೆಯು ನಿಜವಾದದ್ದಲ್ಲ; ಭಯಂಕರ ಪ್ರಸಂಗವು ಒದ ಗುವ ಲಕ್ಷಣವನ್ನು ಸೂಚಿಸುತ್ತದೆ. ಕಾರಣ ರಾಣಿಯವರನ್ನೂ, ರಾಜಪು ತ್ರಿಯವರನ್ನೂ ವೇಷಾಂತರದಿಂದ ಹರಿದ್ವಾರಕ್ಕೆ ಬೇಗನೆ ಕಳಿಸಬೇಕು.

ಮೃಗೇಂದ್ರ—ಈ ಸಂಗತಿಯನ್ನು ದೇವಿಗೆ ತಿಳಿಸಿ, ಆಕೆಯ ಒಪ್ಪಿಗೆಯು ದೊರೆತರೆ ನಿಮ್ಮ ಮಾತನ್ನು ನಡಿಸುವೆನು.

ಈಮೇರೆಗೆ ನುಡಿದು ಮೃಗೇಂದ್ರನು ಹೊರಟುಹೋದನು. ಆತನು ಮಂತ್ರಿಯ ಮನೆಯನ್ನು ಬಿಟ್ಟು ಹೊರಡುತ್ತಿರಲು, ಓರ್ವ ತರುಣಿಯು ಬಂದು ಆತನನ್ನು ನಮಿಸಿ—ಪ್ರಭುಗಳೇ, ಈ ದಿನ ಮಧ್ಯ ರಾತ್ರಿಯಲ್ಲಿ ಪ್ರಮೀಲಾದೇ ವಿಯವರು ತಮ್ಮನ್ನು ಕಾಣಬೇಕೆಂದು ಇಚ್ಛಿಸುತ್ತಾರೆ. ಅತ್ಯಂತ ಮಹ ತ್ವದ ಕಾರ್ಯವಿರುವದರಿಂದ ಅವರಿದ್ದಲ್ಲಿಗೆ ತಾವು ಬರಬೇಕಂತೆ, ಅನ್ನಲು, ಮೃಗೇಂದ್ರನು—ಕುರಂಗೀ, ಮಧ್ಯರಾತ್ರಿಯಲ್ಲಿ ನಾನು ಪ್ರಮೀಲೆಯ ಬಳಿಗೆ

ಬರುವಂಥ ಮಹತ್ವದ ಕೆಲಸವೇನಿರುವದು? ಮತ್ತೊಬ್ಬ ಅಳ್ಳದೆಯವನಾಗಿದ್ದರೆ, ಪ್ರಮೀಲೆಯ ಮಾತಿನಲ್ಲಿ ಏನಾದರೂ ಕಪಟವಿರುವದೆಂದು ಅಂಜಬಹುದಾಗಿತ್ತು; ಆದರೆ ನನ್ನ ಹೊಟ್ಟೆಯಮಗಳಾದ ಪ್ರಣಯಿನಿಯಂತೆ ಇದ್ದ ಪ್ರಮೀಲೆಯು, ಏನಾದರೂ ಮಹತ್ವದ ಕೆಲಸವಿದ್ದದ್ದರಿಂದಲೇ ನನ್ನನ್ನು ಕರೆದಿರಬಹುದು; ಆದ್ದರಿಂದ ಆಕೆಗೆ ಬರುತ್ತೇನೆಂದು ಹೇಳು, ಎಂದವನೇ ಅರಮನೆಯ ಕಡೆಗೆ ಸಾಗಿದನು.

ಈ ಪ್ರಸಂಗದಲ್ಲಿ ವಾಚಕರಿಗೆ ಪ್ರಮೀಲೆಯ ಪರಿಚಯವನ್ನು ಮಾಡಿಕೊಡುವದು ಅವಶ್ಯವಾಗಿದೆ. ಪ್ರಮೀಲೆಯು ಮೃಗೇಂದ್ರನ ಒಬ್ಬ ಪ್ರಸಿದ್ಧ ಸರದಾರನ ಮಗಳು. ಆಕೆಯ ತಂದೆಯು ಅಶೋಕನೊಡನೆ ನಡೆದ ಯುದ್ಧದ ಆರಂಭದಲ್ಲಿಯೇ ಮರಣಹೊಂದಿದ್ದರಿಂದ, ಮೃಗೇಂದ್ರನು ಪ್ರಮೀಲೆಯನ್ನು ಯಾವ ಕೊರತೆಯೂ ಬಾರದಹಾಗೆ ತನ್ನ ಹೊಟ್ಟೆಯ ಮಗಳಂತೆ ಸಂರಕ್ಷಣ ಮಾಡಿದ್ದನು. ರಾಜಪುತ್ರಿಯಾದ ಪ್ರಣಯಿನಿಯೂ, ಪ್ರಮೀಲೆಯೂ ಕೂಡಿ ಆಡಿದವರಾಗಿದ್ದರು. ಪ್ರಮೀಲೆಯ ಅಪ್ರತಿಮ ಸೌಂದರ್ಯಕ್ಕೆ ತಕ್ಕ ಸದ್ಗುಣಗಳು ಆಕೆಯಲ್ಲಿ ಇದ್ದಿಲ್ಲ. ಆಕೆಯು ಬಹುಚಂಚಲಳು, ಮಹತ್ವಾಕಾಂಕ್ಷಿಯು. ಮೃಗೇಂದ್ರನ ಮಗನಾದ ಜಿತೇಂದ್ರನನ್ನು ಲಗ್ನವಾಗಿ, ತಾನು ಕಲಿಂಗದೇಶದ ರಾಣಿಯಾಗಬೇಕೆಂದು ಆಕೆಯು ಬಯಸಹತ್ತಿದಳು. ಜಿತೇಂದ್ರನು ಹರಿದ್ವಾರದ ಗುರುಕುಲದಲ್ಲಿದ್ದದ್ದರಿಂದ, ತನ್ನ ಮನೋಗತವನ್ನು ಆತನಿಗೆ ತಿಳಿಸಲಿಕ್ಕೆ ಪ್ರಮೀಲೆಗೆ ಅನುಕೂಲವಾಗಲಿಲ್ಲ. ತಾನೇ ಗುರುಕುಲಕ್ಕೆ ಹೋಗಿ ಜಿತೇಂದ್ರನನ್ನು ಕೇಳಬೇಕೆಂದು ಆಸಾಹಸಿಯು ಒಮ್ಮೆ ನಿಶ್ಚಯಿಸಿದಳು; ಆದರೆ ಚಿದಾನಂದರ ಗುರುಕುಲದಲ್ಲಿ ಸ್ತ್ರೀಯರ ಪ್ರವೇಶಕ್ಕೆ ಲೇಶವಾದರೂ ಆಸ್ಪದವಿಲ್ಲದ್ದನ್ನು ನೆನಪಿಗೆ ತಂದುಕೊಂಡು, ಆಕೆಯು ಆ ಉಸಾಬರಿಯನ್ನು ಬಿಟ್ಟಳು. ವಿದ್ಯಾಭ್ಯಾಸವು ಮುಗಿದಹೊರತು ಜಿತೇಂದ್ರನು ರಾಜಧಾನಿಯ ಮೋರೆಯನ್ನು ಕಾಣುವಹಾಗಿದ್ದಿಲ್ಲ. ಇದನ್ನರಿತು ಉತ್ಪಾತಸ್ವಭಾವದ ಪ್ರಮೀಲೆಯು, ಒಮ್ಮೆ ತನ್ನ ಲಗ್ನದ ಪ್ರಸಕ್ತಿಯನ್ನು ಕುರಿತು ಮೃಗೇಂದ್ರನನ್ನು ಕೇಳಿದಳು. ಆಗ ಮೃಗೇಂದ್ರನು ಅಲ್ಲಿ ಇದ್ದ ಪ್ರಮೀಲೆಯ ಸಖಿಯರ ಮುಂದೆ ಚೇಷ್ಟೆಮಾಡಿ ನಕ್ಕನು. ಸಮಾನಸ್ಕಂಧತ್ವವಿಲ್ಲದ್ದರಿಂದ

ಪ್ರಮೀಲೆಯ ಲಗ್ನವು ಜಿತೇಂದ್ರರಾಜಕುಮಾರನೊಡನೆ ಆಗುವ ಹಾಗಿಲ್ಲ. ಹೀಗೆ ಮೃಗೇಂದ್ರನು ಒಮ್ಮೆ ತಿರಸ್ಕರಿಸಿ ಪ್ರಮೀಲೆಯ ಮಾತಿಗೆ ನಕ್ಕಿಲ್ಲದೆ, ಪ್ರಸಂಗ ಬಂದಾಗ ಸಲಿಗೆಯಿಂದ ಪ್ರಮೀಲೆಯ ಸಂಗಡ ಈ ಮಾತನ್ನು ಕುರಿತು ವಿನೋದ ಮಾಡುತ್ತಿದ್ದನು ಇದು ಅಭಿಮಾನಸ್ವಭಾವದ ಪ್ರಮೀಲೆಗೆ ಸಹನವಾಗದೆ, ಒಮ್ಮೆ ಆಕೆಯು ಮೃಗೇಂದ್ರನನ್ನು ಕುರಿತು—ನಾನು ಹೇಗಾದರೂ ಕಲಿಂಗದೇಶದ ರಾಣಿಯಾಗಿಯೇ ತೀರುವೆನು, ಎಂದು ನುಡಿದಳು ಈ ಅಸಂಭವ ಮಾತನ್ನು ಕೇಳಿ, ಹುಡುಗೆಯ ಅಪ್ರಬುದ್ಧತನದ ಮಾತೆಂದು ತಿಳಿದು ಮೃಗೇಂದ್ರನು ನಕ್ಕುಬಿಟ್ಟನು. ಆಗ ಆಕೆಯ ಮಾತಿಗೆ ಅಷ್ಟು ಮಹತ್ವಕೊಡುವ ಕಾರಣವಿದ್ದಿಲ್ಲ, ಪ್ರಸಂಗವೂ ಇದ್ದಿಲ್ಲ; ಆದರೆ ಸಾಹಸಿಯಾದ ಪ್ರಮೀಲೆಯು ಮಾತ್ರ ಆ ಮಾತನ್ನು ಹೃದಯದಲ್ಲಿಟ್ಟುಕೊಂಡು ಕಾರ್ಯವನ್ನು ಸಾಧಿಸುವ ಹಂಚಿಕೆಯನ್ನು ಹಾಕಹತ್ತಿದಳು. ಯಾವದೊಂದು ಉಪಾಯದಿಂದ ತಾನು ಕಲಿಂಗದೇಶದ ರಾಣಿಯಾಗಿಯೇ ತೀರಬೇಕೆಂದು ಆಕೆಯು ನಿಶ್ಚಯಿಸಿಕೊಂಡಳು

ಹೀಗಿರುವಾಗ ವಿಶಾಖಾನಂದಮಂತ್ರಿಯ ಒನೇ ಹೆಂಡತಿಯು ತೀರಿಕೊಂಡಳು ಶಾಸ್ತ್ರದಂತೆ ಮಂತ್ರಿಯು ಒನೆಯ ಲಗ್ನವನ್ನು ಮಾಡಿಕೊಳ್ಳಬೇಕಾಯಿತು ಕಲಿಂಗದೇಶದಲ್ಲಿಯೂ, ಭರತಖಂಡದೊಳಗಿನ ಬೇರೆ ದೇಶಗಳಲ್ಲಿಯೂ ವಿಶಾಖಾನಂದನ ವರ್ಚಸ್ಸು ಬಹಳ ಕಲಿಂಗದ ರಾಜ್ಯಕಾರಭಾರವೆಲ್ಲ ವಿಶಾಖಾನಂದನ ಕೈಯಲ್ಲಿದ್ದಂತೆ ಇತ್ತು. ಮೃಗೇಂದ್ರನು ವಿಶಾಖಾನಂದನ ಮಾತನ್ನು ಮೀರುತ್ತಿದ್ದಿಲ್ಲೆಂದು ಹೇಳಬಹುದು. ಇಂಥ ಪ್ರತಿಷ್ಠಿತ ಮಂತ್ರಿಯ ಹೆಂಡತಿಯಾದರೆ, ಪ್ರಸಂಗವಶಾತ್ ತಾನು ಕಲಿಂಗದೇಶದ ರಾಣಿಯಾಗಬಹುದೆಂದು ಭಾವಿಸಿ, ಪ್ರಮೀಲೆಯು ವಿಶಾಖಾನಂದನನ್ನು ಮದುವೆಯಾಗುವೆನೆಂದು ತಾನಾಗಿ ಹೇಳಿದಳು. ಅದಕ್ಕೆ ಮೃಗೇಂದ್ರನು ಒಪ್ಪಲಿಲ್ಲ. ಬಾಲಸಖಿಯಾದ ಪ್ರಣಯಿನೀರಾಜಕುಮಾರಿಯು, ಇಂಥ ಅನುಚಿತಕಾರ್ಯವನ್ನು ಮಾಡಬೇಡೆಂದು ಪ್ರಮೀಲೆಗೆ ಹೇಳಿದಳು. ಸ್ವತಃ ವಿಶಾಖಾನಂದನು, ವೃದ್ಧಾಪ್ಯದ ಮೂಲಕ ಪ್ರಮೀಲೆಯನ್ನು ಲಗ್ನವಾಗಲು ಒಪ್ಪಿಕೊಳ್ಳಲಿಲ್ಲ. ಆತನಿಗೆ ಎಪ್ಪತ್ತು ವರ್ಷಗಳು ತುಂಬಿಹೋಗಿದ್ದವು. ಹೀಗೆ ಯಾರಮನ

ಸ್ಸಿಗೂ ಬಾರದ ಕೆಲಸವನ್ನುಮಾಡಿಯೇ ತೀರುವೆನೆಂದು ಸಾಹಸಿಯಾದ ಪ್ರಮೀಲೆಯು ಹಟಹಿಡಿದಳು. ಕಡೆಗೆ ಮೃಗೇಂದ್ರನು—"ಬ್ರಹ್ಮಸಂಕಲ್ಪವು ತಪ್ಪುವದಿಲ್ಲ, ಆಕೆಯ ಪ್ರಾರಬ್ಧವು," ಎಂದು ವಿಶಾಖಾನಂದನೊಡನೆ ಪ್ರಮೀಲೆಯ ಲಗ್ನವನ್ನು ಮಾಡಿದನು. ಈವೃದ್ಧ-ತರುಣೀವಿವಾಹದಿಂದ ದಂಪತಿಗಳಿಬ್ಬರಿಗೂ ಸುಖವಾಗಲಿಲ್ಲೆಂದು ಹೇಳುವಕಾರಣವಿಲ್ಲ. ಸುಖಾಪೇಕ್ಷೆಯಿಲ್ಲದೆ ಕೇವಲ ಪ್ರತಿಜ್ಞಾಪೂರ್ತಿಗಾಗಿ ವೃದ್ಧಪತಿಯ ಕೊರಳಲ್ಲಿ ಮಾಲೆ ಹಾಕಿದ್ದರಿಂದ, ಪ್ರಮೀಲೆಯು ಕಲ್ಲುಮನಸ್ಸುಮಾಡಿ ಕಲಿಂಗದರಾಣಿಯಾಗುವ ಹಾದಿಯನ್ನು ನೋಡಹತ್ತಿದಳು.

ಹೀಗಿರುವಾಗ ಅಶೋಕನು ಕಲಿಂಗಭೂಪತಿಯೊಡನೆ ಯುದ್ಧವನ್ನು ಹೂಡಿದನು. ಈಯುದ್ಧವು ಮೂರು ವರ್ಷಗಳವರೆಗೆ ನಡೆದು, ಕಡೆಗೆ ಪ್ರತ್ಯಕ್ಷ ಅಶೋಕನು ನಾಲ್ಕು ತಿಂಗಳವರೆಗೆ ಇಂದ್ರಪುರವನ್ನು ಮುತ್ತಿದರೂ, ಆ ಬೌದ್ಧ ಸಾಮ್ರಾಟನಿಗೆ ಜಯದೊರೆಯುವ ಆಶೆಉಳಿಯಲಿಲ್ಲ. ಈ ಸಂಧಿಯು ಪ್ರಮೀಲೆಗೆ ತನ್ನ ಕಾರ್ಯಸಾಧನಕ್ಕೆ ಅನುಕೂಲವಾಗಿ ತೋರಿತು. ಆಕೆಯು ರಾಜಮಾತೆಯಾದ ಬುದ್ಧಿಮತಿಯ ಸಂಗಡ ಒಳಸಂಚುಗಳನ್ನು ನಡಿಸಿದಳು. ಗಂಡನ ಭಯವು ಲೇಶವಾದರೂ ಪ್ರಮೀಲೆಗೆ ಇದ್ದಿಲ್ಲ. ವೃದ್ಧ ವಿಶಾಖಾನಂದನಿಗೆ ತನ್ನ ಹೆಂಡತಿಯ ಕಾಟತಪ್ಪಿದರೆ ಸಾಕಾಗಿತ್ತು. ಆತನ ಕಣ್ಣುಗಳು ಹೆಂಡತಿಯ ನಗೆಮೊಗವನ್ನು ನೋಡಿ ಒಂದು ದಿನವಾದರೂ ಸಫಲವಾಗಲಿಲ್ಲ. ಪತಿಯಮುಂದೆ ಪ್ರಮೀಲೆಯ ಮೋರೆಯು ಯಾವಾಗಲೂ ದುಮುಗುಟ್ಟಿ ಉರಿಯುತ್ತಿತ್ತು. ಅದರಂತೆ ಹೆಂಡತಿಯ ಕಠೋರ ಮಾತುಗಳಿಂದ ವಿಶಾಖಾನಂದನ ಕಿವಿಗಳು ಗಡಿಚಿಕ್ಕಿ ಹೋಗಿದ್ದವು. ಒಟ್ಟಿಗೆ, ವಿಶಾಖಾನಂದನ ಪಾಲಿಗೆ ಪ್ರಮೀಲೆಯು ಕ್ರೂರರಾಕ್ಷಸಿಯಾಗಿದ್ದಳು. ಈ ಸ್ಥಿತಿಯಲ್ಲಿ ಹೆಂಡತಿಯ ಉಸಾಬರಿಗೆ ಹೋಗದಿರುವದೇ ವಿಶಾಖಾನಂದನಿಗೆ ಸಮಾಧಾನಕರವಾಗಿತ್ತು. ಆದ್ದರಿಂದ ಆಕೆಗೆ, ರಾಜಮಾತೆಯಾದ ಬುದ್ಧಿಮತಿಯೊಡನೆ ಬೇಕಾದಹಾಗೆ ಗುಪ್ತಾಲೋಚನೆಗಳನ್ನು ಮಾಡಲಿಕ್ಕೆ ಅನುಕೂಲವಾಯಿತು. ಅದರಲ್ಲಿ ಸಂಪುಷ್ಟಾಚಾರ್ಯನಂಥ ಉಪದ್ವ್ಯಾಪಿಯಾದ ಬೌದ್ಧ ಭಿಕ್ಷುವಿನ ಆಲೋಚನೆಯ ನೆರವು ದೊರೆತ ಬಳಿಕ ಕೇಳುವದೇನು? "ಸ್ತ್ರೀ ಬುದ್ಧಿಃ ಪ್ರಲ

ಯಾಂತಕಾ" ಎಂಬಂತೆ, ಉತ್ಪಾತಸ್ವಭಾವದ ಪ್ರಮೀಲೆಯು, ಪ್ರಸಂಗ ನೋಡಿ ಗಂಡನ ಕೈಯಿಂದ ಮದ್ದಿನ ಸಂಗ್ರಹಾಲಯದ ಕೀಲಿಯಕೈಯನ್ನು ಇಸಕೊಂಡು ಅದಕ್ಕೆ ಬೆಂಕೆಹಚ್ಚುವೆನೆಂತಲೂ, ಶಸ್ತ್ರಾಗಾರದ ಕೀಲಿಯ ಕೈಯನ್ನು ಇಸಕೊಂಡು ಒಳಗಿನ ಶಸ್ತ್ರಾಸ್ತ್ರಗಳನ್ನು ಕೋಟೆಯೊಳಗಿನ ಆಳ ವಾದ ಹೊಂಡದಲ್ಲಿ ಚಲ್ಲಿಸುವೆನೆಂತಲೂ, ಗುಪ್ತದ್ವಾರದ ಕೀಲಿಯ ಕೈಗಳನ್ನು ಇಸಕೊಂಡು ದ್ವಾರಗಳನ್ನು ತೆರೆದಿಡಿಸುವೆನೆಂತಲೂ ಬುದ್ಧಿಮತಿಗೂ-ಸಂಪು ಷ್ಟಾಚಾರ್ಯನಿಗೂ ವಚನಕೊಟ್ಟಿದ್ದಳು. ಹೀಗಾದ ಪಕ್ಷದಲ್ಲಿ ನಿನ್ನ ಗಂಡ ನಾದ ವಿಶಾಖಾನಂದನನ್ನೇ ಕಲಿಂಗದೇಶದ ಪಟ್ಟಕ್ಕೆ ಕುಳ್ಳಿರಿಸುವೆನೆಂದು ರಾಜಮಾತೆಯು ಪ್ರಮೀಲೆಗೆ ವಚನಕೊಟ್ಟಿದ್ದಳು; ಆದ್ದರಿಂದ ಪ್ರಮೀಲೆಯು ತಾನು ಕಲಿಂಗದ ರಾಣಿಯಾದೆನೆಂಬ ಸಂತೋಷದಿಂದ ಉಬ್ಬಿ, ಗಂಡನ ಕೈಯಿಂದ ಕೀಲಿಯಕೈಗಳನ್ನು ಇಸಕೊಳ್ಳುವ ಹಂಚಿಕೆಯನ್ನು ಹುಡುಕ ಹತ್ತಿದಳು. ಇಂದ್ರಭುವನದ ಬೌದ್ಧ ಸಭೆಯಲ್ಲಿ ಸಂಪುಷ್ಟಾಚಾರ್ಯರ ಸಂಗಡ ಬಂದಿದ್ದ ತರುಣ ಸ್ತ್ರೀಯು ಪ್ರಮೀಲೆಯೇ ಆಗಿದ್ದಳು. ಆಕೆಯ ಬಲದಿಂದಲೇ ಸಂಪುಷ್ಟಾಚಾರ್ಯನು ಕಲಿಂಗವನ್ನು ಎರಡು ದಿವಸಗಳಲ್ಲಿ ಗೆಲ್ಲುವೆನೆಂದು ಅಶೋಕನ ಮುಂದೆ ನಂಬಿಗೆಯಿಂದ ನುಡಿದು, ಸೈನ್ಯದ ಆಧಿಪತ್ಯವನ್ನು ಪಡೆದನು.

ಮಧ್ಯರಾತ್ರಿಯಲ್ಲಿ ತನ್ನನ್ನು ಕಾಣಲಿಕ್ಕೆ ಬರುವೆನೆಂದು ಮೃಗೇಂದ್ರನು ಒಪ್ಪಿಕೊಂಡದ್ದನ್ನು ದಾಸಿಯ ಮುಖದಿಂದ ಕೇಳಿ, ಪ್ರಮೀಲೆಯು ಸಮಾಧಾನಪಟ್ಟಳು. ಆಕೆಯು ಪತಿಯನ್ನು ವಂಚಿಸುವದಕ್ಕಾಗಿ ಆತನ ಬಳಿಗೆ ಹೋಗಲು, ಆಗ ವಿಶಾಖಾನಂದನು, ಚಾರರು ಹೇಳಿದ ಸುದ್ದಿಗಳನ್ನು ಕುರಿತು ಆಲೋಚಿಸುತ್ತ ಒಬ್ಬನೇ ಕುಳಿತುಕೊಂಡಿದ್ದನು. ವಿಚಾರಮಗ್ನ ನಾದ ಆ ಜರಠಮಂತ್ರಿಯು, ಇನ್ನೂ ಚಾರರು ತನ್ನ ಮುಂದೆ ನಿಂತಿರುವ ರೆಂದು ತಿಳಿದು "ಹ, ಮುಂದೇನಾಯಿತು?" ಎಂದು ನುಡಿದು ಮೋಲಕ್ಕೆ ಮೋರೆಯೆತ್ತಿ ನೋಡಿದನು. ಆಗ ಗೌರಿಯಂತೆ ಸಿಂಗಾರಾದ ತನ್ನ ಹೊಸ ಹೆಂಡತಿಯು ಕಣ್ಣಿಗೆಬಿದ್ದಳು. ಹಾವಿಗೆ ಗರುಡನ ಗರಿಯನ್ನು ತೋರಿಸಿದ ಹಾಗಾಗಿ, ವಿಶಾಖಾನಂದನು ಮೋರೆಯನ್ನು ತಗ್ಗಿಸಿ ಹೆಂಡತಿಯ ಚರಣ

ಡಲ್ಲಿ ದೃಷ್ಟಿಯನ್ನಿಟ್ಟು ಸುಮ್ಮನೆ ಕುಳಿತುಕೊಂಡನು. ಆಗ ಪ್ರಮೀಲೆಯು ಮಾಯಾವಿಯಾದ ಮೃದುಹಾಸದಿಂದ ತನ್ನ ಗಂಡನನ್ನು ಕುರಿತು—"ಪ್ರಿಯಕರಾ" ಎಂದು ಕರೆದಳು. ಎಷ್ಟೋ ವರ್ಷಗಳಿಂದ ಈ ಮನೋಹರ ಶಬ್ದವು ವಿಶಾಖಾನಂದನ ಕಿವಿಗೆ ಬಿದ್ದಿದ್ದಿಲ್ಲ. ಈ ಶಬ್ದವನ್ನು ವಿಶಾಖಾನಂದನು ತನ್ನ ಮೊದಲನೆಯ ಹೆಂಡತಿಯ ಮುಖದಿಂದ ಕೇಳಿದ್ದರೆ ಕೇಳಿರಬಹುದು. ಇಂಥ ಅಪರೂಪದಶಬ್ದವು ಕಿವಿಗೆ ಬಿದ್ದದ್ದರಿಂದ, ಆ ವೃದ್ಧ ಮಂತ್ರಿಯು ತನ್ನ ಬಚ್ಚಬಾಯನ್ನು ತೆರೆದು ಆನಂದದಿಂದ ತನ್ನ ಹೆಂಡತಿಯನ್ನು "ಕಾಂತೇ" ಎಂದು ಕರೆದು ಆಕೆಯ ಮುಖವನ್ನು ನೋಡಹತ್ತಿದನು. ಪ್ರಮೀಲೆಯ ಈ ದಿನದ ನಗೆಮೊಗವು ಅಪರೂಪದ್ದಾದ್ದರಿಂದ, ವಿಶಾಖಾನಂದನು ಕೃತಜ್ಞನಾಗಿ ಹೆಂಡತಿಯನ್ನು ಲೀನಭಾವದಿಂದ ನೋಡತೊಡಗಿದ್ದನು. ಇತ್ತ ತೇಜಃಪುಂಜಳಾದ ತರುಣ ಪ್ರಮೀಲೆಯು, ತನ್ನ ಅಪೂರ್ವವಾದ ಸೌಂದರ್ಯದಿಂದ ಮತ್ತಳಾಗಿ, ಗರ್ವದೊಡನೆ ಪತಿಯನ್ನು ನೋಡುತ್ತಿದ್ದಳು. ಆಗ ಅವರಿಬ್ಬರ ಸಂಭಾಷಣವು ಕೆಳಗೆ ಬರೆದಂತೆ ಆಯಿತು.

ಪ್ರಮೀಲೆ—ಪ್ರಿಯಾ, ನನ್ನ ಮಾನಭಂಗವಾಗುತ್ತಿರುವದನ್ನು ಯಾರು ಕೇಳಬೇಕು?

ವಿಶಾಖಾನಂದ—ನನ್ನ ಹೆಂಡತಿಯ ಮಾನಭಂಗವನ್ನು ಮಾಡಲಿಕ್ಕೆ ಅದಾವನಿಗೆ ಧೈರ್ಯವಾಗುವದು?

ಪ್ರಮೀಲೆ—ಆತನ ಹೆಸರು ಹೇಳಿ ಮಾಡುವದೇನು? ತಮ್ಮಂಥ ವೃದ್ಧ ಪ್ರಧಾನರ ಹೆಂಡತಿಯಾಗುವದಕ್ಕಿಂತ, ಒಬ್ಬ ಸೈನಿಕನನ್ನು ಲಗ್ನಮಾಡಿಕೊಂಡಿದ್ದರೆ, ಆತನು ಜೀವದ ಹಂಗುದೊರೆದು ನನ್ನ ಮರ್ಯಾದೆಯನ್ನು ಉಳಿಸುತ್ತಿದ್ದನು.

ವಿಶಾಖಾನಂದ—ಪ್ರಿಯೇ, ಇದೇನು ನಿನ್ನ ಮಾತು! ನನ್ನ ಯೋಗ್ಯತೆಯು ಒಬ್ಬ ಸೈನಿಕನ ಯೋಗ್ಯತೆಗೆ ಕಡೆಯಾದದ್ದೇನು? ಕಲಿಂಗದ ಯಾವತ್ತು ರಾಜ್ಯಸೂತ್ರಗಳು ನನ್ನ ಕೈಯಲ್ಲಿರುತ್ತವೆ, ಮೃಗೆಂದ್ರನಿಗಿಂತ ಹೆಚ್ಚು ಸಾಮರ್ಥ್ಯವು ನನ್ನಲ್ಲಿರುವದು. ಹೇಳು, ನಿನ್ನ ಮಾನಭಂಗವನ್ನು ಯಾವನು ಮಾಡುವನು? ಕೂಡಲೆ ಅವನನ್ನು ನಾಶಗೊಳಿಸುತ್ತೇನೆ.

ಪ್ರಮೀಲೆ—ಪ್ರಿಯಕರಾ, ಸುಮ್ಮನೆ ಹೆಸರು ಹೇಳಿ ಮಾಡುವದೇನು? ಆತನನ್ನು ನಾಶಗೊಳಿಸುವದು ನಿಮ್ಮಿಂದಾಗಲಿಕ್ಕಿಲ್ಲ. ಸುಮ್ಮನೆ ಚಿಂತೆಗೆ ಮಾತ್ರ ಒಳಗಾದೀರಿ. ಹೀಗೆ ಮಾನಭಂಗ ಮಾಡಿಸಿಕೊಳ್ಳುವದಕ್ಕಿಂತ ತಟ್ಟನೆ ಬಾವಿಯನ್ನು ಹಾರಿಕೊಳ್ಳುವದು ನೆಟ್ಟಗೆ ನಾನು ಒಬ್ಬಳೇ ಇದ್ದಾಗ್ಗೆ ಆತ್ಮಹತ್ಯಮಾಡಿಕೊಳ್ಳಬೇಕೆನ್ನುತ್ತೇನೆ, ಆದರೆ ಚರಣದರ್ಶನವಾದ ಕೂಡಲೆ ನನ್ನ ಆತ್ಮಹತ್ಯದ ವಿಚಾರವು ನಷ್ಟವಾಗಿ, ಈ ಸುಂದರ ದೇಹವನ್ನು ಅಪ್ಪಿಕೊಳ್ಳುವಹಾಗೆ ಆಗುತ್ತದೆ.

ಹೀಗೆಂದು ಪ್ರಮೀಲೆಯು ಪತಿಯ ಕೊರಳಿಗೆ ತನ್ನ ಮೃದು ಶೀತಲ ಭುಜಲತೆಗಳನ್ನು ಸುತ್ತಿ ಇಲ್ಲದ ಅಶ್ರುಗಳನ್ನು ಸುರಿಸಹತ್ತಿದಳು. ಆಗ ವಿಶಾಖಾನಂದನು ತನ್ನ ಅಸ್ಥಿಮಯವಾದ ಹುರಬರಕ ಕೈಯಿಂದ ಪ್ರಮೀಲೆಯ ಸುಂದರ ಮುಖದಮೇಲೆ ಕೈಯಾಡಿಸಿ ಕುರುಳುಗಳನ್ನು ತೀಡಿ—ಪ್ರೀಯೇ, ನಿನ್ನ ಮಾನಭಂಗಮಾಡಿದ ನರಾಧಮನ ಹೆಸರನ್ನು ಹೇಳು, ಕೂಡಲೆ ಅವನ ಶಾಸನಮಾಡುವೆನು?

ಪ್ರಮೀಲೆ—ಪ್ರಿಯಕರಾ, ಆಗದು, ಅವನ ಶಾಸನಮಾಡುವದು ನಿಮ್ಮಿಂದಾಗದು. ನಿಶ್ಚಯವಾಗಿ ಹೇಳುತ್ತೇನೆ. ಆ ಕೆಲಸವು ನಿಮ್ಮಿಂದಾಗುವದಿಲ್ಲ. ಅದು ನಿಮ್ಮ ಶಕ್ತಿಯನ್ನು ಮೀರಿದ್ದಿರುತ್ತದೆ.

ವಿಶಾಖಾನಂದ—ಅವನ ಹೆಸರನ್ನಾದರೂ ಹೇಳಿ ನೋಡಬಾರದೆ?

ಪ್ರಮೀಲೆ—ನಿಮ್ಮ ಕೈಯಿಂದಾಗದಿದ್ದರೆ, ಮಂದಿಯ ಸಹಾಯದಿಂದಾದರೂ ಶಾಸನಮಾಡುವೆನೆಂದು ವಚನಕೊಟ್ಟರೆ, ಹೆಸರು ಹೇಳುತ್ತೇನೆ. ಕೊಡಿರಿ, ಮೊದಲು ವಚನಕೊಡಿರಿ, ಸೇಡುತೀರಿಸಿಕೊಳ್ಳುವೆನೆಂದು ಕುಲದೇವತೆಯ ಸಾಕ್ಷಿಯಿಂದ ವಚನಕೊಡಿರಿ.

ವಿಶಾಖಾನಂದ—ನನ್ನ ಮನಸ್ಸು ಒಪ್ಪುವಂತೆ ಅವನ ಅಪರಾಧವನ್ನು ಸಿದ್ಧಮಾಡಿಕೊಳ್ಳದೆ, ಶಪಥಮಾಡುವದಿಲ್ಲ.

ಪ್ರಮೀಲೆ—ನನ್ನ ಈ ಮಾತುಗಳಿಂದ ಅಪರಾಧವು ಸಿದ್ಧವಾಗುವದಿಲ್ಲವೋ?

ವಿಶಾಖಾನಂದ—ಇಲ್ಲ, ಇಷ್ಟರಿಂದ ಸಿದ್ಧವಾಗುವದಿಲ್ಲ. ಪ್ರತ್ಯಕ್ಷಾನುಭವದಿಂದ ಸಿದ್ಧವಾಗಲಿಕ್ಕೆ ಬೇಕು.

ಪ್ರಮೀಲೆ—ಒಳ್ಳೇದು, ಸಿದ್ಧಮಾಡಿಕೊಡುತ್ತೇನೆ. ಪ್ರತಿಜ್ಞೆಮಾಡಿರಿ.

ವಿಶಾಖಾನಂದ—ಈಶ್ವರಸಾಕ್ಷಿಯಿಂದ ಅವನ ನಾಶಮಾಡುತ್ತೇನೆ, ಹೆಸರು ಹೇಳು.

ಪ್ರಮೀಲೆ—ಮೃಗೇಂದ್ರ.

ವಿಶಾಖಾನಂದ—ಏನು? ಮೃಗೆಂದ್ರನೆಂದು ಹೇಳುವೆಯಾ? ಯಾವ ಮೃಗೇಂದ್ರನು?

ಪ್ರಮೀಲೆ—ಮತ್ತೆಯಾವ ಮೃಗೇಂದ್ರನಿರುವನು? ಕಲಿಂಗಾಧಿಪತಿಯಾದ ಮಗೇಂದ್ರನು.

ವಿಶಾಖಾನಂದ ( ಅತ್ಯಂತ ಭಯದಿಂದ ಹಾಗು ಆಶ್ಚರ್ಯದಿಂದ )—ಮೃಗೇಂದ್ರರಾಜನೇ!! ಸುಳ್ಳು, ತೀರಾ ಸುಳ್ಳು, ಈ ಮಾತು ಎಷ್ಟು ಮಾತ್ರವೂ ನಂಬತಕ್ಕದ್ದಲ್ಲ.

ಪ್ರಮೀಲೆ—ನೀವು ಹೀಗೆ ಅನ್ನುವಿರೆಂದು ನನಗೆ ಮೊದಲೇ ಗೊತ್ತಿದ್ದದ್ದರಿಂದ ನಾನು ಹೆಸರು ಹೇಳಲಿಕ್ಕೆ ಹಿಂದುಮುಂದು ನೋಡಿದೆನು. ಅಂತು ಪ್ರತಿಜ್ಞೆಯನ್ನು ಮುರಿದಹಾಗಾಯಿತಷ್ಟೆ? ಸರಿಯಿರಿ ಹಿಂದಕ್ಕೆ. ನನಗೆ ಒಂದು ಆಳವಾದ ಬಾವಿಯಹೊರತು ಬೇರೆ ಆಧಾರವು ದೊರೆಯುವಹಾಗಿಲ್ಲ. ಈಮೇರೆಗೆ ನುಡಿದು ಪ್ರಮೀಲೆಯು ವಿಶಾಖಾನಂದನ ಕೈಗಳನ್ನು ಕೊಸರಿ ಹೊರಗೆಹೋಗುವ ಡೌಲು ತೋರಿಸಿದಳು. ಆಗ ವೃದ್ಧನಾದ ವಿಶಾಖಾನಂದನು ಆಕೆಯ ಬೆನ್ನುಹತ್ತಿ ಓಡುತ್ತಹೋಗಿ—ಪ್ರಿಯೇ, ಹೀಗೆ ಅನ್ಯಾಯಮಾಡಬೇಡ, ವಿಚಾರಗೇಡಿಯಾಗಬೇಡ. ಏನೇನಾಯಿತೆಂಬದನ್ನು ಸಮಾಧಾನದಿಂದ ಹೇಳು, ನಾನು ಮೃಗೆಂದ್ರರಾಜನ ಹಂಗನ್ನೂ ಇಡುವದಿಲ್ಲ, ಎಂದು ಹೇಳಿ ಪ್ರಮೀಲೆಯ ಕೋಮಲವಾದ ಹಸ್ತವನ್ನು ಹಿಡಕೊಂಡು ಆಕೆಯೊಡನೆ ದಿವಾಣಖಾನೆಗೆ ಬಂದನು. ಇನ್ನು ಹೆಚ್ಚು ಬಿಗಿಹಿಡಿಯುವದು ಯೋಗ್ಯವಲ್ಲೆಂದು ತಿಳಿದು, ಪ್ರಮೀಲೆಯು ತನ್ನ ಕಪಟದ ಕಥೆಯನ್ನು ಹೊಂದ್ರಿಸಿಕೊಂಡು ಪತಿಯನ್ನು ಕುರಿತು— " ಪ್ರಿಯರೇ, ನನ್ನ ತಂದೆಯು ಯುದ್ಧ

ದಲ್ಲಿ ಮರಣಹೊಂದಿದಬಳಿಕ, ಆಸ್ರಯಕೊಡುವ ನೆವದಿಂದ ನನ್ನನ್ನು ಮೃಗೇಂದ್ರನು ತನ್ನ ಮಗಳ ಮಂದಿರದಲ್ಲಿ ಇಟ್ಟುಕೊಂಡನಷ್ಟೆ? ಮುಂದೆ ಕೆಲವು ದಿನಗಳಮೇಲೆ ಆತನು ನನ್ನನ್ನು ಪಾಪದೃಷ್ಟಿಯಿಂದ ನೋಡಹತ್ತಿ ದನು. ಆ ಲಕ್ಷಣವನ್ನು ಅರಿತು ನಾನು ಆತನನ್ನು ನಿರಾಕರಿಸಿದಂತೆ, ಆತನು ನನ್ನಲ್ಲಿ ಹೆಚ್ಚು ಹೆಚ್ಚು ಆಸಕ್ತನಾದನು. ಈ ಸಂಕಟದಿಂದ ನಾನು ಪಾರಾಗಬೇಕೆಂದು ನಾನು ನಿಮ್ಮನ್ನು ಲಗ್ನವಾದೆನು. ಆದರೂ ನನಗೆ ಮೃಗೇಂದ್ರನ ಕಾಟತಪ್ಪಲಿಲ್ಲ ಏನಾದರೂ ನೆವದಿಂದ ಮೇಲಿಂದಮೇಲೆ ನಿಮ್ಮ ಭೆಟ್ಟಿಗೆ ಬಂದಂತೆಮಾಡಿ, ಆತನು ತನ್ನ ಪಾಪವಾಸನೆಯನ್ನು ತೃಪ್ತ ಮಾಡಿಕೊಳ್ಳಲು ಹವಣಿಸುವನು," ಎಂದು ಅಸತ್ಯವನ್ನು ನುಡಿಯುವಾಗ ಪ್ರಮೀಲೆಯ ನಾಲಿಗೆಯು ತಡೆಯಹತ್ತಿತು; ಯಾಕಂದರೆ, ಪರನಾರೀ ಸೋದರನಾದ ಸುಶೀಲ ಮೃಗೇಂದ್ರನು, ತನ್ನನ್ನು ಹೊಟ್ಟೆಯ ಮಗಳಂತೆ ನಡೆಸಿಕೊಳ್ಳುತ್ತಿರುವದನ್ನು ಪ್ರಮೀಲೆಯು ಮನಗಂಡಿದ್ದಳು; ಆದರೆ ಸ್ತ್ರೀ ವಿಷಯವು ಕೆಟ್ಟದು. ಹೆಂಡತಿಯು ಇಷ್ಟೇ ಮಾತುಗಳಿಂದ ವಿಶಾಖಾನಂದನ ಮನಸ್ಸು ಕೆಟ್ಟಿತು ದೊಡ್ಡ ಮನಸ್ಸಿನ ಮೃಗೇಂದ್ರನು, ತನ್ನ ವೃದ್ಧ ಮಂತ್ರಿಗೆ ಆಯಾಸವಾಗಬಾರದೆಂದು ತಾನೇ ಆತನ ಮನೆಗೆ ಮೇಲೆ ಮೇಲೆ ಹೋಗು ವನು, ವಿಶಾಖಾನಂದನ ವಿಕಲ್ಪಕ್ಕೆ ಕಾರಣವಾಯಿತು. ಆ ವೃದ್ಧಮಂತ್ರಿಯು ಹೆಂಡತಿಗೆ—ಪ್ರಿಯೇ, ಈಗ ನನ್ನ ಮನಸ್ಸಿಗೆ ಹೊಳೆಯಿತು; ಆದರೆ ಮೃಗೇಂ ದ್ರನು ಅನೀತಿಯಿಂದ ನಡೆವದ್ದು ಈವೊತ್ತಿನವರೆಗೆ ನನ್ನ ಕಣ್ಣಿಗೆ ಬೀಳದ್ದ ರಿಂದ, ನನ್ನ ಮನಸ್ಸು ಮೃಗೇಂದ್ರನ ವಿಷಯವಾಗಿ ಸಂಶಯಗ್ರಸ್ತವಾ ಯಿತು. ಪ್ರಿಯೇ, ನೀನು ಈ ಸಂಶಯವನ್ನು ದೂರಮಾಡಿ, ಮೃಗೇಂದ್ರನು ದುರ್ಮಾರ್ಗದಿಂದ ನಡೆಯುವವನ್ನು ಸಿದ್ಧಮಾಡಿಕೊಟ್ಟರೆ, ಆತನ ನಾಶವನ್ನು ಮಾಡದೆ ಬಿಡುವದಿಲ್ಲ, ಎಂದುಹೇಳಿದನು. ಅದಕ್ಕೆ ಪ್ರಮೀಲೆಯು—ಪ್ರಿಯರೇ, ಹಾಗೇ ಆಗಲಿ. ಇಂದು ಮಧ್ಯರಾತ್ರಿಯಲ್ಲಿ ಮೃಗೇಂದ್ರನು,ನನ್ನ ಮಂದಿ ರಕ್ಕೆ ಬರುತ್ತೇನೆಂದು ಹೇಳಿದ್ದಾನೆ. ಆಗ ಆತನ ನಡತೆಯನ್ನು ನೋಡುವ ದಕ್ಕಾಗಿ, ಅಗೋ, ಆ ದೂರದ ಕಿಡಿಕೆಯ ಮರೆಗೆ ನೀವು ನಿಂತುಕೊಳ್ಳಿರಿ. ನಾನು ಇದೇ ದಿವಾಣಖಾನೆಯಲ್ಲಿ ಮೃಗೇಂದ್ರನನ್ನು ಕರಕೊಂಡು ಬರು

ತ್ತೇನೆ, ಎಂದು ಹೇಳಿದಳು. ತರುಣಿಯಾದ ತನ್ನ ಸುಂದರ ಪತ್ನಿಯಬಳಿಗೆ ಮಧ್ಯರಾತ್ರಿಯಲ್ಲಿ ಮೃಗೇಂದ್ರನು ಬರುವದೇ, ಮೊದಲು ವಿಶಾಖಾನಂದನ ವಿಕಲ್ಪಕ್ಕೆ ಕಾರಣವಾಯಿತು.

ಹೀಗೆ ವಿಕಲ್ಪದ ಬಾಧೆಯಿಂದ ಹಲವು ಕಲ್ಪನೆಗಳನ್ನು ಕಲ್ಪಿಸುತ್ತ ಮಂತ್ರಿಯು ಚಿಂತಾಮಗ್ನನಾಗಿ ಮಧ್ಯರಾತ್ರಿಯು ಯಾವಾಗ ಬಂದೀತೆಂದು ಎದುರುನೋಡುತ್ತಿರಲು, ಹೊತ್ತು ಮುಣುಗಿತು. ಸಂಶಯ ಪಿಶಾಚದ ಬಾಧೆಯಿಂದ ಪೀಡಿತನಾಗಿದ್ದ ಆತನಿಗೆ ಊಟಉಡಿಗೆಗಳು ಬೇಡಾದವು. ಆತನು ಮಧ್ಯರಾತ್ರಿಯ ಸುಮಾರಕ್ಕೆ ಆ ಕಿಡಿಕೆಯ ಮರೆಗೆ ನಿಂತುಕೊಂಡು ಮೃಗೇಂದ್ರನ ಬರವನ್ನು ಎದುರು ನೋಡಹತ್ತಿದನು. ಅತ್ತ ಮೃಗೇಂದ್ರನು, ತನ್ನ ಹೊಟ್ಟೆಯಮಗಳಂತೆ ಇಷ್ಟ ಪ್ರಮೀಲೆಯು ತನ್ನನ್ನು ಯಾಕೆ ಕರೆಸಿದಳೋ, ಎಂದು ಆಲೋಚಿಸುತ್ತ ಮಧ್ಯರಾತ್ರಿಯಾಗಲು, ದಕ್ಷಿಣದಿಕ್ಕಿನ ಗುಪ್ತದ್ವಾರದಿಂದ ಮಂತ್ರಿಯ ಮಂದಿರವನ್ನು ಪ್ರವೇಶಿಸಿ, ದಿವಾಣಖಾನೆಗೆ ಬಂದನು. ಆ ಸರಳ ಹೃದಯದ ಭೂಪತಿಯು ಬರಬರುತ್ತ ಸ್ವಾಭಾವಿಕವಾಗಿ ಪ್ರಮೀಲೆಯ ದಾಸಿಯಾದ ಕುರಂಗಿಯನ್ನು ಕುರಿತು—ಕುರಂಗೀ, ಮಂತ್ರಿಗಳು ಮಲಗಿಕೊಂಡಿರುವರೇನು, ಎಂದು ಕೇಳಲು, ಅದನ್ನು ಕೇಳಿ, ವಿಶಾಖಾನಂದನು ಸಂತಾಪಗೊಂಡನು. ಮೃಗೇಂದ್ರನು ದಿವಾಣಖಾನೆಗೆ ಹೋಗಿ, ತನ್ನ ಹೊಟ್ಟೆಯ ಮಗಳಬಳಿಯಲ್ಲಿ ಕುಳಿತುಕೊಳ್ಳುವಂತೆ ಪ್ರಮೀಲೆಯ ಬಳಿಯಲ್ಲಿ ಸಲಿಗೆಯಿಂದ ಕುಳಿತುಕೊಂಡನು. ದಿವಾಣಖಾನೆಗೂ, ಮಂತ್ರಿಯು ನೋಡುತ್ತನಿಂತಿದ್ದಕಿಡಿಕೆಗೂ ಬಹಳ ದೂರವಿದ್ದದ್ದರಿಂದ, ಮೃಗೇಂದ್ರ-ಪ್ರಮೀಲೆಯರು ಆಡುವ ಮಾತುಗಳು ವೃದ್ಧಮಂತ್ರಿಗೆ ಕೇಳದೆ, ಅವರ ಕೃತಿಗಳುಮಾತ್ರ ಆತನ ಕಣ್ಣಿಗೆ ಕಾಣುತ್ತಿದ್ದವು. ಈ ಸ್ಥಿತಿಯು ಅನರ್ಥಕ್ಕೆ ಕಾರಣವಾಗಿ, ಪ್ರಮೀಲೆಯ ದುಷ್ಟಬಯಕೆಯು ಕೈಗೂಡಿತು. ಪ್ರಮೀಲೆಯು ಮೃಗೇಂದ್ರನನ್ನು ವಂಚಿಸಿದ ಚಾತುರ್ಯವನ್ನು ವರ್ಣಿಸುವ ಗೊಡವಿಗೆ ನಾವು ಹೋಗುವದಿಲ್ಲ. ಆ ಹೊಯ್‌ಮಾಲೆಯು ಮಾತಾಡುತ್ತಾಡುತ್ತ ಕಣ್ಣೀರು ಸುರಿಸಲು, ಮೃಗೇಂದ್ರನು ಆಕೆಯನ್ನು ರಮಿಸಿ ಸಮಾಧಾನ ಪಡಿಸುವದಕ್ಕಾಗಿ ಆಕೆಯನ್ನು ತಬ್ಬಿಕೊಂಡು ಆಲಿಂಗಿಸಿ ಗಲ್ಲವನ್ನು

ಹಿಡಿದು ಕುರುಳುಗಳನ್ನು ತೀಡಿ ಸದುಪದೇಶಮಾಡಿದನು. ಅದನ್ನು ನೋಡಿ ಸಂಶಯಗ್ರಸ್ತ ವಿಶಾಖಾನಂದನು ದುಃಖ-ಸಂತಾಪಗಳಿಂದ ಮೈಮರೆತು ಒಮ್ಮೆಲೆ ಹಿಂದಕ್ಕೆಬಿದ್ದನು.

ವಿಶಾಖಾನಂದನು ಎಚ್ಚತ್ತು ನೋಡುವಷ್ಟರಲ್ಲಿ ಮೃಗೇಂದ್ರನು ಹೊರಟುಹೋಗಿದ್ದನು. ಪ್ರಮೀಲೆಯು ಗಾಳಿಯನ್ನು ಹಾಕುತ್ತ ಪತಿಯ ಬಳಿಯಲ್ಲಿ ಕುಳಿತಿದ್ದಳು. ಆಕೆಯು ಪತಿಯನ್ನು ಕುರಿತು—ನೋಡಿದಿರಾ, ಮೃಗೇಂದ್ರನ ನೀಚತನವನ್ನು! ನಾಳೆ ನಾನು ಸಂಪೂರ್ಣ ವಶವಾಗುತ್ತೇನೆಂದು ಹೇಳಿದ್ದರಿಂದ ಆ ಅಧಮನು ಹೊರಟು ಹೋದನು. ಬಹಳ ಹೇಳುವದರಿಂದೇನು? ನೀವು ನಾಳೆ ಸಂಜೆಯಒಳಗಾಗಿ ಮೃಗೇಂದ್ರನನ್ನು ನಾಶಗೊಳಿಸದಿದ್ದರೆ, ನಾನು ಪ್ರಾಣವನ್ನು ಇಡುವದಿಲ್ಲ, ಎಂದು ಹೇಳಿದಳು. ಅಷ್ಟರಲ್ಲಿ ಒಬ್ಬ ತರುಣಿಯು ಅಲ್ಲಿಗೆ ಬಂದು, ಮಂತ್ರಿಯನ್ನು ನಮಿಸಿ, ಮುದ್ರೆಮಾಡಿದ ಒಂದು ಪತ್ರವನ್ನು ಆತನ ಕೈಯಲ್ಲಿ ಕೊಟ್ಟಳು. ಅದನ್ನು ಒಡೆದು ನೋಡಲು, ವಿಶಾಖಾನಂದನ ಮುಖವು ಪ್ರಪುಲ್ಲಿತವಾಯಿತು. ಇದನ್ನು ನೋಡಿ ಪ್ರಮೀಲೆಯು ತನ್ನ ಯುಕ್ತಿಯು ನಾಟಿತೆಂದು ಮನಸ್ಸಿನಲ್ಲಿ ಹಿಗ್ಗಿ, ಅರಿಯದವಳಂತೆ ಪತಿಯನ್ನು ಕುರಿತು—ಪ್ರಾಣಪ್ರಿಯಾ, ಪತ್ರವನ್ನು ನೋಡಿ ನಿಮಗೆ ಸಂತೋಷವಾದ ಕಾರಣವೇನು? ಅದರಲ್ಲಿ ಏನು ಬರೆದದೆ? ಪತ್ರವನ್ನು ಯಾರು ಕಳಿಸಿದ್ದಾರೆ? ಎಂದು ಕೇಳಿದಳು. ಅದಕ್ಕೆ ವಿಶಾಖಾನಂದನು—ಪ್ರಿಯೇ, ಮೃಗೇಂದ್ರನ ನಾಶಕ್ಕೆ ಅನುಕೂಲವಾದ ಸಂಗತಿಯು ಒದಗಿದ್ದರಿಂದ ನನಗೆ ಸಂತೋಷವಾಯಿತು. ಈ ಪತ್ರವನ್ನು ಅಶೋಕನತಾಯಿಯಾದ ಬುದ್ಧಿಮತಿಯೂ, ಗುರುವಾದ ಸಂಪುಷ್ಪಾಚಾರ್ಯನೂ ಕೂಡಿ ಕಳಿಸಿರುವರು. ನಾಳಿನ ಸಂಜೆಯವರೆಗೆ ಅಶೋಕನ ಸೈನ್ಯವು ಸಂಪುಷ್ಪಾಚಾರ್ಯನ ಅಂಕಿತದಲ್ಲಿರುವದಂತೆ. ಕಲಿಂಗ ವಿಜಯಕ್ಕೆ ಸಹಾಯಮಾಡಿದರೆ, ಕಲಿಂಗದ ಪಟ್ಟವನ್ನು ನನಗೆ ಕೊಡಲು ಆಚಾರ್ಯನು ಒಪ್ಪಿಕೊಂಡಿದ್ದಾನೆ. ಇನ್ನು ನೀನು ಕಲಿಂಗದೇಶದ ರಾಣಿಯಾಗುವೆ, ಅನ್ನಲು, ಪ್ರಮೀಲೆಯು ಆಶ್ಚರ್ಯಪಟ್ಟಂತೆ ತೋರಿಸಿ—ಅವ್ವಯ್ಯಾ! ಬದುಕಿದೆನು. ಆ ನೀಚ ಮೃಗೇಂದ್ರನ ನಾಶವಾದರೆ ನನ್ನ ಪಾತಿವ್ರತ್ಯದ ರಕ್ಷಣವಾದಂತಾಗುವದು,

ಪಾತಿವ್ರತ್ಯಕ್ಕಿಂತ ಕಲಿಂಗದೇಶದ ರಾಣಿಯು ಹಿರಿಯಳೇನು ನನಗೆ ಹೆಚ್ಚಿನ ವಳಲ್ಲ. ಆದರೆ ಪ್ರಿಯರೇ, ಈ ಕಾರ್ಯಕ್ಕೆ ವಿಲಂಬವು ಬೇಡ. ಮದ್ದಿನ, ಹಾಗು ಶಸ್ತ್ರಾಗಾರದ, ಅವರಂತೆ ಗುಪ್ತದ್ವಾರಗಳ ಕೀಲಿಯ ಕೈಗಳನ್ನು ನನಗೆ ಕೊಡಿರಿ, ಅಂದರೆ ನಿಮ್ಮ ಪ್ರೇಮವು ನನ್ನ ಮೇಲೆ ಇರುವದೆಂದು ತಿಳಿಯು ವೆನು. ಅನ್ನಲು, ವಿಶಾಖಾನಂದನು ದೇಶದ್ರೋಹದ ಆ ಕಾರ್ಯವನ್ನು ಮಾಡಲಿಕ್ಕೆ ಹಿಂದೆಮುಂದೆ ನೋಡಹತ್ತಿದನು; ಆದರೆ ದುಷ್ಟ ಪ್ರಮೀಲೆಯು ಆತನನ್ನು ತನ್ನ ಬಲೆಯಲ್ಲಿ ಪೂರಾ ಹಿಡಿದು ಬಿಟ್ಟಿದ್ದರಿಂದ, ಢೋಂಗಾರಿತನ ಮಾಡಿ ಆಕೆಯು ಪತಿಯ ಬಳಿಯಲ್ಲಿದ್ದ ಮೂರೂ ಕೀಲಿಯ ಕೈಗಳನ್ನು ಇಸ ಕೊಂಡಳು. ಕೈಗಳು ತನ್ನ ಕೈಯಲ್ಲಿ ಬಿದ್ದದ್ದೊಂದೇ ತಡ, ಆಕೆಯು ಕ್ಷಣ ವಾದರೂ ಅಲ್ಲಿ ನಿಲ್ಲದೆ, ವಾಯುವೇಗದಿಂದ ಎಲ್ಲಿಗೋ ಹೊರಟುಹೋದಳು!

---

## ೫ನೆಯ ಪ್ರಕರಣ--ಕಲಿಂಗವಿಜಯ.



ರಾಜಪತ್ನಿಯನ್ನೂ, ರಾಜಪುತ್ರಿಯಾದ ಪ್ರಣಯಿನಿಯನ್ನೂ ಕೂಡಲೆ ಹರಿದ್ವಾರಕ್ಕೆ ಕಳಿಸಿಕೊಡಬೇಕೆಂದು ವಿಶಾಖಾನಂದನು ಹೇಳಿದ್ದು ಮೃಗೇಂದ್ರ ನಿಗೆ ಆಶ್ಚರ್ಯಕರವಾಗಿ ತೋರಿದಂತೆ, ಅಶೋಕನು ತನ್ನನ್ನು ಮೋಸಗೊಳಿ ಸುತ್ತಿರಬಹುದೆಂಬ ಮಾತೂ ಆತನಿಗೆ ಸಂಭವವಾಗಿ ತೋರಿತು. ಆದ್ದರಿಂದ ಆತನು ಅರಮನೆಗೆ ಹೋದಕೂಡಲೆ ಅಂತಃಪುರಕ್ಕೆ ಹೋಗಿ, ಈ ಮಾತಿನ ವಿಷಯವಾಗಿ ತನ್ನ ಹೆಂಡತಿಯಾದ ಇಂದುಮತಿಯನ್ನು ಕೇಳಿದನು. ಇಂದು ಮತಿಯು ಬಹು ವಿಚಾರಿಯು. ಆಕೆಯು ವಿಶಾಖಾನಂದನ ತರ್ಕಕ್ಕೆ ಒಪ್ಪಿ ಕೊಂಡು, ತನ್ನ ಪುತ್ರಿಯಾದ ಪ್ರಣಯಿನಿಯೊಡನೆ ವೇಷಾಂತರದಿಂದ ಹರಿ ದ್ವಾರಕ್ಕೆ ಹೊರಟಳು. ಘನಶ್ಯಾಮನೆಂಬವನೊಬ್ಬ ನಂಬಿಗೆಯ ಸೇವಕನು ಅವರ ಅಂಗರಕ್ಷಕನಾಗಿ ಹೊರಟಿದ್ದನು. ಈ ಮೇರೆಗೆ ಅತ್ಯಂತ ಪ್ರೀತಿಪಾತ್ರ ಳಾದ ಹೆಂಡತಿಯನ್ನೂ, ಅತ್ಯಂತ ವಾತ್ಸಲ್ಯದ ಮಗಳನ್ನೂ ಕಳಿಸಿದ ಮೃಗೇಂ

ದ್ರನು, ಆದಿನರಾತ್ರಿ ಅಸಮಾಧಾನದಿಂದ ಮಲಗಿಕೊಂಡಿದ್ದನು. ರಾತ್ರಿ ಆರುತಾಸುಮೀರಿ ಏಳರ ಅಮಲು ಆಗಿದೆ. ಮೃಗೇಂದ್ರನಿಗೆ ಸ್ವಲ್ಪ ಕಣ್ಣಿಗೆ ಕಣ್ಣು ಹತ್ತಿದಂತೆ ಆಗಿ ಸ್ವಪ್ನವು ಬಿದ್ದಿದೆ. ಅಶೋಕನು ಒಪ್ಪಂದಕ್ಕೆ ಒಪ್ಪಿಕೊಂಡದ್ದಕ್ಕಾಗಿ ಸ್ವಪ್ನದಲ್ಲಿಯೂ ಮೃಗೇಂದ್ರನಿಗೆ ಆಶ್ಚರ್ಯವಾಗತೊಡಗಿದೆ. "ಒತ್ತಾಯದಿಂದ ಬೌದ್ಧಧರ್ಮವನ್ನು ಹಬ್ಬಿಸಲಿಕ್ಕಿಲ್ಲೆಂ"ಬದಿಷ್ಟೇ ಕರಾರಿನಿಂದ ಅಶೋಕನೊಡನೆ ಒಪ್ಪಂದಮಾಡಿಕೊಳ್ಳಬೇಕೆಂದು ಅಭಿಮಾನಿಯಾದ ಮೃಗೇಂದ್ರನು ಸ್ವಪ್ನದಲ್ಲಿಯೇ ನಿಶ್ಚಯಿಸತೊಡಗಿದ್ದಾನೆ. ಅಷ್ಟರಲ್ಲಿ ದುಷ್ಟಳಾದ ಪ್ರಮೀಲೆಯು ಮೋಸದಿಂದ ಗಂಡನಕೈಯೊಳಗಿಂದ ಇಸಕೊಂಡಿದ್ದ ಕೀಲಿಯಕೈಗಳಿಂದ ಇಂದ್ರಪುರದ ಕೋಟೆಯೊಳಗಿನ ಮದ್ದಿನ ಸಂಗ್ರಹಾಲಯಗಳಿಗೆ ಬೆಂಕೆಹಚ್ಚಿಸಿ, ಶಸ್ತ್ರಾಸ್ತ್ರಗಳನ್ನು ಕೋಟೆಯೊಳಗಿನ ಹೊಂಡದಲ್ಲಿ ಚಲ್ಲಿಸಿ, ಕೋಟೆಯ ಗುಪ್ತದ್ವಾರಗಳನ್ನು ತೆರೆದಿಡಿಸಿದಳು. ಒಳಸಂಚಿನಂತೆ ಮೊದಲೇ ಕಾದುಕೊಂಡಿದ್ದ ಬುದ್ಧಿಮತಿಯೂ, ಸಂಪುಷ್ಪಾಚಾರ್ಯನೇ ಮೊದಲಾದ ಬೌದ್ಧಶ್ರವಣರೂ ಭಯವಿಲ್ಲದೆ ಬಡಬಡ ಕೋಟೆಯನ್ನು ಪ್ರವೇಶಿಸಿ ಕೈಗೆಸಿಕ್ಕವರನ್ನು ತುಂಡರಿಸುತ್ತ ಮೃಗೇಂದ್ರನನ್ನು ಸಂಹರಿಸುವದಕ್ಕಾಗಿ ಆತನ ಶಯನಮಂದಿರದ ಕಡೆಗೆ ಹೊರಟರು. ತಾನು ಕಲಿಂಗದ ರಾಣಿಯಾಗಬೇಕೆಂಬ ದುಷ್ಟ ಮಹಾತ್ವಾಕಾಂಕ್ಷೆಯ ಬಲೆಗೆ ಬಿದ್ದು, ವಿವೇಕಭ್ರಷ್ಟಳಾಗಿದ್ದ ಪ್ರಮೀಲೆಯು, ರಣರಕ್ಕಸಿಯಂತೆ ಖಡ್ಗಪಾಣಿಯಾಗಿ ಹಾದಿಯನ್ನು ತೋರಿಸುತ್ತ ಎಲ್ಲರಮುಂದೆ ಸಾಗಿದ್ದಳು. ಇತ್ತ ಮೃಗೇಂದ್ರನು, ಸ್ವಪ್ನದಲ್ಲಿ ಒಡಂಬಡಿಕೆಗಾಗಿ ತನ್ನ ಬಳಿಗೆ ಬಂದಿದ್ದ ಅಶೋಕನನ್ನು ಪ್ರೇಮದಿಂದ ಅಪ್ಪಿಕೊಳ್ಳುವದಕ್ಕಾಗಿ ದಿಗ್ಗನೆ ಎದ್ದು, ಕೈಗಳನ್ನು ಭರದಿಂದ ಮುಂದಕ್ಕೆ ಚಾಚಲು, ಒಬ್ಬ ತಪೋಧನನು ಆತನ ಕೈಗಳನ್ನು ಹಿಡಿದು—ಅರಸನೇ, ಇದು ಅಶೋಕನನ್ನು ಅಪ್ಪಿಕೊಳ್ಳುವ ಸಮಯವಲ್ಲ. ಆ ಬೌದ್ಧಭೂಪತಿಯ ಸೈನಿಕರು ಅರಮನೆಯಲ್ಲೆಲ್ಲ ನಿನ್ನನ್ನು ಹುಡುಕುತ್ತ ಗೊಂದಲಹಾಕಹತ್ತಿದ್ದಾರೆ. ಅನ್ನಲು, ಮೃಗೇಂದ್ರನು ಕಣ್ಣುಗಳನ್ನು ತೆರೆದು—"ಗುರುವರ್ಯರೇ" ಎಂದು ಕರೆಯಲು, ತಪೋಧನನು—ಅಹುದು, ಅವನೇ ನಾನು ಇರುತ್ತೇನೆ; ಆದರೆ ಆಶ್ಚರ್ಯಪಡುವದಕ್ಕೆ, ಅಥವಾ ಶಿಷ್ಯಾಚಾರದ ಕುಶಲಪ್ರಶ್ನೆಗಳನ್ನು

ಮಾಡುವದಕ್ಕೆ ಈಗ ಅವಕಾಶವಿಲ್ಲ. ನಿನಗೆ ಕಠಿಣಕಾಲವು ಬಂದೊದಗಿದೆ. ನಾನು ತಂದಿರುವ ಬೌದ್ಧಭಿಕ್ಷುವಿನ ಈ ವಸ್ತ್ರಗಳನ್ನು ಒಂದು ಕ್ಷಣವಾದರೂ ತಡಮಾಡದೆ ಧರಿಸಿ, ಪೂರ್ವದಿಕ್ಕಿನ ಗುಪ್ತದ್ವಾರದಿಂದ ಪಾರಾಗಿಹೋಗು. ವಿಶ್ವಾಸಘಾತಕಿಗಳು ಸರ್ವಸ್ವದ ಘಾತಮಾಡಿದ್ದಾರೆ. ಎಂದು ನುಡಿದು, ಚಿದಾನಂದಸ್ವಾಮಿಗಳು ತಾವು ತಂದಿದ್ದ ವಸ್ತ್ರಗಳನ್ನು ಮುಂದೆ ಮಾಡಿದರು. ಆಗ

ಮೃಗೇಂದ್ರ—ಗುರುವರ್ಯರೇ, ಅಂಜುಬುರುಕನಂತೆ ಈಗ ನಾನು ಯಾಕೆ ಓಡಿಹೋಗಬೇಕು?

ಚಿದಾನಂದ—ಯಾಕೆಂದು ಪ್ರಶ್ನೆ ಮಾಡುತ್ತ ಕಾಲಹರಣ ಮಾಡಬೇಡ. ಅಶೋಕನ ಸೈನಿಕರಿಂದಲೂ, ಬೌದ್ಧಭಿಕ್ಷುಗಳಿಂದಲೂ ಇಂದ್ರಭುವನವು ತುಂಬಿಹೋಗಿದೆ. ವಿಶ್ವಾಸಘಾತಕಿಗಳು ನಿನ್ನ ಮದ್ದಿನ ಸಂಗ್ರಹಾಲಯಗಳಿಗೆ ಬೆಂಕಿಯನ್ನು ಹಚ್ಚಿ ಶಸ್ತ್ರಾಸ್ತ್ರಗಳನ್ನು ಹೊಂಡದಲ್ಲಿ ಚಲ್ಲಿಕೊಟ್ಟು, ಕೋಟೆಯ ಗುಪ್ತದ್ವಾರಗಳನ್ನು ತೆರೆದುಬಿಟ್ಟದ್ದಾರೆ. ಕ್ರೂರರಾದ ಬೌದ್ಧಭಿಕ್ಷುಗಳು ಮದ್ದಿನ ಜ್ಯೋತಿಯ ಭಯಂಕರ ಪ್ರಕಾಶದಲ್ಲಿ ವೇದಧರ್ಮಿಗಳ ಚೆಂಡುಗಳನ್ನು ತುಂಡರಿಸಹತ್ತಿರುವರು.

ಮೃಗೇಂದ್ರ—ಇಂಥ ಹೊತ್ತಿನಲ್ಲಿ ನಾನು ಓಡಿಹೋಗಬೇಕೇ?

ಚಿದಾನಂದ—ವೇದಧರ್ಮವು ನಾಮಶೇಷವಾಗಬಾರದೆಂದು ನೀನು ಇಚ್ಛಿಸುತ್ತಿದ್ದರೆ ಓಡಿಹೋಗಲೇಬೇಕು.

ಮೃಗೇಂದ್ರ—ಈ ಅಭಿಮಾನಿಯಾದ ಮೃಗೇಂದ್ರನಿಗೆ ಸಮರಭೂಮಿಯಿಂದ ಓಡಿಹೋಗಿ ಗೊತ್ತಿಲ್ಲ.

ಚಿದಾನಂದ—ಈಗ ನಡೆದದ್ದು ಸಮರವಲ್ಲ, ಕುತ್ತಿಗೆಗೊಯ್ಕತನವು, ಇದರೊಳಗಿಂದ ನೀನು ಪಾರಾಗಲೇ ಬೇಕು. ಮೃಗೆಂದ್ರರಾಜನು ಮೃತನಾದರೆ ವೇದಧರ್ಮವು ನಾಶವಾಯಿತೆಂದು ತಿಳಿಯಬೇಕು. ಧರ್ಮರಕ್ಷಣಕ್ಕಾಗಿ ನೀನು ಓಡಿಹೋಗದಿದ್ದರೆ ನಿರ್ವಾಹವಿಲ್ಲ.

ಈಮೇರೆಗೆ ನುಡಿದು ಚಿದಾನಂದಸ್ವಾಮಿಗಳು ಒತ್ತಾಯದಿಂದ ಮೃಗೇಂದ್ರನಿಗೆ ಬೌದ್ಧ ಭಿಕ್ಷುಗಳ ವಸ್ತ್ರಗಳನ್ನು ತೊಡಿಸಿದರು. ಮೃಗೇಂದ್ರನು ಮತ್ತೆ

ಏನೋಮಾತಾಡಬೇಕೆನ್ನುತ್ತಿರಲು, ಚಿದಾನಂದರು—ಅರಸಾ, ಬಹಳ ಮಾತಾಡಬೇಡ. ಯಾವ ವಿಚಾರಕ್ಕೂ ಬೀಳಬೇಡ. ಪೂರ್ವದಿಕ್ಕಿನ ಗುಪ್ತದ್ವಾರಕ್ಕೆ ಹೋಗಿ, ಇಂದಿನ ಬೌದ್ಧಸೈನಿಕರ ಗುರುತಿನ "ಪ್ರಮೀಲೆ" ಎಂಬ ಶಬ್ದವನ್ನು ನುಡಿದು ಪಾರಾಗಿ ಹೋಗು, ಅನ್ನಲು, ಮೃಗೇಂದ್ರನು ಗುರುವನ್ನು ಬಿಟ್ಟುಹೋಗಲಾರದೆ ಅಲ್ಲಿಯೇ ನಿಂತುಕೊಂಡಿದ್ದನು. ಅಷ್ಟರಲ್ಲಿ ಶಯನಮಂದಿರದ ಬಾಗಿಲನ್ನು ತೆರೆದು ಬೌದ್ಧಭಿಕ್ಷುಗಳು ಕೈಯಲ್ಲಿ ಪ್ರಾಣವಿಘಾತಕವಾದ ಶಸ್ತ್ರಗಳನ್ನು ಧರಿಸಿ ಒಬ್ಬೊಬ್ಬರೇ ಒಳಗೆಬಂದು ತುಂಬಿಕೊಂಡರು! ಅವರು ಚಿದಾನಂದನನ್ನು ಮುತ್ತುತ್ತಿರಲು, ಪ್ರಮೀಲೆಯು ಕ್ರೂರರೂಪದಿಂದ ಅಲ್ಲಿಗೆ ಬಂದಳು. ಮೃಗೇಂದ್ರನ ಬೌದ್ಧವೇಷವು ಆಕೆಯನ್ನು ಮೋಸಗೊಳಿಸಿತು. ಎರಡು ಪಳ ಮುಂಚೆ ಬಂದಿದ್ದರೆ, ಮೃಗೇಂದ್ರನು ಆಕೆಯ ಕೈಯಲ್ಲಿ ಸಿಕ್ಕುಹೋಗಿದ್ದನು. ಪ್ರಮೀಲೆಯನ್ನು ನೋಡಿ ಮೃಗೇಂದ್ರನಿಗೆ ಪರಮಾಶ್ಚರ್ಯವಾಯಿತು. ಮೃಗೇಂದ್ರನು ಶಯನಮಂದಿರದಲ್ಲಿ ಸಿಕ್ಕೇಸಿಗುವನೆಂದು ಆಕೆಯು ಬಂದಿರಲು, ಮೃಗೇಂದ್ರನ ಬದಲು ಒಬ್ಬ ಗೋಸಾವಿಯು ಆಕೆಯ ಕಣ್ಣಿಗೆ ಬಿದ್ದನು. ಅಷ್ಟರಲ್ಲಿ ಇಂದುಮತಿಯೂ, ಪುಣ್ಯಯಿನಿಯೂ ಇಂದೇ ಇಂದ್ರಭುವನದಿಂದ ಹೊರಟು ಹೋಗಿರುವರೆಂಬ ಸುದ್ದಿಯು ಪ್ರಮೀಲೆಯ ಕಿವಿಗೆ ಮುಟ್ಟಿತು. ಅದರಿಂದ ಪ್ರಮೀಲೆಯು ನಿರಾಶೆಪಟ್ಟು ಸಂತಾಪದಿಂದ ಗೋಸಾವಿಯನ್ನು ಕುರಿತು—ಗೋಸಾವ್ಯಾ, ಮೃಗೇಂದ್ರನು ಎಲ್ಲಿದ್ದಾನೆ ಎಂದು ಕೇಳಲು, ಚಿದಾನಂದಸ್ವಾಮಿಗಳು ಶಾಂತಚಿತ್ತದಿಂದ ಸುಮ್ಮನೆ ನಿಂತುಕೊಂಡಿದ್ದರು. ಆಗ ಪ್ರಮೀಲೆಯು—ನೀನು ಹೀಗೆ ಬರಿಯಬಾಯಿಂದ ಕೇಳಿದರೆ ಮಾತಾಡಲಿಕ್ಕಿಲ್ಲ, ಎಂದು ನುಡಿದು ಒರೆಯಿಂದ ಖಡ್ಗವನ್ನು ಹಿರಿದಳು. ಆದರೂ ಚಿದಾನಂದರ ಶಾಂತಿಯ ಮೌನಕ್ಕೆ ಭಂಗಬರಲಿಲ್ಲ. ಆಗ ಪ್ರಮೀಲೆಯು ಚಿದಾನಂದರ ಮೈಮೇಲೆ ಏರಿಹೋಗಿ—ನಿನಗೆ ಜೀವದ ಆಶೆಯಿದ್ದರೆ, ಮೃಗೇಂದ್ರನು ಎಲ್ಲಿದ್ದಾನೆಂಬದನ್ನು ಹೇಳು, ಎಂದು ನುಡಿಯಲು, ಅತ್ತ ಭಿಕ್ಷುವೇಷದ ಮೃಗೇಂದ್ರನು ಪ್ರಮೀಲೆಯ ಮೇಲೆ ಹಲ್ಲುಕಡಿಯಹತ್ತಿದನು. ಅಷ್ಟರಲ್ಲಿ ಚಿದಾನಂದರು ಪ್ರಮೀಲೆಯನ್ನು ಕುರಿತು—ಎಲೈ ದುಷ್ಟಸ್ತ್ರೀಯೇ, ಒಂದು ಹೆಜ್ಜೆಯನ್ನು ಕೂಡ ಮುಂದಕ್ಕೆ

ಇಡಬೇಡ, ಎಂದು ನುಡಿದು, ಮೃಗೇಂದ್ರನಿಗೆ ಹೊರಟುಹೋಗಲು ಕಣ್ಣ ಸನ್ನೆ ಮಾಡಿದರು. ಆದರೆ ಮೃಗೇಂದ್ರನು ಅಲ್ಲಿಂದ ಉಲುಕಲಿಲ್ಲ. ಮುಂದೆ ಏನು ಮಾಡಬೇಕೆಂಬದನ್ನರಿಯದೆ ಭಿಕ್ಷುಗಳ ಗುಂಪಿನಲ್ಲಿ ಆತನು ಸುಮ್ಮನೆ ನಿಂತುಕೊಂಡಿದ್ದನು. ಇತ್ತ ಪ್ರಮೀಲೆಯು ಚಿದಾನಂದನನ್ನು ಕುರಿತು—ಎಲಾ ಗೋಸಾವ್ಯಾ, ಮುಂದಕ್ಕೆ ಹೆಜ್ಜೆಯನ್ನಿಡಬೇಡೆಂದು ಯಾರನ್ನು ಆಜ್ಞಾಪಿಸುತ್ತೀ, ಎಂದು ಖಡ್ಗವನ್ನೆತ್ತಿ ಹೊಡೆಯಹೋಗಲು, ಚಿದಾನಂದನು ನಿಂತಸ್ಥಳದಿಂದ ಉಲುಕದೆ ಅಧಿಕಾರಯುಕ್ತಸ್ವರದಿಂದ—ಎಲೈ ಡಾಕಿನಿಯೇ, ಹಿಂದಕ್ಕೆ ಸರಿ. ಚಿದಾನಂದನ ಅಂಗಸ್ಪರ್ಶಮಾಡುವ ಸಾಹಸಕ್ಕೆ ನೀನು ಹೋಗಬೇಡ. ಈವೊತ್ತಿನವರೆಗೆ ಯಾವ ಸ್ತ್ರೀಯ ನೆರಳೂ ಈ ದೇಹದ ಮ್ಯೆ ಮೇಲೆ ಬಿದ್ದಿರುವದಿಲ್ಲ! ಖಡತರವಾದ ಬ್ರಹ್ಮಚರ್ಯವ್ರತದ ಬ್ರಹ್ಮಚಾರಿಯ ಅಂಗಸ್ಪರ್ಶವು ಎಷ್ಟು ಕಠೋರವಾಗಿರುತ್ತದೆಂಬದನ್ನು ನೀನು ಅರಿಯೆ. ಈಚಿದಾನಂದನ ಅಂಗಸ್ಪರ್ಶಮಾಡಿ, ಆತನ ಸಿಟ್ಟಿಗೆ ಕಾರಣಳಾಗುವದು ಹಿತಕರವಲ್ಲ, ಎಂದು ನುಡಿದನು.

"ಚಿದಾನಂದ" ಎಂಬ ಶಬ್ದವು ಕಿವಿಗೆ ಬಿದ್ದಕೂಡಲೆ ಪ್ರಮೀಲೆಯ ಸಿಟ್ಟು ಹಿಟ್ಟು ಮುಕ್ಕಿತು! ಹರಿದ್ವಾರದ ಚಿದಾನಂದ ಸ್ವಾಮಿಗಳ ಅಧಿಕಾರವೇ ಅಂತಹದಿತ್ತು. ಅವರ ಬ್ರಹ್ಮತೇಜಸ್ಸು ಅಂಥ ಅದ್ಭುತವಾಗಿತ್ತು. ವೇದ ಧರ್ಮಿಗಳು ಅವರನ್ನು ದೇವರಂತೆ ಮನ್ನಿಸುತ್ತಿದ್ದರು. ಬೌದ್ಧರು ಚಿದಾನಂದರ ಸತ್ವಕ್ಕೂ, ಅವರ ಬ್ರಹ್ಮತೇಜಸ್ಸಿಗೂ, ಅವರ ಅಧಿಕಾರಕ್ಕೂ ಬಹಳವಾಗಿ ಹೆದರುತ್ತಿದ್ದರು. 'ಚಿದಾನಂದ' ಎಂಬ ಶಬ್ದವನ್ನು ಕೇಳಿದ ಕೂಡಲೆ ಬೌದ್ಧ ಭಿಕ್ಷುಗಳು ಒಂದೊಂದೇ ಹೆಜ್ಜೆಯನ್ನು ಹಿಂದಕ್ಕೆ ಸರಿಯಹತ್ತಿದರು. ಆಗ ಪ್ರಮೀಲೆಯ ಕೈಕಾಲುಗಳೇ ಹೋದಂತಾಗಿ ಆಕೆಯು ತನ್ನ ಬಳಿಯಲ್ಲಿ ನಿಂತಿದ್ದ ಬೌದ್ಧಸೈನಿಕರಿಗೆ, ಚಿದಾನಂದರನ್ನು ಅಶೋಕನ ವಾಳಯಕ್ಕೆ ಹಿಡಿದೊಯ್ಯಲು ಆಜ್ಞಾಪಿಸಿ, ಮೃಗೇಂದ್ರನನ್ನು ಹುಡುಕುವದಕ್ಕಾಗಿ ತಾನು ಬೇರೊಂದು ಕಡೆಗೆ ಹೋಗಹತ್ತಿದಳು. ಆಗ ಚಿದಾನಂದರು ಆಕೆಯನ್ನು ಕುರಿತು—ದುಷ್ಟ ಪ್ರಮೀಲೆಯೇ, ನಿನ್ನ ಕರ್ಮದ ಫಲವನ್ನು ನೀನು ಅನುಭವಿಸುವೆಯೆಂದು ನಾನು ಹೇಳುವಕಾರಣವಿಲ್ಲ; ಆದರೆ ಕಲಿಂಗ

ದೇಶದ ರಾಣಿಯಾದೆನೆಂಬ ಮದದಿಂದ ನೀಚಕರ್ಮಗಳನ್ನು ಮಾಡುವಗೊಡ ವಿಗೆ ಇನ್ನು ಹೋಗಬೇಡ; ಯಾಕಂದರೆ ಇಂದುಮತಿದೇವಿಯೂ, ಪ್ರಣಾ ಯಿನಿಯೂ ನಿನ್ನ ಕೈಗೆ ಸಿಗಲಾರರು. ಮೃಗೇಂದ್ರನು ಸುರಕ್ಷಿತವಾಗಿ ಇರು ತ್ತಾನೆ ಆತನು ಈ ಕಪಟ ಪ್ರಬಂಧದಿಂದ ಪಾರಾಗಿ, ಪುನಃ ಸದ್ಧರ್ಮದ ಪ್ರಭಾವವನ್ನು ಆರ್ಯಾವರ್ತದಲ್ಲಿ ಕೆಡವುವನು- ಕೆಲಕಾಲ ಬೌದ್ಧಧರ್ಮವು ಪ್ರಬಲವಾಗುವ ಯೋಗವಿರುತ್ತದೆ. ವೇದಧರ್ಮವು ಪುನಃ ಪ್ರಕಾಶಿಸುವ ಯೋಗವನ್ನು ಈಶ್ವರನು ಬೇಗನೆ ತರುವನು. ಧರ್ಮಪ್ರಭಾವನದ ಕಾರ್ಯ ದಲ್ಲಿ ನಾವು ಜೀವವವನ್ನು ಹುಲ್ಲಿಗೆ ಸರಿಮಾಡುವೆವು. ಅಪ್ರಬುದ್ಧ ಪ್ರಮಿಾ ಲೆಯೇ, ನಿನ್ನ ವಿಶ್ವಾಸಘಾತದ ನಡತೆಗಳೆಲ್ಲ ನಮಗೆ ತಿಳಿದಿವೆ. ನೀನು ಧರ್ಮದ್ರೋಹಿಯು, ದೇಶದ್ರೋಹಿಯು, ಸ್ವಾಮಿದ್ರೋಹಿಯು, ಪತಿದ್ರೋ ಹಿಯು ಇರುತ್ತೀ. ನಿನ್ನೊಬ್ಬಳ ಅವಿಚಾರದ ಫಲವನ್ನು ಕಲಿಂಗದೇಶವೊಂದೇ ಅಲ್ಲ, ವೇದಧರ್ಮಿಗಳೆಲ್ಲರೂ ಕೆಲವು ದಿನ ಅನುಭವಿಸಬೇಕಾಯಿತು. ನಡೆ, ನಿನ್ನ ಅಮಂಗಲ ಮುಖವನ್ನು ನನಗೆ ತೋರಿಸಬೇಡ; ಎಂದು ನುಡಿಯು ತ್ತಿರಲು, ಪ್ರಮಿಾಲೆಯು ಚಿದಾನಂದರ ಎದುರಿಗೆ ನಿಲ್ಲಲಾರದೆ ಹೊರಟುಹೋ ದಳು. ಇತ್ತ ಚಿದಾನಂದರು ತಾಹಾಗಿ ಬೌದ್ಧಸೈನಿಕರ ಸ್ವಾಧೀನ ವಾದರು.

ಹೀಗೆ ಬುದ್ಧಿಮತಿರಾಣಿಯೂ, ಸಂಪುಷ್ಪಾಚಾರ್ಯನೂ ಪ್ರಮೀಲೆ ಯನ್ನು ಒಡಕೊಂಡು ಇಂದ್ರಭುವನವನ್ನು ಮೋಸದಿಂದ ಕೈಸೇರಿ ಕೊಂಡ ಸುದ್ದಿಯು ಅಶೋಕನಿಗೆ ಗೊತ್ತಿದ್ದಿಲ್ಲ. ತನ್ನ ಮಂತ್ರಿಯಾದ ರಾಧಾಗುಪ್ತನೊಡನೆ ಆ ರಾತ್ರಿ ಆಲೋಚಿಸಿ ಒಪ್ಪಂದದ ಕರಾರುಗಳನ್ನು ಬರೆಸುವದರೊಳಗೆ ರಾತ್ರಿಯು ಬಹಳವಾದದ್ದರಿಂದ, ಮರುದಿನ ಬೆಳಿಗ್ಗೆ ಬೆಳಗಾದಬಳಿಕ ಆತನು ಎದ್ದನು. ಆಗ ಜಗತ್ತು ಆತನಿಗೆ ಹೊಸದಾಗಿ ತೋರಿತು. ಮೋಸದಿಂದ ಇಂದ್ರಭುವನವು ಕೈಸೇರಿದ ಸುದ್ದಿಯನ್ನು ಮೋಹನನು ಹೇಳಲು, ಅಶೋಕನಿಗೆ ಪರಮಾಶ್ಚರ್ಯವಾಯಿತು. ಮೋಸದಗೆಲವು ಆತನ ಆನಂದಕ್ಕೆ ಕಾರಣವಾಗಲಿಲ್ಲ; ಆದರೂ ಆತನು ತನ್ನ ಸೇವಕನಾದ ಮೋಹನನನ್ನು ಕುರಿತು—ಮೋಹನ, ಆ ಹಸರು

ಬಣ್ಣದ ಡೇರೆಯಲ್ಲಿ ದರ್ಬಾರು ನೆರೆಯುವ ವ್ಯವಸ್ಥೆ ಮಾಡಿ, ಕಲಿಂಗ ವಿಜಯದಿಂದ ಸಂತೋಷಭರಿತರಾಗಿ ನನ್ನದರ್ಶನಕ್ಕೆ ಬರುತ್ತಿರುವ ಆ ಜನಸಮೂಹದೊಳಗಿನ ಮುಖ್ಯರನ್ನು ಅಲ್ಲಿ ಕುಳ್ಳಿರಿಸುವಹಾಗೆ ಮಾಡು; ಮತ್ತು ರಾಧಾಗುಪ್ತ ಮಂತ್ರಿಯೂ, ಸರದಾರಮಂಡಲವೂ ದರ್ಬಾರಕ್ಕೆ ಬರುವಂತೆ ಹೇಳಿಕಳಿಸು. ನಾನು ಈಗಲೇ ಡೇರೆಗೆ ಹೋಗಿ ಬರುವೆನು; ಹೇಗೇ ಆಗಲಿ, ಮಗಧದೇಶಕ್ಕೆ ಜಯವನ್ನು ಸಂಪಾದಿಸಿಕೊಟ್ಟವರ ಅಭಿನಂದನವನ್ನು ಶಿಷ್ಟಾಚಾರದಂತೆ ಮಾಡತಕ್ಕದ್ದು. ಈವರೆಗೆ ಅಶೋಕನು ಸಂಪಾದಿಸಿದ ಜಯಕ್ಕೆ ಮೋಸದ ಈ ಕಲಿಂಗವಿಜಯವು ಕಲಂಕಪ್ರಾಯವಾಯಿತು, ಎಂದು ನುಡಿದು, ತನ್ನ ಡೇರೆಗೆ ಹೋದನು. ಸ್ವಲ್ಪ ಹೊತ್ತಿನಲ್ಲಿ ದರ್ಬಾರವು ಕೂಡಹತ್ತಿತು. ರಾಧಾಗುಪ್ತಮಂತ್ರಿಯೂ, ಕಲಿಂಗದೇಶದ ಯುದ್ಧದಲ್ಲಿ ಸೇರಿದ ಯಾವತ್ತು ಸರದಾರರೂ ದರ್ಬಾರಕ್ಕೆ ಬಂದಿದ್ದರು. ನೆರೆದಿದ್ದ ಸರದಾರರನ್ನೂ, ವೀರರನ್ನೂ ಮುಖ್ಯವಾಗಿ ರಾಧಾಗುಪ್ತಮಂತ್ರಿಯನ್ನೂ ತಿರಸ್ಕಾರದಿಂದ ನೋಡುತ್ತ ಸಂಪುಷ್ಟಾಚಾರ್ಯರ ಸವಾರಿಯು, ಒಮ್ಮೆ ಬುದ್ಧಿಮತಿರಾಣಿಯೊಡನೆ, ಒಮ್ಮೆ ಪ್ರಮೀಲೆಯೊಡನೆ ಮಾತಾಡುತ್ತ ಬಂದು ಉಚ್ಚಾಸನದಲ್ಲಿ ಕುಳಿತುಕೊಂಡಿತು. ಅಷ್ಟರಲ್ಲಿ ಡೇರೆಯ ಬಾಗಿಲೊಳಗೆ "ಮೌರ್ಯಕುಲೋತ್ಪನ್ನ ಮಗಧಾಧಿಪತಿ ಸಾಂಮ್ರಾಟ್ ಅಶೋಕನಿಗೆ ಜಯವಾಗಲಿ" ಎಂದು ಸ್ತುತಿಪಾಠಕರು ಉಚ್ಚರಿಸಿದರು. ಅಶೋಕನು ಡೇರೆಯಲ್ಲಿ ಬಂದಕೂಡಲೆ ಯಾವತ್ತು ಸರದಾರರು ಎದ್ದು ನಿಂತು, ಸ್ತುತಿಪಾಠಕರ ಜಯಶಬ್ದದ ಸಂಗಡಲೇ ಜಯಘೋಷವನ್ನು ಮಾಡಿದರು. ರಾಜಮಾತೆಯೂ, ಸಂಪುಷ್ಟಾಚಾರ್ಯನೂ ಪ್ರಸಂಗಕ್ಕೆ ಒಪ್ಪುವಂತೆ ಅಶೋಕನನ್ನು ಆಢ್ಯತೆಯಿಂದ ಆಶೀರ್ವದಿಸಿದರು. ಇಂದುಮತಿಯ ಮಗನಾದ ವೀತಾಶೋಕನು ಅಶೋಕನ ಮಲತಮ್ಮನಾಗಿದ್ದನು. ಅಣ್ಣನಮೇಲೆ ಆತನ ಭಕ್ತಿ ಬಹಳ. ಅಶೋಕನ ಶುಭ್ರವಾದ ಸರ್ವಸಾಧಾರಣ ಉಡಿಗೆತೊಡಿಗೆಗಳನ್ನೂ, ಆತನ ಗಂಭೀರವಾದ ಮುಖಮುದ್ರೆಯನ್ನೂ, ಕಲಿಂಗವಿಜಯದಿಂದ ಆತನಿಗೆ ಪ್ರಾಪ್ತವಾದ ಚಕ್ರವರ್ತಿ

ಪದವಿಯನ್ನೂ ನೋಡಿ, ವೀತಾಶೋಕನ ಕಣ್ಣುಗಳೊಳಗಿಂದ ಆನಂದ ಬಾಷ್ಪಗಳು ಉದುರುತ್ತಲಿದ್ದವು; ಆದರೆ ಇಂದುಮತಿಗೆ ಮಗನ ಈ ಸ್ಥಿತಿಯು ಅಸಹ್ಯವಾಗಿತ್ತು. ತನ್ನ ಮಗನು ಅಶೋಕನೊಡನೆ ದ್ವೇಷ ಮಾಡಬೇಕೆಂದು ಆಕೆಯು ಇಚ್ಛಿಸುತ್ತಿದ್ದಳು. ತಾನು ಬಿಂದುಸಾರನ ಹಿರಿಯಹೆಂಡತಿಯಿದ್ದು, ತನ್ನಮಗನಾದ ವೀತಾಶೋಕನಿಗೆ ಪಟ್ಟವಾಗದೆ, ಕೆಲವು ತಾಸು ಮೊದಲು ಹುಟ್ಟಿದನೆಂಬ ನೆವದಿಂದ ಅಶೋಕನಿಗೆ ಪಟ್ಟವಾದದ್ದು ಆಕೆಯ ಮತ್ಸರಕ್ಕೆ ಕಾರಣವಾಗಿತ್ತು. ಆಕೆಯು ಹೊರಗೆ ಅಶೋಕನನ್ನು ಪ್ರೀತಿಸುವಂತೆ ತೋರಿಸುತ್ತಿದ್ದರೂ, ಅಂತರಂಗ ದಲ್ಲಿ ಅಶೋಕನ ಮೇಲೆ ಹಲ್ಲುಕಡಿಯುತ್ತಿದ್ದಳು. ಹೊತ್ತುಸಾಧಿಸಿ ಅಶೋಕನನ್ನು ಪಟ್ಟದಿಂದ ದೂಡಿ ತನ್ನ ಮಗನನ್ನು ಮಗಧದ ಸಿಂಹಾಸನದಮೇಲೆ ಕುಳ್ಳಿರಿಸಬೇಕೆಂದು ಆಕೆಯು ಎಣಿಕೆಹಾಕುತ್ತಲಿ ದ್ದಳು. ತಾನೂ ಸಂಪುಷ್ಟಾಚಾರ್ಯನೂ ಕಪಟಕೃತಿಯಿಂದ ಕಲಿಂಗ ವನ್ನು ಜಯಿಸಿರಲು, ಅಶೋಕನು ಚಕ್ರವರ್ತಿಯಾಗುವದು ಆಕೆಯ ಮನಸ್ಸಿನ ಅಸಮಾಧಾನಕ್ಕೆ ಕಾರಣವಾಯಿತು.

ಈ ಮೇರೆಗೆ ದರ್ಬಾರವು ನೆರೆದ ಬಳಿಕ ರಾಧಾಗುಪ್ತ ಮಂ ತ್ರಿಯು ಎದ್ದುನಿಂತು ಅಶೋಕನ ಮಹತ್ವವನ್ನು ವರ್ಣಿಸಿ, ಆತನ ಶೌರ್ಯಾದಿಗುಣಗಳನ್ನು ಹೊಗಳಿ, ಈ ಮೊದಲು ಯಾರಿಗೂ ದೊರೆ ಯದೆಯಿದ್ದ ಚಕ್ರವರ್ತಿ ಪದವಿಯು ದೊರೆತ ಬಗ್ಗೆ ಆತನನ್ನು ಹಲವು ವಿಧವಾಗಿ ಅಭಿನಂದಿಸಿದನು. ಮಂತ್ರಿಯ ಸ್ತುತಿಪಾಠವು ಇಂದುಮತಿಗೆ ಸೇರದಿದ್ದರೂ, ಆಕೆಯು ದರ್ಬಾರದಲ್ಲಿ ಮಾತಾಡದೆ ಬಾಯಿಮುಚ್ಚಿ ಕೊಂಡು ಸುಮ್ಮನೆ ಇರಬೇಕಾಯಿತು. ಸರದಾರರೂ, ಮಾಂಡಲಿಕರೂ ಅಶೋಕನನ್ನು ಮನಃಪೂರ್ವಕವಾಗಿ ಸ್ತುತಿಸಿದರು. ತಮ್ಮ ಪ್ರಯತ್ನ ದಿಂದ ಜಯವಾಗಿದ್ದು, ದರ್ಬಾರದ ಜನರು ತಮ್ಮ ಹೆಸರನ್ನು ಉಚ್ಚ ರಿಸದೆ, ಬರಿಯ ಅಶೋಕನ ಪುಣ್ಯ ಪ್ರತಾಪವನ್ನೇ ವರ್ಣಿಸಿದ್ದರಿಂದ ಇಂದುಮತಿಯೂ, ಸಂಪುಷ್ಟಾಚಾರ್ಯನೂ ಮನಸ್ಸಿನಲ್ಲಿ ನೊಂದುಕೊಂ ಡರು. ಅವರ ಮುಖಗಳು ನಿಸ್ತೇಜವಾದವು. ಅವರು ಒಬ್ಬರಮುಖ

ವನ್ನೊಬ್ಬರು ನೋಡಿ ಮನಸ್ಸಿನಲ್ಲಿ ಸಂತಾಪಗೊಳ್ಳುತ್ತಿರಲು, ದರ್ಬಾರ ದವರು ಅಶೋಕನ ಹೆಸರಿನಿಂದ ಮಾಡಿದ ಜಯಘೋಷದಿಂದ ಸಭಾ ಸ್ಥಾನವು ತುಂಬಿಹೋಗಿ, ಸಭಿಕರ ಕಿವಿಗಳು ಗಡಚಿಕ್ಕಿದವು. ಸಭೆಯು ನಿಶ್ಶಬ್ದವಾದಮೇಲೆ ಅಶೋಕನು—ಆಚಾರ್ಯರೇ, ಮಾತೃಶ್ರೀಯವರೇ, ನೀವು ನಿಮ್ಮ ಯುಕ್ತಿಯಿಂದಲೂ, ಕುಮಾರ ವೀತಾಶೋಕನು ತನ್ನ ಪರಾಕ್ರಮದಿಂದಲೂ ಕಲಿಂಗದೇಶವನ್ನು ಜಯಿಸಿದಿರಿ. ಇದಕ್ಕಾಗಿ ಮಗಧ ಸಾಮ್ರಾಜ್ಯವು ನಿಮಗೆ ಋಣಿಯಾಗಿರುತ್ತದೆ. ನೀವು ಮಾಡಿದ ಯುಕ್ತಿಯನ್ನೂ, ವೀತಾಶೋಕನ ಪರಾಕ್ರಮವನ್ನೂ ನಿಮ್ಮ ಮುಖ ದಿಂದ ಕೇಳಬೇಕೆಂದು ಇಚ್ಛಿಸುತ್ತೇನೆ; ಆದರೆ ಸದ್ಯಕ್ಕೆ ಅದು ಬೇಡ. ಈಗ ಕಲಿಂಗದ ರಾಜ್ಯವ್ಯವಸ್ಥೆಯನ್ನು ಮಾಡಿ ಮೊದಲು ಪಾಟಲೀ ಪುತ್ರಕ್ಕೆ ತೆರಳುವದು ಹಿತಕರವಾಗಿ ತೋರುತ್ತದೆ ರೋಗಬಾಧೆಯಿಂದ ನಮ್ಮ ಜನರ ಪ್ರಾಣಹಾನಿಯಾಗುತ್ತಿರುವದನ್ನು ನೀವು ಬಲ್ಲಿರಿ. ಮೃಗೇಂದ್ರನು ಎಲ್ಲಿ ಇರುತ್ತಾನೆ? ಆತನು ಒಡಂಬಡಿಕೆಯನ್ನು ಮಾಡಿ ಕೊಳ್ಳಲಿಕ್ಕೆ ಸಿದ್ಧನಿರುವನೋ? ಎಂದು ನುಡಿಯಲು, ಸಂಪುಷ್ಟಾಚಾ ರ್ಯನು—ಭಗವನ್, ನಮ್ಮ ಈ ಕಾರ್ಯಕ್ಕಾಗಿ ನೀವು ಸಂತೋಷಪಟ್ಟ ದ್ದರಿಂದ ನಮಗೆ ಸಂತೋಷವಾಯಿತು. ಕಲಿಂಗ ರಾಜ್ಯವ್ಯವಸ್ಥೆಯನ್ನು ಮಾಡಿ ಪಾಟಲೀಪುತ್ರಕ್ಕೆ ಬೇಗನೆ ಹೋಗುವದು ನಮಗೂ ಇಷ್ಟವಾ ಗಿಯೇ ಇದೆ; ಆದರೆ ಮೃಗೇಂದ್ರನ ಸುದ್ದಿಯಿಲ್ಲ. ಆತನು ಬದುಕಿರು ವನೋ, ಸತ್ತಿರುವನೋ ಎಂಬದರ ನಿಶ್ಚಯವೂ ನಮಗಿರುವದಿಲ್ಲ. ಅಂದ ಬಳಿಕ ಆತನು ಒಡಂಬಡಿಕೆಗೆ ಒಪ್ಪಿಕೊಳ್ಳುವನೋ ಇಲ್ಲವೋ, ಎಂಬ ದನ್ನು ನಾವು ಹೇಗೆ ಹೇಳೋಣ? ಆತನು ಸತ್ತಿರಲಿ—ಬದುಕಿರಲಿ. ಒಡಂಬಡಿ ಕೆಗೆ ಆತನೂ ಒಪ್ಪಿಕೊಳ್ಳಲಿ-ಒಪ್ಪಿಕೊಳ್ಳದಿರಲಿ, ಕಲಿಂಗದ ರಾಜ್ಯವನ್ನು ಮೃಗೇಂದ್ರನಿಗೆ ಕೊಡಲಾಗದು. ಕಲಿಂಗವಿಜಯದಲ್ಲಿ ಈ ತರುಣಿಯು— ವಿಶಾಖಾಸಂದ ಮಂತ್ರಿಯ ಪತ್ನಿಯಾದ ಪ್ರಮೀಲೆಯು ಮುಖ್ಯ ಸಹಾ ಯಕಳಾದ್ದರಿಂದ ಕಲಿಂಗದ ಪಟ್ಟವನ್ನು ಈಕೆಗೆ ಕೊಡತಕ್ಕದ್ದು, "ನಿನಗೆ ಕಲಿಂಗದಪಟ್ಟವನ್ನು ಕೊಡುವೆವೆಂದು" ಪ್ರಮೀಲೆಗೆ ವಚನವನ್ನು

ಕೊಟ್ಟು, ನಾವು ಈಕೆಯ ಸಹಾಯವನ್ನು ಪಡೆದಿರುತ್ತೇವೆ. ನಮ್ಮ ವಚನವನ್ನು ಈಗ ಮಗಧಭೂಪತಿಯು ನಡಿಸತಕ್ಕದ್ದು, ಎಂದು ನುಡಿದು ಸಂಪುಷ್ಟಾಚಾರ್ಯರು ಸುಮ್ಮನಾಗಿ ಇಂದುಮತಿಯ ಮುಖವನ್ನು ನೋಡಲು, ಆ ರಾಜಮಾತೆಯು ಅಶೋಕನನ್ನು ಕುರಿತು—ಕುಮಾರಾ, ಮಗಧಚಕ್ರವರ್ತಿಯೇ, ನೀನು ಗುರುಗಳ ಮಾತನ್ನು ನಡಿಸಲೇಬೇಕು. ಮೃಗೇಂದ್ರನು ಈಗ ರಾಜ್ಯಭ್ರಷ್ಟನಾಗಿರುವದರಿಂದ, ಆತನ ಮಗಳಾದ ಪ್ರಣಯಿನಿಯೊಡನೆ ಕುಮಾರ ವೀತಾಶೋಕನ ಲಗ್ನವಾಗುವಹಾಗಿಲ್ಲ. ಇನ್ನುಮೇಲೆ ಕಲಿಂಗದ ಪ್ರಜೆಗಳನ್ನು ಒತ್ತಾಯದಿಂದ ಬೌದ್ಧರನ್ನು ಮಾಡಬಹುದಾದ್ದರಿಂದ, ಧರ್ಮಯುದ್ಧದ ಉದ್ದೇಶವೂ ಸಫಲವಾದಂತಾಯಿತು. ಕಲಿಂಗದ ಪಟ್ಟವನ್ನು ಕೊಡುವದರಿಂದ ಈ ಪ್ರಮೀಲೆಯೂ, ಆಕೆಯ ಪತಿಯಾದ ವಿಶಾಖಾನಂದನೂ ಬೌದ್ಧರಾಗುವರು. ಅಂದಬಳಿಕ ವೇದಧರ್ಮಿಗಳ ಆಧಾರಸ್ತಂಭದಂತೆ ಇದ್ದ ಕಲಿಂಗದೇಶವು ಅನಾಯಾಸವಾಗಿ ಬೌದ್ಧರಾಜ್ಯವಾಗಿ, ಪಾಟಲಿಪುತ್ರದ ಮಾಂಡಲಿಕತ್ವವನ್ನು ಒಪ್ಪಿಕೊಳ್ಳುವದು.

ಈ ಮೇರೆಗೆ, ಗುರುಗಳು ಹಾಗೂ ತಾಯಿಯು ಆಡಿದ ಮಾತುಗಳನ್ನು ಕೇಳಿ ಅಶೋಕನು ಅವರನ್ನು ಕುರಿತು—ಪೂಜ್ಯರೇ, ನೀವಾಡುವದು ನಿಜವು; ಆದರೆ ಮೃಗೇಂದ್ರನಂಥ ಬಲಿಷ್ಠರಾಜನು ಕಪಟಕೃತಿಯಿಂದ ಸೋತಿರಲು, ಆತನ ರಾಜ್ಯವನ್ನು ಕಸಿದು ಅನ್ಯರಿಗೆ ಕೊಡುವದು ನ್ಯಾಯವಲ್ಲ. ಮೃಗೇಂದ್ರನು ಬದುಕಿ ಇದ್ದು ಆತನು ಮಗಧದೇಶದ ಮಾಂಡಲಿಕತ್ವವನ್ನು ಕೈಕೊಂಡರೆ, ಆತನ ರಾಜ್ಯವನ್ನು ಆತನಿಗೆ ತಿರುಗಿ ಕೊಡಬೇಕಾಗುವದು. ಒಂದು ಪಕ್ಷದಲ್ಲಿ ಮೃಗೇಂದ್ರನು ಸತ್ತಿದ್ದರೆ, ಆತನ ಮಗನಾದ ಜಿತೇಂದ್ರನು ಬೌದ್ಧಧರ್ಮವನ್ನು ಸ್ವೀಕರಿಸಿ ಮಗಧದ ಮಾಂಡಲಿಕನಾಗಲು ಒಪ್ಪಿದರೆ, ಆತನ ತಂದೆಯ ರಾಜ್ಯವನ್ನು ಆತನಿಗೆ ಕೊಡಬೇಕಾಗುವದು. ಇನ್ನು ಪ್ರಮೀಲಾದೇವಿಯು ಮಾಡಿದ ಸಹಾಯಕ್ಕಾಗಿ ಆಕೆಗೆ ಬೇರೊಂದು ರಾಜ್ಯವನ್ನು ಕೊಡೋಣ. ಒಂದುಪಕ್ಷದಲ್ಲಿ ಮೃಗೇಂದ್ರನಮಗನಿಗೆ ಕಲಿಂಗದ ರಾಜ್ಯಕೊಡುವದರ ಬದಲು

ಪ್ರಮೀಲೆಗೆ ಕೊಡಬಹುದು; ಆದರೆ ಮೃಗೇಂದ್ರನು ಮರಣಹೊಂದಿರುವ ನೆಂಬದರ ನಿಶ್ಚಯವಾಗುವವರೆಗೆ, ಅಥವಾ ಮೃಗೇಂದ್ರನು ನಮ್ಮ ಕರಾರು ಗಳಿಗೆ ಒಪ್ಪಿಕೊಳ್ಳುವದಿಲ್ಲೆಂಬದು ಗೊತ್ತಾಗುವವರೆಗೆ ಕಲಿಂಗದ ರಾಜ್ಯವು ಶಾಶ್ವತವಾಗಿ ಪ್ರಮೀಲೆಗೆ ದೊರೆಯಲಾರದು. ಬೇಕಾದರೆ ಈವೆರಡುಮಾತುಗಳ ನಿರ್ಣಯವಾಗುವತನಕ ಪ್ರಮೀಲಾದೇವಿಗೆ ಕಲಿಂಗದ ರಾಜ್ಯವನ್ನು ಒಪ್ಪಿಸಬ ಹುದು, ಎಂದು ನುಡಿದನು. ಈ ಮಾತುಗಳನ್ನು ಕೇಳಿ ಅಸಮಾಧಾನ ಪಟ್ಟ ಪ್ರಮೀಲೆಯು, ಎದ್ದು ನಿಂತು ಅಶೋಕನನ್ನು ಕುರಿತು—ಬೌದ್ಧಚಕ್ರ ವರ್ತಿಗಳೇ, ನನ್ನ ಬಿನ್ನಹವನ್ನು ಲಾಲಿಸಬೇಕು. ಕಲಿಂಗದ ರಾಣಿಯಾಗ ಬೇಕೆಂಬ ಮಹತ್ವಾಕಾಂಕ್ಷೆಯಿಂದಲೇ ನಾನು ಇಂಥ ದ್ರೋಹದ ಕಾರ್ಯಕ್ಕೆ ಮನಸ್ಸುಮಾಡಿದೆನು. ಜಿತೇಂದ್ರನಿಗೆ ಕಲಿಂಗದ ಪಟ್ಟಕೊಡುವ ವಿಚಾರವನ್ನು ಚಕ್ರವರ್ತಿಗಳು ರಹಿತಮಾಡಿಯೇ ಇರುವಿರಿ; ಆದರೆ ಮೃಗೇಂದ್ರನು ಮರಣ ಹೊಂದಿರುವನೆಂಬದರ ನಿಶ್ಚಯವನ್ನು ಈಗಲೇ ನಾನು ಮಾಡಿಕೊಡುವೆನು. ಆಮೇಲೆ ಕಲಿಂಗದ ಸಿಂಹಾಸನವನ್ನು ನನಗೆಕೊಡಲಿಕ್ಕೆ ಆತಂಕವೇನು? ಎಂದು ಹೇಳಿ ಯುದ್ಧದಲ್ಲಿ ಮರಣಹೊಂದಿದ ಒಬ್ಬನ ಹೆಣವನ್ನೂ, ಮೃಗೇಂದ್ರನ ಭಾವಪಟವನ್ನೂ ಅಶೋಕನ ಮುಂದೆ ಇಡಿಸಿದಳು. ಇದನ್ನು ನೋಡಿ ಸಭಿಕರು ಬೆರಗಾದರು. ಮೃಗೇಂದ್ರನ ಭಾವಪಟವನ್ನು ಶವವು ಅಚ್ಚಳಿಯದೆ ಹೋಲುತ್ತಿತ್ತು. ಶವದ ಮೈಮೇಲಿನ ವಸ್ತ್ರಾಭರಣಗಳು ಶವದ ಅರಸುತನ ವನ್ನು ವ್ಯಕ್ತಗೊಳಿಸುತ್ತಿದ್ದವು. ಇದನ್ನು ನೋಡಿ ಅಶೋಕನು ವಿಚಾರ ಮಗ್ನನಾಗಿರಲು, ದರ್ಬಾರದೊಳಗೆ ಬೌದ್ಧಸೈನಿಕರ ಕಾವಲಿನಲ್ಲಿ ಕುಳಿತು ಕೊಂಡಿದ್ದ ಚಿದಾನಂದ ಸ್ವಾಮಿಗಳು ಎದ್ದುನಿಂತು ಅಶೋಕನನ್ನು ಕುರಿತು— ಸತ್ಯಪ್ರಿಯನಾದ ಬೌದ್ಧಭೂಪತಿಯೇ, ನನ್ನ ಮಾತನ್ನು ಲಾಲಿಸಬೇಕು. ಈ ಶವವು ಮೃಗೇಂದ್ರನದಲ್ಲ. ಮೃಗೇಂದ್ರನ ತಂದೆಯ ಹಲವು ಜನ ಹೆಂಡಿ ರಲ್ಲಿ ಹುಟ್ಟಿದ ಇವನೊಬ್ಬ ರಾಜಪುತ್ರನು, ಮೃಗೇಂದ್ರನನ್ನು ಅಚ್ಚಳಿಯದೆ ಹೋಲುವದು ಆಶ್ಚರ್ಯವಲ್ಲ. ಮೃಗೇಂದ್ರನ ಗುರುವೆನಿಸುವ ಈ ಚಿದಾ ನಂದನು ಸರ್ವಥಾ ಅಸತ್ಯವನ್ನು ನುಡಿಯಲಾರನು. ಉದಾರರಾಜನೀತಿಗ್ರೂ, ನ್ಯಾಯಕ್ಕೂ ಸಮ್ಮತವಾಗಿ ಆಡಿದ ನಿನ್ನ ಮಾತುಗಳನ್ನು ಕೇಳಿ ನಾನು ಸತ್ಯ

ವನ್ನು ನುಡಿದಿದ್ದೇನೆ. ಇದರ ಮೇಲೆ ಪ್ರಭುಚಿತ್ತವು! ಎಂದು ನುಡಿದು ಕುಳಿತುಕೊಂಡರು.

ಮೊದಲೇ ಚಿದಾನಂದರ ತೇಜಸ್ಸನ್ನು ನೋಡಿ ಪೂಜ್ಯಬುದ್ಧಿಯುಳ್ಳವರಾಗಿದ್ದ ಅಶೋಕನೇ ಮೊದಲಾಗಿದ್ದ ಸಭಿಕರು “ ಚಿದಾನಂದ ” ಎಂಬ ಶಬ್ದವು ಕಿವಿಗೆ ಬಿದ್ದಕೂಡಲೆ ಪರಮಾಶ್ಚರ್ಯಪಟ್ಟು, ಸುಮ್ಮನೆ ಚಿದಾನಂದಸ್ವಾಮಿಗಳ ಕಡೆಗೆ ನೋಡುತ್ತ ಕುಳಿತುಕೊಂಡರು. ಆಮೇಲೆ ಅಶೋಕನು ಅತ್ಯಂತವಾದ ಆದರದಿಂದ ಚಿದಾನಂದರನ್ನು ಕುರಿತು—ಮಹಾತ್ಮರೇ, ಸಿಂಹಾಸನಸ್ಥ ಅಶೋಕನು ಅತ್ಯಂತ ಲೀನತೆಯಿಂದ ವಂದಿಸುತ್ತಾನೆ. ನನ್ನ ನಡತೆಯಲ್ಲಿ ತೋರಿಬರುವ ಅತಿಕ್ರಮಕ್ಕಾಗಿ ಕ್ಷಮೆಯಿರಬೇಕು. ಸದ್ಯಕ್ಕೆ ಈ ದರ್ಬಾರದಲ್ಲಿ ಒದಗಿರುವ ಸಾಕ್ಷಿಗಳಿಂದ ನಾನು ಕಲಿಂಗದೇಶವನ್ನು ಪ್ರಮಿಲಾದೇವಿಗೆ ಒಪ್ಪಿಸುವೆನು. ಮೃಗೇಂದ್ರನು ಜೀವದಿಂದಿದ್ದು ನನ್ನ ಕರಾರುಗಳಿಗೆ ಆತನು ಒಪ್ಪಿಕೊಂಡಪಕ್ಷದಲ್ಲಿ ಆತನ ರಾಜ್ಯವು ಆತನಿಗೆ ದೊರೆಯುವದು. ಸ್ವಾಮಿಗಳು ಈ ದಾಸನ ಆತಿಥ್ಯವನ್ನು ಕೈಕೊಳ್ಳುವದಕ್ಕಾಗಿ ಪಾಟಲಿಪುತ್ರಕ್ಕೆ ಬರಬಹು, ಇಲ್ಲವೆ ಚಿತ್ತಕ್ಕೆ ಬಂದಂತೆ ವರ್ತಿಸಬಹುದು. ಅನ್ನಲು, ಚಿದಾನಂದಸ್ವಾಮಿಗಳು—ಬೌದ್ಧಭೂಪತಿಯೇ, ಸದ್ಯಕ್ಕೆ ಕಲಿಂಗವನ್ನು ನೀನು ಜಯಿಸುರುವದರಿಂದ ಭರತಖಂಡದ ಚಕ್ರವರ್ತಿಯಾಗಿರುವ ನಿನ್ನ ಆಡಳಿತಕ್ಕೆ ನಾವೆಲ್ಲರೂ ಒಳಪಟ್ಟಂತೆಯೇ ಆಗಿರುವದಲ್ಲವೇ? ವಿನಯಶೀಲನಾದ ನಿನ್ನಂಥ ಚಕ್ರವರ್ತಿಯ ನಿಷ್ಕಂಟಕವಾದ ಆಳಿಕೆಯಲ್ಲಿ ನಾವು ಸ್ನಾನಸಂಧ್ಯಾದಿ ಕರ್ಮಗಳನ್ನು ಮಾಡುತ್ತ, ಎಲ್ಲಿ ಇದ್ದರೇನು? ನಿನ್ನ ರಾಜ್ಯದಲ್ಲಿಯೇ ಇದ್ದಹಾಗಲ್ಲವೇ? ಶಿಷ್ಯನಾದ ಮೃಗೇಂದ್ರನು ರಾಜ್ಯಭ್ರಷ್ಟನಾಗಿರಲು, ಪಾಟಲಿಪುತ್ರದಲ್ಲಿ ನಾನು ಸ್ವಸ್ಥವಾಗಿರುವದು ಹೇಗೆ? ನಿನ್ನ ಆತಿಥ್ಯಕ್ಕೆ ನಮ್ಮಂಥ ಪರಾಧೀನರು ಸದಾ ಪಾತ್ರರಾಗಿರುವೆವು. ಎಲ್ಲಿದ್ದರೂ ವರ್ಣಾಶ್ರಮಧರ್ಮಗಳನ್ನು ರಕ್ಷಿಸುವವನು ನೀನೇಯಲ್ಲವೆ? ಅನ್ನಲು, ಅಶೋಕನು ಸಿಂಹಾಸನದಿಂದಿಳಿದು ತಲೆಬಾಗಿಸಿ ವಂದಿಸಿದನು. ಚಿದಾನಂದಸ್ವಾಮಿಗಳು ಅಶೋಕನ ಸೌಜನ್ಯಕ್ಕೆ ಮೆಚ್ಚಿ, ಆತನನ್ನು ಆಶೀರ್ವದಿಸಿ ದರ್ಬಾರದಿಂದ ಹೊರಟುಹೋಗಲು, ರಾಧಾಗುಪ್ತನೊಡನೆ ಅಶೋಕನು ತನ್ನ ಡೇರೆಗೆ, ಉಳಿದವರು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

# ೭ನೆಯ ಪ್ರಕರಣ--ಜಿತೇಂದ್ರನು.

ಮೃಗೇಂದ್ರನ ಮಗನಾದ ಜಿತೇಂದ್ರನು ಹರಿದ್ವಾರದಲ್ಲಿಯ ಚಿದಾನಂದ ಸ್ವಾಮಿಗಳ ಆಶ್ರಮದಲ್ಲಿದ್ದದ್ದನ್ನು ವಾಚಕರು ಬಲ್ಲಿರಷ್ಟೆ? ಆ ತರುಣನು ಒಂದು ದಿನ ಇಳಿಹೊತ್ತಿನಲ್ಲಿ ಆಶ್ರಮದಿಂದ ಹೊರಟು ಗಂಗಾತೀರದಲ್ಲಿ ಸಂಚರಿಸುತ್ತ ಸಂಚರಿಸುತ್ತ ಒಂದು ಕಲ್ಲುಬಂಡೆಯಮೇಲೆ ಕುಳಿತುಕೊಂಡು, ಒಮ್ಮೆ ಗಂಗಾಪ್ರವಾಹದ ಶೋಭೆಯನ್ನೂ, ಮತ್ತೊಮ್ಮೆ ಪಶ್ಚಿಮದಿಕ್ಕಿನ ಸಂಧ್ಯಾ ರಾಗದ ಸೊಬಗನ್ನೂ ನೋಡುತ್ತಲಿದ್ದನು. ಆತನ ಮುಖದಲ್ಲಿ ಮೀಸೆಗಳು ಅದೇ ಒಡೆಯುತ್ತಿದ್ದು, ಅದ್ವಿತೀಯವಾದ ಬ್ರಹ್ಮಚರ್ಯದ ತೇಜಸ್ಸು ಉಕ್ಕು ತ್ತಿತ್ತು. ಆತನ ಮನೋಹರವಾದ ನೇತ್ರಗಳು ನಿಜವಾದ ಕ್ಷಾತ್ರತೇಜಸ್ಸಿ ನಿಂದ ಹೊಳೆಯುತ್ತಿದ್ದವು. ಆ ಕ್ಷತ್ರಿಯವೀರನ ವಿಶಾಲವಾದ ಹಣೆಯೂ, ಬಲಿಷ್ಠವಾದ ಸುಂದರದೇಹವೂ ಆತನು ಪುಣ್ಯಶಾಲಿಯಾದ ರಾಪುತ್ರನೆಂದು ಸ್ಪಷ್ಟವಾಗಿ ಹೇಳುತ್ತಿದ್ದವು; ಆದರೂ ಆತನ ಉಡಿಗೆ-ತೊಡಿಗೆಗಳು ಮಾತ್ರ ಋಷಿಪುತ್ರನ ನೆನಪುಮಾಡಿಕೊಡುತ್ತಿದ್ದವು. ಆತನು ಒಂದು ಶುಭ್ರವಸ್ತ್ರವನ್ನು ಟ್ಟಿಕೊಂಡು, ಅದರ ಅರ್ಧಭಾಗವನ್ನು ಎದೆಗೆ ಸುತ್ತಿಕೊಂಡಿದ್ದನು. ತಲೆಯ ಮೇಲೆ ಕರಿಗೂದಲುಗಳ ಹೊರತು ಬೇರೆ ಆಚ್ಛಾದನವಿದ್ದಿಲ್ಲ. ಆತನ ಮುಂಡಿ ದಿರುಗಿದ ತೋಳುಗಳು ಆತನ ಶರೀರಸಾಮರ್ಥ್ಯವನ್ನು ವ್ಯಕ್ತಮಾಡುತ್ತಿದ್ದವು. ಆತನ ಕಾಲೊಳಗಿನ ಕಟ್ಟಿಗೆಯ ಅವುಗೆಗಳು ಬಂಡೆಯಮುಂದೆ ಬಿದ್ದಿದ್ದವು. ಬಂಡೆಯಮೇಲೆ ಸಮೀಪದಲ್ಲಿ ಆತನ ದೀರ್ಘವಾದ ಧನುಸ್ಸು ಬಿದ್ದಿತ್ತು. ಪ್ರಸ ನ್ನವದನನಾದ ಆ ತರುಣ ಜಿತೇಂದ್ರನು, ಸಮಾಧಾನದಿಂದ ಸೃಷ್ಟಿಸೌಂದ ರ್ಯವನ್ನು ನೋಡಬೇಕೆಂದು ಆದಿನ ಆಶ್ರಮವನ್ನು ಬಿಟ್ಟು ಬಹುದೂರ ಬಂದಿದ್ದನು. ಪಕ್ಷಿಗಳ ಮಂಜುಲಗಾನ, ಸುತ್ತುಮುತ್ತು ಸುಳಿದಾಡುವ ಸುಗಂಧಯುಕ್ತ ಶೀತಲವಾಯು, ಆ ಸ್ಥಳದ ವಿಲಕ್ಷಣವಾದ ಶಾಂತಿ, ಇಳಿ ಹೊತ್ತಿನ ಮನೋಹರ ಪ್ರಸಂಗ, ಪವಿತ್ರವಾದ ಗಂಗಾಪ್ರವಾಹದ ಸಾನ್ನಿಧ್ಯ, ಆ ಸ್ಥಳದ ಅದ್ವಿತೀಯವಾದ ಶೋಭೆ ಇವುಗಳ ಯೋಗದಿಂದ ಆ ತರುಣನ

ಸುಸಂಸ್ಕೃತವಾದ ಉತ್ಸಾಹಪೂರ್ಣಮನಸ್ಸು, ಸುಖಶೈಲದಮೇಲೆ ಆನಂದ ದಿಂದ ಕ್ರೀಡಿಸುತ್ತಿತ್ತು. ಆತನ ಕೆಳದುಟಿಯಲ್ಲಿ ಎಳೆನಗೆಯು ಮಿನುಗುತ್ತಿದ್ದು, ಕಣ್ಣುಗಳು ಕುತೂಹಲಪೂರ್ಣವಾಗಿದ್ದವು. ಸೂರ್ಯಾಸ್ತಸಮಯವು ಒದಗಿದ್ದರೂ ಆ ತರುಣನ ಸೃಷ್ಟಿನಿರೀಕ್ಷಣವು ಮುಗಿದಿದ್ದಿಲ್ಲ. ಅಷ್ಟರಲ್ಲಿ ಒಂದು ಬೆದರಿದ ಚಿಗರೆಯು ಓಡುತ್ತೋಡುತ್ತ ಆ ತರುಣನಬಳಿಗೆಬಂದು ತೇಕುತ್ತ ನಿಂತುಕೊಂಡಿತು. ಆ ಪುಕ್ಕಪ್ರಾಣಿಯು ಇಷ್ಟು ದಿಟ್ಟತನದಿಂದ ತನ್ನ ಬಳಿಯಲ್ಲಿ ನಿಂತುಕೊಂಡದ್ದನ್ನು ನೋಡಿ ಆ ತರುಣನು ಆಶ್ಚರ್ಯಪಟ್ಟನು. ಆತನು ಕಲ್ಲುಬಿಟ್ಟು ಕೆಳಗೆ ಇಳಿದು ಆ ಚಿಗರೆಯ ಬೆನ್ನಮೇಲೆ ಪ್ರೀತಿಯಿಂದ ಕೈಯಾಡಿಸಿದನು. ಆಗ ಚಿಗರೆಯು ಬಾಲವನ್ನಾಡಿಸುತ್ತ, ಮೆಲಕಾಡಿಸಿದಂತೆ ಮಾಡಿ ದಮ್ಮು ಆರಿಸಿಕೊಳ್ಳುತ್ತಿರಲು, ಅದರ ಬೆನ್ನುಹತ್ತಿ ಒಬ್ಬ ಸುಂದರ ತರುಣಿಯು ಕುದುರೆಯನ್ನು ಓಡಿಸುತ್ತ ಚಿಗರೆಯಬಳಿಗೆ ಬರತೊಡಗಿದಳು.

ತರುಣಿಯ ದಟ್ಟವಾದ ಕೇಶಕಲಾಪಗಳು ಆಕೆಯ ಮುಖದ ಮೇಲೆಯೂ, ಹೆಗಲಮೇಲೆಯೂ ಅಸ್ತವ್ಯಸ್ತವಾಗಿ ಅಲ್ಲಾಡುತ್ತಿದ್ದವು. ಕುದುರೆಯನ್ನು ಓಡಿಸುತ್ತಬಂದದ್ದರಿಂದ ಆಕೆಯ ಬೆಲೆಯುಳ್ಳ ರೇಶಿಮೆಯ ಸೀರೆಯು ಅಸ್ತವ್ಯಸ್ತವಾಗಿತ್ತು. ವಿಶೇಷ ಶ್ರಮವಾದದ್ದರಿಂದ ಆಕೆಯ ಗಲ್ಲಗಳ ನಸುಗೆಂಪು ಆಕೆಯ ಮುಖದ ಚಲ್ವಿಕೆಯನ್ನು ಮತ್ತಿಷ್ಟು ಹೆಚ್ಚಿಸುತ್ತಿತ್ತು. ಬೆವರಹನಿಗಳು ಆಕೆಯ ಮುಖದಲ್ಲಿ ಅಲ್ಲಲ್ಲಿ ಮುತ್ತುಗಳಂತೆ ಮಿನುಗುತ್ತಿದ್ದವು. ಆಕೆಯ ಹೆಗಲಿಗೆ ಬಿಲ್ಲುಬತ್ತಳಿಕೆಗಳಿದ್ದವು. ತನ್ನ ಶ್ವಾಸದಿಂದ ವಾಯುವನ್ನು ಸುಗಂಧಯುಕ್ತವಾಗಿ ಮಾಡುತ್ತ ಆ ಬಾಲೆಯು, ಚಿಗರೆಯು ಬಂದಕಡೆಯಿಂದ ಧಾವಿಸಿ ಬರುವದನ್ನು ನೋಡಿ, ಜಿತೇಂದ್ರನು ಬೆರಗಾದನು. ಇಂಥ ಭಯಂಕರವಾದ ಅರಣ್ಯದಲ್ಲಿ ಒಬ್ಬಳೇ ಒಬ್ಬ ತರುಣಿಯು, ಬೆಟ್ಟದಂಥ ಕುದುರೆಯನ್ನೇರಿ ಚಿಗರೆಯ ಬೆನ್ನಟ್ಟಿಬಂದದ್ದನ್ನು ಜಿತೇಂದ್ರನು ನೋಡಿದ್ದು, ಇದೇ ಮೊದಲು. ಚಿದಾನಂದರ ಆಶ್ರಮದಲ್ಲಿ ಸ್ತ್ರೀಯರ ಪ್ರವೇಶವೇ ಇಲ್ಲದಿರುವಾಗ, ಅರಣ್ಯಮಧ್ಯದ ಏಕಾಂತದಲ್ಲಾದ ಸುಂದರ ತರುಣಿಯ ಸಂದರ್ಶನವು, ಜಿತೇಂದ್ರನ ಕೌತುಕಕ್ಕೆ ಕಾರಣವಾದ

ದ್ದೇನು ಆಶ್ಚರ್ಯವಲ್ಲ. ತನ್ನ ಚಿಗರೆಯು ಒಬ್ಬ ತರುಣವೀರನ ಬಳಿಯಲ್ಲಿ ಸುರಕ್ಷಿತವಾಗಿ ನಿಂತದ್ದನ್ನು ನೋಡಿ, ಬಾಲೆಯು ಸ್ವಲ್ಪ ಸಾವಕಾಶವಾಗಿ ಕುದುರೆಯನ್ನು ನಡೆಸಿದಳು; ಆದರೂ ಆಕೆಯ ಚಟುವಟಿಕೆಯು ಕಡಿಮೆ ಯಾಗಿದ್ದಿಲ್ಲ. ಜಿತೇಂದ್ರನು ಚಿಗರೆಯಮೇಲೆ ಕೈಯಾಡಿಸುತ್ತ, ತನ್ನ ಬಳಿಗೆ ಬರುತ್ತಿರುವ ತರುಣಿಯ ಸುಂದರರೂಪವನ್ನು ಎವೆಯಿಕ್ಕದೆ ನೋಡುತ್ತಿರು ವಾಗ, ಆತನಿಗೆ ಕ್ಷಣಹೊತ್ತು ಇಹಲೋಕದ ವಿಸ್ಮರಣವಾದಂತಾಯಿತು. ಆ ರಮ್ಯಪ್ರದೇಶವು ಸ್ವರ್ಗದಂತೆಯೂ, ಆ ಸುಂದರಬಾಲೆಯು ಸ್ವರ್ಗಾಂಗನೆ ಯಂತೆಯೂ ಆತನಿಗೆ ತೋರಿದವು; ಆದರೆ ಮತ್ತೊಂದು ಕ್ಷಣದಲ್ಲಿ, ಹರಿದ್ವಾರವೆಂಬ ಗ್ರಾಮವು ತನ್ನ ಬೆನ್ನಹಿಂದೆ ಒಂದು ಹರದಾರಿ ಯಮೇಲೆ ಗಂಗಾತೀರದಲ್ಲಿರುತ್ತಿದ್ದು, ತಮ್ಮ ಆಶ್ರಮವು ಆ ಗ್ರಾಮದಿಂದ ಸ್ವಲ್ಪದೂರದಲ್ಲಿರುತ್ತದೆಂಬದು ಅವನ ನೆನಪಿಗೆ ಬಂದದ್ದರಿಂದ, ತಾನು ಕುಳಿ ತದ್ದು, ಭೂಪ್ರದೇಶವೆಂತಲೂ, ಸುಂದರ ತರುಣಿಯು ಮನುಷ್ಯಳೇ ಎಂತಲೂ ಆತನು ತಿಳಕೊಂಡನು; ಮತ್ತು ಚಿದಾನಂದರ ಆಶ್ರಮದಲ್ಲಿರುವ ಅನೇಕಜನ ಶಿಷ್ಯರಲ್ಲ ತಾನೊಬ್ಬನಿರುತ್ತೇನೆಂಬ ಎಚ್ಚರವೂ ಆತನಿಗುಂಟಾಯಿತು; ಆದರೆ ಈ ಸುಂದರ ತರುಣಿಯು ಚಿಗರೆಯ ಬೆನ್ನಹಿಂದೆ ಯಾಕೆ ಬಂದಿರಬಹುದೆಂಬ ದರ ಕಾರಣವು ಆತನಿಗೆ ಗೊತ್ತಾಗಲಿಲ್ಲ. ತನ್ನ ಮಾತು ಕೇಳುವಷ್ಟು ಸನಿ ಯಕ್ಕೆ ಆ ತರುಣಿಯು ಬರಲು, ಜಿತೇಂದ್ರನು ಆಕೆಯನ್ನು ಕುರಿತು— ತರುಣೀ, ಇದೇನು? ಇಷ್ಟು ಧಾವಿಸಿ ಚಿಗರೆಯ ಬೆನ್ನುಹತ್ತಿ ಬರುವದೇಕೆ? ಈ ಜಡಪ್ರಾಣಿಯು ಅಂಥ ತಪ್ಪು ಏನು ಮಾಡಿದೆ? ಇದರ ದೊಡ್ಡ ಕಣ್ಣು ಗಳನ್ನು ನೋಡಿ ಹೊಟ್ಟೇಕಿಚ್ಚುಪಟ್ಟು ಸಿಟ್ಟಿನಿಂದ ನೀನು ಇದರ ಬೆನ್ನುಹತ್ತಿ ಬಂದೆಯೆಂದು ಅನ್ನಬೇಕಾದರೆ, ನಿನ್ನ ಕಣ್ಣುಗಳು ಈ ಚಿಗರೆಯ ಕಣ್ಣುಗ ಳಿಗಿಂತ ದೊಡ್ಡವಿರುತ್ತವಲ್ಲ!

ಈಮೇರೆಗೆ ಜಿತೇಂದ್ರನು ಆಡಿದ ಮಾತುಗಳನ್ನು ಕೇಳಿ ತರುಣಿಯು ಎಚ್ಚತ್ತು, ಆತನ ಮನೋಹರಾಕಾರವನ್ನು ಎವೆಯಿಕ್ಕದೆ ನೋಡುತ್ತ, ಮೊದಲು ಕುದುರೆಯಿಂದಿಳಿದು ತನ್ನ ಚಿಗರೆಯ ಮೈಮೇಲೆ ಕೈಯಾಡಿಸಿ ಅದನ್ನು ರಮಿಸಿದಳು. ಆಕೆಯು ಹಿಂದಿರುಗಿ ಮತ್ತೊಮ್ಮೆ ಜಿತೇಂದ್ರನನ್ನು

ನೋಡಲು, ಆತನು—ತರುಣಿ, ನನ್ನ ಮಾತಿಗೆ ಉತ್ತರಕೊಡದಿರುವದೇಕೆ? ಈ ಅಪರಿಚಿತವಾದ ಅರಣ್ಯದಲ್ಲಿ ಅಶ್ವಾರೂಢಳಾಗಿ ಚಿಗರೆಯ ಬೆನ್ನಹತ್ತಿ ನೀನು ಬಂದಿರುವದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗಿದೆ. ನೀನು ರಾಜಪುತ್ರಿಯೆಂಬದನ್ನು ನಾನು ಕಂಡು ಹಿಡಿದಿದ್ದೇನೆ. ಕೌತುಕದಿಂದ ಪ್ರೇರಿತನಾದ ನನ್ನಿಂದ ಅವಿನಯದ ಅಪರಾಧವು ಘಟಿಸುತ್ತಿದ್ದರೂ, ನೀನು ಅದನ್ನು ಎಣಿಸದೆ, ನನ್ನ ಮಾತಿಗೆ ಉತ್ತರಕೊಟ್ಟು ನನ್ನ ಕೌತುಕವನ್ನು ಪೂರ್ಣಮಾಡಲೇಬೇಕು, ಅನ್ನಲು, ತರುಣಿಯು ಜಿತೇಂದ್ರನನ್ನು ಕುರಿತು—ವೀರಪುರುಷನೆ, ನನ್ನ ವೃತ್ತಾಂತಶ್ರವಣದಿಂದ ನಿನಗೆ ಆಗುವ ಪ್ರಯೋಜನವೇನು? ನನ್ನ ಈ ಚಿಗರೆಯನ್ನು, ಅದೇ ಆ ಸಿಂಹವು ಬೆನ್ನಟ್ಟಿದ್ದರಿಂದ ಇದನ್ನು ರಕ್ಷಿಸುವದಕ್ಕೋಸ್ಕರ ನಾನು ಇದರ ಬೆನ್ನಟ್ಟಿಬಂದೆನು. ನೀನು ಇದಕ್ಕೆ ಆಶ್ರಯಕೊಟ್ಟು ಸಮಾಧಾನಗೊಳಿಸಿದ್ದಕ್ಕಾಗಿ ನಾನು ಕೃತಜ್ಞಳಾಗಿದ್ದೇನೆ, ಎಂದು ನುಡಿದು ಜಿತೇಂದ್ರನನ್ನು ಆದರದಿಂದ ನೋಡಹತ್ತಿದಳು. ಅಷ್ಟರಲ್ಲ ಆ ಸಿಂಹವು ಚಿಗರೆಯ ಸನಿಯಕ್ಕೆ ಬರತೊಡಗಿತು. ಆಗ ಜಿತೇಂದ್ರನು—ತರುಣೀ, ಸಿಂಹದ ದವಡೆಯೊಳಗಿಂದ ಈ ಚಿಗರೆಯನ್ನು ನೀನು ಬಿಡಿಸುವೆಯಾ, ಎಂದು ನುಡಿದು, ಕೂಡಲೆ ಬಳಿಯಲ್ಲಿ ಬಿದ್ದಿದ್ದ ತನ್ನ ಧನುಸ್ಸನ್ನು ತಕ್ಕೊಂಡು ಹೆದೆಏರಿಸಿ, ಅದಕ್ಕೆ ಒಂದು ತೀಕ್ಷ್ಣವಾದ ಬಾಣವನ್ನು ಹೂಡಿ, ಸಿಂಹಕ್ಕೆ ಗುರಿಯಿಟ್ಟು ಹೆದೆಯನ್ನು ಕಿವಿಯವರೆಗೆ ಜಗ್ಗಿದನು. ಇನ್ನು ಆತನು ಸಿಂಹದ ಮೇಲೆ ಬಾಣಬಿಡತಕ್ಕವನು, ಅಷ್ಟರಲ್ಲಿ ಆತನು ಮೆಟ್ಟಿಬಿದ್ದು ಬಾಣವನ್ನು ಹಿಂದಕ್ಕೆ ತಕ್ಕೊಂಡು ಧನುಸ್ಸನ್ನು ದೂರ ಚಲ್ಲಕೊಟ್ಟನು. ಜಿತೇಂದ್ರನ ಈ ಚಮತ್ಕಾರದ ನಡತೆಯನ್ನು ನೋಡಿ ತರುಣಿಯು ಆಶ್ಚರ್ಯಪಟ್ಟಳು. ಈಮೊದಲು ತರುಣಿಯು ಜಿತೇಂದ್ರನಕಸುವಿನ ಮೈಕಟ್ಟನ್ನೂ, ಗಂಭೀರಮುಖಮುದ್ರೆಯನ್ನೂ, ದಿವ್ಯತೇಜಸ್ಸನ್ನೂ, ಆತನು ಧನುಸ್ಸು ಹಿಡಿಯುವ ಬಗೆಯನ್ನೂ, ಆತನ ಬಾಣವೇರಿಸುವ ಕ್ರಮವನ್ನೂ, ಹೆದೆಜಗ್ಗುವ ರೀತಿಯನ್ನೂ ನೋಡಿ, ಇವನು ಯಾವನೋ ಮುಷ್ಯಾಶ್ರಮಸ್ಥ ಕ್ಷತ್ರಿಯ ವೀರಪುರುಷನಿರಬಹುದೆಂದು ತಿಳಿದು ಆತನ ವಿಷಯವಾಗಿ ಆದರಭಾವವನ್ನು ತಾಳಿದ್ದಳು; ಆದರೆ ಸಿಂಹವು ಸನಿಯಕ್ಕೆ

ಬಂದಕೂಡಲೆ ಧನುಸ್ಸುಚಲ್ಲಿಕೊಟ್ಟದ್ದನ್ನು ನೋಡಿ, ಆಕೆಯ ಮನಸ್ಸಿನಲ್ಲಿ ತರುಣನ ವಿಷಯವಾಗಿ ತಿರಸ್ಕಾರವು ಉತ್ಪನ್ನವಾಯಿತು. ಆಕೆಯು ತನ್ನ ಧನುಸ್ಸನ್ನು ತಕ್ಕೊಂಡು ಹೆದೆಯೇರಿಸಿ ಬಾಣಹೂಡಿ ಗುರಿನೋಡಿ ಕೂಡಲೆ ಸಿಂಹಕ್ಕೆ ಎಸೆಯಹೋದಳು. ಆಗ ಜಿತೇಂದ್ರನು ಹೆದೆಬಾಣಗಳೊಡನೆ ಆಕೆಯ ಕೋಮಲವಾದ ಹಸ್ತವನ್ನು ಹಿಡಿದು ಗಾಂಭೀರ್ಯದಿಂದ—ತರುಣಿಯೇ, ನಿಲ್ಲುನಿಲ್ಲು, ನಿನ್ನ ಸ್ವಾಭಾವಿಕವಾದ ಮಾರ್ದವಕ್ಕೆ ಲಾಂಛನವೆನಿಸುವ ಈ ಕ್ರೂರಕೃತ್ಯವನ್ನು ಮಾಡಬೇಡ, ಅನ್ನಲು ತರುಣಿಯು—

ತರುಣಿ—ವೀರರೆನಿಸುವ ನಿಮ್ಮಂಥವರೇ ಧನುಸ್ಸನ್ನು ಚಲ್ಲಿಕೊಟ್ಟ ಬಳಿಕ, ನಿಮ್ಮ ರಕ್ಷಣವನ್ನು ಅನ್ಯರು ಮಾಡಬೇಕಾಗಲು, ಆಗ ನಾವು ಕ್ಷತ್ರಿಯ ಕನ್ಯೆಯರು, ನಮ್ಮ ಮಾರ್ದವವನ್ನು ಬಿಟ್ಟುಬಿಡುವೆವು.

ಜಿತೇಂದ್ರ—ಕ್ಷತ್ರಿಯ ಕನ್ಯೆಯೇ, ಎಲೈ ಪರಾಕ್ರಮಿಯಾದ ಕನ್ಯೆಯೇ, ನಾನು ಧನುಸ್ಸು ಚಲ್ಲಿಕೊಟ್ಟದ್ದರ ನಿಜವಾದ ಕಾರಣವನ್ನು ನೀನು ಅರಿಯೇ ಅರಿಯೆ. ನನ್ನ ಸಂರಕ್ಷಣದ ಭಾರವನ್ನು ಮಂದಿಯಮೇಲೆ, ವಿಶೇಷವಾಗಿ ನಿನ್ನಂಥ ಕೋಮಲಾಂಗಿಯಮೇಲೆ ಹಾಕುವಷ್ಟು ಹೇಡಿಯೂ, ನಿರ್ಬಲನೂ ನಾನಿರುವದಿಲ್ಲ

ತರುಣಿ—ಹಾಗಾದರೆ ಧನುಸ್ಸನ್ನು ಯಾಕೆ ಚಲ್ಲಿಕೊಡಬೇಕು?

ಜಿತೇಂದ್ರ—ತರುಣಿಯೇ, ನಿನ್ನ ಈ ಪ್ರಶ್ನದ ಉತ್ತರವನ್ನು ಆ ಸಿಂಹವೇ ಕೊಡುವದು.

ಹೀಗೆಂದು ನುಡಿದು ಜಿತೇಂದ್ರನು ತನ್ನ ಬಳಿಗೆ ಬರುತ್ತಿರುವ ಸಿಂಹವನ್ನು ರಮಿಸುತ್ತ ಕರೆದು, ಅದರ ಕುತ್ತಿಗೆಯಮೇಲಿನ ಕೂದಲುಗಳ ತೊಡಕು ಬಿಡಿಸುತ್ತ ಅದನ್ನು ತನ್ನ ಹತ್ತರ ಕರೆದುಕೊಂಡನು. ಇದನ್ನು ನೋಡಿ ತರುಣಿಯು ಬೆರಗಾಗಿ ಕಲ್ಲಿನಂತೆ ನಿಂತುಬಿಟ್ಟಳು. ಆಗಿನ ಪ್ರಸಂಗವು ಪ್ರೇಕ್ಷಣೀಯವಾಗಿತ್ತು. ಅಹಹ! ತರುಣನಾದ ಜಿತೇಂದ್ರನು ಎಡಗೈಯಿಂದ ಸಿಂಹದ ಮೈಮೇಲೆ ಕೈಯಾಡಿಸುತ್ತ, ಬಲಗೈಯಿಂದ ತರುಣಿಯ ಕೋಮಲಕರವನ್ನು ಹಿಡಿದು ಆಕೆಯ ಸುಂದರಮುಖವನ್ನು ಮುಗುಳು ನಗೆಯಿಂದ ನೋಡುತ್ತಲಿದ್ದಾನೆ; ತರುಣಿಯು ತನ್ನ ಹಸ್ತವನ್ನು ತರುಣನ

ಹಸ್ತದಿಂದ ಕೊಸರಿಕೊಳ್ಳಲಿಚ್ಛಿಸದೆ, ತರುಣನ ವಿಚಿತ್ರವಾದ ಪ್ರತಾಪಕ್ಕೆ ಬೆರಗಾಗಿ ಅತ್ಯಂತ ಲೀನತೆಯಿಂದ ಆತನ ನಗೆಮೊಗವನ್ನು ಎವೆಯಿಕ್ಕದೆ ನೋಡುತ್ತ, ವಿಚಿತ್ರವಾದ ಮನೋವಿಕಾರಕ್ಕೆ ಒಳಗಾಗಿದ್ದಾಳೆ; ಆಗ ಅವರಿಬ್ಬರಿಗೂ ಸ್ವರ್ಗಸುಖವು ಪ್ರಾಪ್ತವಾಗಿ ಆ ಸುಖಕ್ಕೆ ಎಲ್ಲಿ ವಿಘ್ನ ಒದಗುವದೋ ಎಂದುಅವರಿಬ್ಬರು ಭಯಗ್ರಸ್ತರಾಗಿದ್ದಾರೆ, ಅವರಿಬ್ಬರಹಸ್ತಗಳುಬೆವತುಕಂಪಿಸ ತೊಡಗಿವೆ; ಅಷ್ಟರಲ್ಲಿ ದೂರ ಕುದುರೆಗಳ ಖುರಪುಟಗಳ ಧ್ವನಿಯು ಕೇಳಿಸ ಹತ್ತಿತು. ಆಗ ತರುಣಿಯು ಜಿತೇಂದ್ರನ ಕೈಯಿಂದ ತನ್ನ ಕೈಯನ್ನು ಮೆಲ್ಲಗೆ ಕೊಸರಿಕೊಂಡು ಮೃದುಸ್ಮಿತೆಯಾಗಿ—

ತರುಣಿ—ನಾನು ಮಹಾಪರಾಧಿಯು, ಅವಿಚಾರದಿಂದ ತಮಗೆ ಇಲ್ಲದ ದೋಷವನ್ನು ಆರೋಪಿಸಿದೆನು. ನನ್ನನ್ನು ಕ್ಷಮಿಸಬೇಕು.

ಜಿತೇಂದ್ರ—ಛೆ! ಅಷ್ಟೊಂದು ಅಸಮಾಧಾನಪಡುವ ಕಾರಣವಿಲ್ಲ. ಕ್ಷಮೆಯ ಮಾತೇಕೆ? ನೋಡು, ವನರಾಜನು ನಿನ್ನ ಹರಿಣಿಯಸಂಗಡ ಹೇಗೆ ಚಿನ್ನಾಟವಾಡುತ್ತಲಿದ್ದಾನೆ! ಈತನು ಚಿದಾನಂದರ ಆಶ್ರಮದಲ್ಲಿ ಬೆಳೆದವನು. ಇಂಥ ದುರ್ಬಲ ಪ್ರಾಣಿಗಳನ್ನು ಈತನು ಎಂದೂ ಹಿಂಸಿಸನು. ಯಾರಾದರೂ ಈತನ ಗೊಡವೆಗೆ ಹೋದರೆ ಮಾತ್ರ ಇವನು ಪ್ರಳಯಕಾಲದ ಅಂತಕನೇ ಸರಿ. ಉಳಿದವರ ಸಂಗಡ ಈತನು ಪ್ರೇಮದಿಂದ ವರ್ತಿಸುವನು. ಇಂಥವನ ಮೇಲೆ ನಾನು ಈದಿನ ಪ್ರಮಾದದಿಂದ ಬಾಣವನ್ನು ಪ್ರಯೋಗಿಸುತ್ತಿದ್ದೆನು!

ತರುಣಿ—ಹಿಂಸ್ರಪಶುಗಳನ್ನು ಮಿತ್ರರಾಗಿ ಮಾಡಿಕೊಳ್ಳುವ ತಮ್ಮ ಪ್ರತಾಪವನ್ನು ನಾನೇನು ವರ್ಣಿಸಲಿ? ಹೇಳಿಕೇಳಿ ನಾನು ಅಬಲೆಯು! ಅಗೋ, ನನ್ನ ಅಂಗರಕ್ಷಕರು ಸನಿಯಕ್ಕೆ ಬಂದರು. ಗಂಭೀರವಾದ ಈ ಸುಂದರ ಪ್ರಸಂಗದ ಸ್ಮರಣವೆಂದು ನನ್ನ ಬೆರಳೊಳಗಿನ ಈ ರತ್ನದ ಉಂಗುರವನ್ನು ನಿಮ್ಮ ಬೆರಳಿನಲ್ಲಿಡುತ್ತೇನೆ. ಈ ಅಬಲೆಯ ಗುರುತು ಮರೆಯಬಾರದು.

ಈಮೇರೆಗೆ ನುಡಿದು ತರುಣಿಯು ತನ್ನ ಬೆರಳೊಳಗಿನ ರತ್ನದ ಉಂಗುರವನ್ನು ಜಿತೇಂದ್ರನ ಬೆರಳಿಗಿಟ್ಟಳು. ಆಗ ಜಿತೇಂದ್ರನು—ತರು

ಣಿಯೇ, ನಿನ್ನ ಈ ಪರಮಾದರಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ಉಂಗುರವಿಲ್ಲದ್ದರಿಂದ ನಿನ್ನ ಈ ಸುಂದರವಾದ ಬೆರಳು ಭಣಗುಟ್ಟುತ್ತಲಿದೆ; ಆದ್ದರಿಂದ ನನ್ನ ಬೆರಳಲ್ಲಿರುವ ಈ ಪಚ್ಚದ ಉಂಗುರವನ್ನು ನಿನ್ನ ಬೆರಳಿಗಿಡುತ್ತೇನೆ. ಎಂದು ತನ್ನ ಉಂಗುರವನ್ನು ತರುಣಿಯ ಬೆರಳಿಗಿಟ್ಟನು. ಅವರಿಬ್ಬರು ತರುಣರು ಪ್ರೇಮದಿಂದ ಒಬ್ಬರನ್ನೊಬ್ಬರು ನೋಡುತ್ತ ಸ್ತಬ್ಧವಾಗಿ ನಿಂತುಕೊಂಡರು. ಸಿಂಹವು ಚಿಗರೆಯ ಸಂಗಡ ಆಡುತ್ತಲಿತ್ತು. ಭಗವಾನ್ ಸೂರ್ಯನಾರಾಯಣನು ಪಶ್ಚಿಮದಿಗ್ವಧುವನ್ನು ಪ್ರೇಮದಿಂದ ಆಲಿಂಗಿಸುವ ಹವಣಿಕೆಯಲ್ಲಿದ್ದನು. ಅಷ್ಟರಲ್ಲಿ ತರುಣಿಯ ಅಂಗರಕ್ಷರು ತಮ್ಮ ಕುದುರೆಗಳನ್ನು ಓಡಿಸುತ್ತ ಅಲ್ಲಿಗೆಬಂದು ಕುದುರೆಗಳನ್ನಿಳಿದು ತರುಣಿಯನ್ನು ವಂದಿಸಿದರು. ಅಷ್ಟರಲ್ಲಿ ಒಬ್ಬನು ಕೈಜೋಡಿಸಿ—ರಾಜಪುತ್ರಿ, ಇಂದಿರಾದೇವಿ, ಹೀಗೆ ಚಿಗರೆಯ ಬೆನ್ನುಹತ್ತಿ ಇಷ್ಟು ದೂರ ಬರುವರೇ! ಇಗೋ, ಸುಭದ್ರಾಂಗಿಮಾತೆಯವರು ಈಗ ಈ ರಾವುತನ ಮುಂದೆ ಹೇಳಿಕಳಿಸಿದ್ದಾರೆ. ನಿಮ್ಮ ಅಣ್ಣಂದಿರಾದ ಅಶೋಕಭೂಪತಿಗಳವರು ಕಲಿಂಗದೇಶವನ್ನು ಗೆದ್ದು ಅದ್ವಿತೀಯವಾದ ಚಕ್ರವರ್ತಿಯ ಪದವಿಯನ್ನು ಹೊಂದಿದರಂತೆ; ಶೂರ ಮೃಗೇಂದ್ರನು ಯುದ್ಧದಲ್ಲಿ ಮರಣಹೊಂದಿದನಂತೆ; ಸುಭದ್ರಾಂಗಿಮಾತೆಯವರು ಚಕ್ರವರ್ತಿಯೆನಿಸಿದ ಮಗನ ಮುಖವನ್ನು ಯಾವಾಗ ನೋಡೇವೆಂದು ಆತುರಪಡಹತ್ತಿದ್ದಾರಂತೆ; ಜ್ಞಾನಿಗಳ ಭವಿಷ್ಯದಂತೆ ಮಗನು ಚಕ್ರವರ್ತಿಯಾದದ್ದಕ್ಕಾಗಿ ಅವರು ಮಂಗಲೋತ್ಸವಮಾಡುವವರಿದ್ದಾರಂತೆ; ಆದ್ದರಿಂದ ಅವರು ಹಿಮಾಲಯದೊಳಗಿನ ಬುದ್ಧದೇವನ ಪಾದುಕೆಗಳ ದರ್ಶನಕ್ಕೆ ಹೋಗುವದನ್ನು ಸದ್ಯಕ್ಕೆ ರಹಿತಮಾಡಿ, ನಾಳೆ ಬೆಳಗಾಗುತ್ತಲೇ ಇಲ್ಲಿಂದ ಹಿಂದಿರುಗಿ ಪಾಟಲಿಪುತ್ರಕ್ಕೆ ಹೊರಡುವರಂತೆ; ದೇವಿಯವರು ನಿಮ್ಮನ್ನು ಬೇಗನೆ ಕರತರಲು ಆಜ್ಞಾಪಿಸಿರುವರಂತೆ; ಆದ್ದರಿಂದ ರಾಜಪುತ್ರಿಯವರು ಬೇಗನೆ ಕುದುರೆಯನ್ನು ಹತ್ತುವ ಕೃಪೆಮಾಡಬೇಕೆಂದು ಸೇವಕನು ಪ್ರಾರ್ಥಿಸುವೆನು.

ಅಂಗರಕ್ಷಕನ ಈ ಮಾತುಗಳನ್ನು ಕೇಳಿ ಜಿತೇಂದ್ರನ ಆನಂದವು ಒಮ್ಮೆಲೆ ನಷ್ಟವಾಗಿ, ಆತನ ಮುಖಚರ್ಯವು ಸರ್ರನೆ ಇಳಿಯಿತು. ಪ್ರತ್ಯಕ್ಷ

ಅಶೋಕನ ತಂಗಿಯು ತನ್ನನ್ನು ಪ್ರೀತಿಸುವ ಯೋಗವನ್ನು ನೆನಿಸಿ ಆತನು ಆಶ್ಚರ್ಯಗೊಳ್ಳುವವರೊಳಗೆ, ಕಲಿಂಗಾಧಿಪತಿಯಾದ ತನ್ನ ತಂದೆಯ ಸೋಲಿನ ಸುದ್ದಿಯೂ, ಮರಣದ ಸುದ್ದಿಯೂ ಕಿವಿಗೆಬಿದ್ದು, ಆತನನ್ನು ವ್ಯಥೆಗೊಳಿಸಹತ್ತಿದವು. ಇತ್ತ ಅಂಗರಕ್ಷಕರು ಚಿಗರೆಯ ಸಂಗಡ ಸಿಂಹವು ಆಡುತ್ತಿರುವದನ್ನೂ, ಜಿತೇಂದ್ರನ ಅಲೌಕಿಕ ತೇಜಸ್ಸನ್ನೂ ನೋಡಿ ಬೆರಗಾಗಿ ಸುಮ್ಮನೆ ನಿಂತಿರಲು, ಜಿತೇಂದ್ರನು ತರುಣಿಯನ್ನು ಕುರಿತು— "ಅಂತು, ಇಂದಿರಾದೇವಿಯೇ, ನೀನು ಅಶೋಕರಾಜನ ತಂಗಿಯು!" ಎಂದು ಕೇಳಲು, ಇಂದಿರೆಯು ತಲೆಯಲ್ಲಾಡಿಸಿ ಒಪ್ಪಿಗೆಯನ್ನಿತ್ತಳು. ಜಿತೇಂದ್ರನ ಮುಖಚರ್ಯವು ಒಮ್ಮೆಲೆ ಇಳಿದದ್ದನ್ನು ನೋಡಿ, ಈ ತರುಣನು ಮೃಗೇಂದ್ರರಾಜನ ಸಂಬಂಧಿಕನಿರಬಹುದೆಂದು ಇಂದಿರೆಯು ತರ್ಕಿಸಿ, ಅತ್ಯಂತ ವಿನಯದಿಂದ ಆತನನ್ನು ಕುರಿತು—

ಇಂದಿರೆ—ವೀರಶಿರೋಮಣಿಯೇ, ನಿನ್ನ ಹೆಸರೇನು?

ಜಿತೇಂದ್ರ—ಇಂದಿರಾದೇವಿ, ನನ್ನ ಹೆಸರನ್ನು ಕೇಳಿ ನಿನಗೇನು ಲಾಭವಾಗುವಹಾಗಿಲ್ಲ. ತಿರುಗಿ ಕೇಳಿದರೆ ಅದರಿಂದ ನಿನಗೆ ದುಃಖವುಮಾತ್ರ ಆದೀತು. ಇರಲಿ, ಈಶ್ವರೇಚ್ಛೆಯಿಂದ ನನ್ನ ಹೆಸರನ್ನು ಕೇಳುವಯೋಗವು ನಿನಗೆ ಎಂದಾದರೂ ಬಂದರೆ, ನಾನು ಅದನ್ನು ಸಂತೋಷದಿಂದ ಹೇಳುವೆನು. ನನ್ನ ಗುರುತನ್ನು ಮರೆಯಬೇಡ. ಇಲ್ಲಿಯೇ ಸಮೀಪದಲ್ಲಿರುವ ಚಿದಾನಂದಸ್ವಾಮಿಗಳ ಆಶ್ರಮದಲ್ಲಿರುವ ನಾನೊಬ್ಬ ಬಡವಿದ್ಯಾರ್ಥಿಯಿದ್ದೇನೆ.

ಈ ಮೇರೆಗೆ ನುಡಿಯುವಾಗ ಜಿತೇಂದ್ರನ ಕುತ್ತಿಗೆಯ ಶಿರಗಳು ಬಿಗಿದು, ಕಣ್ಣೀರುಗಳು ಉದುರಿದವು. ಆ ನೀರುಗಳು ಕೇವಲ ದುಃಖದಿಂದ ಸುರಿದವೆಂದು ಹೇಳುವಹಾಗಿದ್ದಿಲ್ಲ. ಅಶೋಕನಂಥ ಬಲಾಢ್ಯರಾಜನ ತಂಗಿಯ ಚಿತ್ತಾಕರ್ಷಣವು ಅಕಸ್ಮಾತ್ತಾಗಿ ಆದದ್ದರಿಂದ ಆತನಿಗೆ ಆನಂದವೂ ಆಗಿತ್ತು; ತನ್ನ ಭವಿಷ್ಯಕಾಲದ ವೈಭವ ಮಂದಿರವು ಒಮ್ಮಿಂದೊಮ್ಮೆ ನೆಲಸಮವಾದದ್ದರಿಂದ ಆತನಿಗೆ ಪರಮಾವಧಿದುಃಖವೂ ಆಗಿತ್ತು; ಆದರೆ ಆ ಸತ್ವಶಾಲಿಯು ಕ್ಷುದ್ರ ಮನಸ್ಸಿನವರಂತೆ ಸ್ತ್ರೀವ್ಯಾಮೋಹಕ್ಕೆ ಒಳಗಾಗುವವನೂ, ಹೇಡಿಗಳಂತೆ ರಾಜ್ಯಭ್ರಷ್ಟತೆಗಾಗಿ

ಕಣ್ಣೀರು ಸುರಿಸುತ್ತ ಕುಳಿತುಕೊಳ್ಳುವವನೂ ಇದ್ದಿಲ್ಲ. ತನ್ನ ಗುರುವಾದ ಚಿದಾನಂದ ಸ್ವಾಮಿಗಳ ಭವಿಷ್ಯದಲ್ಲಿ ಆತನ ವಿಶ್ವಾಸವು ಪೂರ್ಣವಾಗಿ ಇತ್ತು; "ಅಶೋಕನು ಸದ್ಯಕ್ಕೆ ಕಲಿಂಗದೇಶವನ್ನು ಗೆದ್ದರೂ, ಕಡೆಗೆ ಅಶೋಕ-ಮೃಗೇಂದ್ರರಲ್ಲಿ ಅಕೃತ್ರಿಮಸಖ್ಯವು ಉಂಟಾಗಿ ಹಿಂದೂಧರ್ಮದ ಪುನರುಜ್ಜೀವನಕ್ಕೆ ಆಸ್ಪದವಾಗುವದೆ"ಂದು ತನ್ನ ಗುರುವು ಹೇಳಿದ ಭವಿಷ್ಯವನ್ನು ಸ್ಮರಿಸಿ, ಆತನು ತಂದೆಯು ಮರಣವಾರ್ತೆಯನ್ನು ಅವಿಶ್ವಸನೀಯವೆಂದು ಭಾವಿಸಿದನು. ಕಳೆದುಹೋಗಿದ್ದ ಕಲಿಂಗದ ಸಾಮ್ರಾಜ್ಯವನ್ನು ತಿರುಗಿ ಸಂಪಾದಿಸುವದು ಆ ತರುಣವೀರನಿಗೆ ಎಷ್ಟು ಮಾತ್ರವೂ ಅಸಂಭವವಾಗಿ ತೋರಲಿಲ್ಲ; ತನ್ನ ತಾಯಿಯಾದ ಇಂದುಮತಿಯ, ಹಾಗು ತಂಗಿಯಾದ ಪ್ರಣಯಿನಿಯು, ಆದರಂತೆ ಬೇರೆ ಆಪ್ತೇಷ್ಟರ ಗತಿಯೇನಾಯಿತೋ, ಎಂದು ಆತನು ಸ್ವಲ್ಪ ಚಿಂತಿಸಿದನು. ಚಿದಾನಂದರಂಥ ಸತ್ಪುರುಷರ ಸಮಾಗಮದಲ್ಲಿದ್ದ ಜಿತೇಂದ್ರನ ಮನಸ್ಸಿನಮೇಲೆ, ಚಿಂತೆಯ ಪರಿಣಾಮವು ಬಹಳಹೊತ್ತು ಆಗುತ್ತಿದ್ದಿಲ್ಲ. ಮನುಷ್ಯನನ್ನು ಕರ್ತವ್ಯಭ್ರಷ್ಟನನ್ನಾಗಮಾಡುವ ಕೆಟ್ಟ ಚಿಂತೆಗೆ ಆಧೀನವಾಗುವದು ಹಾನಿಕರವೆಂಬ ತತ್ವವನ್ನು, ಆತನು ಸದ್ಗುರುವಿನ ಬಳಿಯಲ್ಲಿ ಚನ್ನಾಗಿ ಅಭ್ಯಾಸಿಸಿದ್ದನು, "ಏನು ಮಾಡಲಿ, ಹೇಗೆಮಾಡಲಿ" ಎಂಬ ದಶಾಕ್ಷರೀ ಮಂತ್ರವನ್ನು ಜಪಿಸುತ್ತ ಉಸುರುಹಾಕುತ್ತ ಕುಳಿತುಕೊಳ್ಳುವ ನಿರರ್ಥಕ ಜನರಲ್ಲಿ ಜಿತೇಂದ್ರನು ಎಣಿಸತಕ್ಕವನಿದ್ದಿಲ್ಲ. ಆತನು ಮಹಾಧೀರನು, ಉದ್ಯೋಗತತ್ಪರನು. ಈ ಪ್ರಸಂಗದಲ್ಲಿ ತಾನು ಆಶ್ರಮದಲ್ಲಿ ಸ್ವಸ್ಥವಾಗಿ ಕುಳಿತುಕೊಳ್ಳುವದಕ್ಕಿಂತ, ಪಾಟಲಿಪುತ್ರ ರಾಜಧಾನಿಗೆ, ಇಲ್ಲವೆ ತನ್ನ ರಾಜಧಾನಿಯಾದ ಇಂದ್ರಪುರಕ್ಕೆ ಹೋಗಿ ಏನಾದರೂ ಯತ್ನಮಾಡಬೇಕೆಂದು ಆತನು ನಿಶ್ಚಯಿಸಿದನು. ತಾನು ಹೀಗೆ ಬ್ರಹ್ಮಚಾರಿಯ ವೇಷದಿಂದ ಹೋಗುವದು ಘಾತಕವಾದ್ದರಿಂದ, ಬುದ್ಧಭಿಕ್ಷುವಿನ ವೇಷವನ್ನು ಹಾಕಿಕೊಳ್ಳಬೇಕೆಂದು ಯೋಚಿಸಿ, ಆತನು ಆಶ್ರಮಕ್ಕೆ ಹೋದನು. ಮರುದಿನ ಕ್ಷೌರಮಾಡಿಸಿ ಕೌಪೀನವನ್ನೂ, ಹಳದಿಯ ಬಣ್ಣದ ಕಪನಿಯನ್ನೂ ಹಾಕಿಕೊಂಡು, ಕೈಯ್ಯಲ್ಲಿ ಕಮಂಡಲು

ವನ್ನು ಹಿಡಕೊಂಡು, ಆವುಗೆಗಳ "ಖಟಖಟ್ಟ್"ಎಂಬ ಶಬ್ದವು ಉತ್ಪನ್ನ ವಾಗುತ್ತಿರಲು, "ನಮೋಬುದ್ಧಾಯ" ಎಂದು ನುಡಿಯುತ್ತ ಹರಿದ್ವಾರದ ಆಶ್ರಮದಿಂದ ಹೊರಟು, ಮೊದಲು ಇಂದ್ರಪುರದ ಕಡೆಗೆ ಸಾಗಿದನು. ಆ ಕಾಲದಲ್ಲಿ ಬೌದ್ಧ ಧರ್ಮವು ಪ್ರಬಲವಾದದ್ದರಿಂದಲೂ, ಬೌದ್ಧ ನೃಪತಿಯಾದ ಅಶೋಕನು ತನ್ನ ಪ್ರತಾಪದಿಂದ ಸರ್ವತ್ರ ವಿಜಯವನ್ನು ಸಂಪಾದಿಸಿದ್ದರಿಂದಲೂ ಬೌದ್ಧಭಿಕ್ಷುಗಳಿಗೆ ಬಹುಮಾನವಿತ್ತು. ಅವರಿಗೆ ಆಗ ಯಾವ ಬಗೆಯ ಉಪದ್ರವವೂ ತಟ್ಟುತ್ತಿದ್ದಿಲ್ಲವೆಂದು ಹೇಳಬಹುದು. ಅದರಿಂದಲೇ ಕಾರ್ಯಸಾಧಕನಾದ ಜಿತೇಂದ್ರನು ಬೌದ್ಧಭಿಕ್ಷುವಿನ ವೇಷವನ್ನು ಹಾಕಿಕೊಂಡಿದ್ದನು.

ಆತನು ಕೆಲವು ದಿನ ಮಾರ್ಗವನ್ನು ಕ್ರಮಿಸುತ್ತ ಮಥುರಾಪಟ್ಟಣದ ಸಮೀಪಕ್ಕೆ ಬರಲು, ಅಲ್ಲಿಯ ಬುದ್ಧನ ದೇವಾಲಯದ ಉತ್ತುಂಗ ಶಿಖರಗಳು ಕಾಣಹತ್ತಿದವು. ಆ ಶಿಖರಗಳ ಕೆತ್ತಿಗೆಯ ಕೆಲಸವು ಪ್ರೇಕ್ಷಣೀಯವಾಗಿತ್ತು. ದೇವಾಲಯಗಳಲ್ಲಿ ಬಾರಿಸುತ್ತಿದ್ದ ಘಂಟೆಗಳ ನಾದದಿಂದ ಹಾದಿಕಾರರ ಕಿವಿಗಳು ಗಡಚಿಕ್ಕುತ್ತಿದ್ದವು. ಅವುಗಳ ನಾದದಲ್ಲಿ ಪಟ್ಟಣದ ಜನರ ಗದ್ದಲವು ಲೇಶವಾದರೂ ಕೇಳುತ್ತಿದ್ದಿಲ್ಲ. ಧನಿಕರ ಎತ್ತರವಾದ ಮನೆಗಳೂ, ದೊಡ್ಡ ದೊಡ್ಡ ಸರದಾರರ ಭವ್ಯವಾದ ಪ್ರಾಸಾದಗಳೂ ಪಟ್ಟಣವನ್ನೆಲ್ಲ ತುಂಬಿಕೊಂಡಿದ್ದವು. ಜಿತೇಂದ್ರನು ಇಂಥ ಭವ್ಯವಾದ ಪಟ್ಟಣವನ್ನು ಪ್ರವೇಶಿಸುತ್ತಿರಲು, ಒಬ್ಬ ರಜಪೂತವೀರನು ಆತನಿಗೆ ಎದುರಾದನು. ಅವರಿಬ್ಬರ ದೃಷ್ಟಿಗಳು ಒಂದಾದ ಕೂಡಲೆ ಆ ವೀರನು ಜಿತೇಂದ್ರನನ್ನು ವಿನಯದಿಂದ ನಮಿಸಿದನು. ಜಿತೇಂದ್ರನಾದರೂ ಕೂಡಲೆ ಆ ವೀರನ ಗುರುತು ಹಿಡಿದನು. ಆಗ ಅವರಿಬ್ಬರು ಮಾತಾಡದೆ ಒಬ್ಬರನ್ನೊಬ್ಬರು ನೋಡುತ್ತ ಸ್ವಲ್ಪಹೊತ್ತು ನಿಂತುಕೊಂಡರು. ಬಳಿಕ ಜಿತೇಂದ್ರನು ತನ್ನನ್ನು ಹಿಂಬಾಲಿಸಿ ಬರಬೇಕೆಂದು ಸನ್ನೆ ಮಾಡಲು, ಆ ತರುಣನು ಅಪ್ಪಣೆಯಂತೆ ಜಿತೇಂದ್ರನ ಬೆನ್ನುಹತ್ತಿದನು. ಅವರಿಬ್ಬರು ಗದ್ದಲವಿಲ್ಲದ ಒಂದು ಧರ್ಮಶಾಲೆಗೆ ಹೋದರು. ಆಗ ಆ ರಜಪೂತವೀರನು ಜಿತೇಂದ್ರನನ್ನು ಕುರಿತು—ರಾಜಪುತ್ರನೇ, ನನ್ನನ್ನು ಬಿಡಾ

ನಂದಸ್ವಾಮಿಗಳು ನಿನ್ನ ಬಳಿಗೆ ಕಳುಹಿದ್ದಾರೆ. ನಿನ್ನನ್ನು ಶೋಧಿಸಿ ಹಿಡ ತರಲು ಅಶೋಕನು ನಾಲ್ಕೂ ಕಡೆಗೆ ಸೇವಕರನ್ನು ಕಳಿಸಿರುವನಂತೆ. ನಿನ್ನನ್ನು ಹುಡುಕಿಕೊಟ್ಟವರಿಗೆ ಹತ್ತುಸಾವಿರ ಹೊನ್ನುಗಳು ಇನಾ ಮಾಗಿ ದೊರೆಯುವವು. ಅಶೋಕನ ಸೇವಕರು ಹರಿದ್ವಾರದ ಆಶ್ರಮಕ್ಕೆ ಹೋಗಿರಬಹುದು. ನೀನು ಆಶ್ರಮದಲ್ಲಿರದೆ ಬೌದ್ಧಭಿಕ್ಷುವಿನ ವೇಷದಿಂದ ದೇಶಾಂತರಕ್ಕೆ ತೆರಳಬೇಕೆಂದು ಗುರುಗಳು ಆಜ್ಞಾಪಿಸಿರುವರು. ಮೃಗೇಂದ್ರ ಮಹಾರಾಜರ ಚಿಂತೆಯನ್ನು ಮಾಡಬಾರದೆಂತಲೂ, ಅನುಕೂಲಕಾಲವು ಒದಗುವವರೆಗೆ ಸತ್ವವನ್ನು ಕಾಯ್ದುಕೊಂಡು ಮಾರ್ಗವನ್ನು ನಿರೀಕ್ಷಿ ಸುತ್ತ ಗುಪ್ತರೀತಿಯಿಂದ ವಾಸಮಾಡಬೇಕೆಂತಲೂ, ಯಾವಬಗೆಯ ಚಿಂತೆಗೂ ಅನುವು ಕೊಡಬಾರದೆಂತಲೂ ಆಗ್ರಹದಿಂದ ಗುರುಗಳು ಹೇಳಿ ರುವರು. ಅಪರಿಹಾರ್ಯ ಕಾರಣದಿಂದ ನಾನು ಬರಲಿಕ್ಕೆ ತಡವಾದರೂ ಗುರುಗಳ ಇಚ್ಛೆಯಂತೆ ವ್ಯವಸ್ಥೆಯಾಗಿರುವದನ್ನು ನೋಡಿ ನನಗೆ ಬಹಳ ಸಮಾಧಾನವಾಗಿದೆ! ನಾನು ಇನ್ನು ಹರಿದ್ವಾರಕ್ಕೆ ಹೋಗದೆ, ಈಗ ನಿಂತಕಾಲಮೇಲೆ ಗುರುಗಳ ಬಳಿಗೆ ಹೋಗಿ ಈ ಸಂಗತಿಯನ್ನು ತಿಳಿಸು ವೆನು, ಎಂದು ಹೇಳಿ ಆ ರಜಪೂತನು ಹೋಗಲು, ಇತ್ತ ಮಥುರಾ ಪಟ್ಟಣದಲ್ಲಿ ಅಶೋಕನ ಸೇವಕರು, ಭೇರಿಯ ನಾದದೊಡನೆ ಡಂಗುರ ಸಾರುತ್ತ ಬರುತ್ತಿದ್ದರು. ಜಿತೇಂದ್ರನು ಕಿವಿಗೊಟ್ಟು ಆ ಡಂಗುರವನ್ನು ಕೇಳುತ್ತಿರಲು—"ಎಲೈ ಪೌರರೇ, ಲಕ್ಷಗೊಟ್ಟು ಕೇಳಿರಿ. ಅಶೋಕರಾ ಜನು ಕಲಿಂಗದೇಶವನ್ನು ಗೆದ್ದನು. ಕಲಿಂಗದಯುವರಾಜನಾದ ಜಿತೇಂ ದ್ರನನ್ನು ಹಿಡತರಲು ಆ ಬೌದ್ಧ ಚಕ್ರವರ್ತಿಯು ಆಜ್ಞಾಪಿಸಿರುತ್ತಾನೆ. ಜಿತೇಂದ್ರನು ಹರಿದ್ವಾರದಿಂದ ಎಲ್ಲಿಯೋ ಹೊರಟು ಹೋಗಿರುವನು. ಆತನನ್ನು ಹಿಡಕೊಟ್ಟವರಿಗೆ ಹತ್ತುಸಾವಿರ ಹೊನ್ನುಗಳು ಉಚಿತವಾಗಿ ದೊರೆಯುವವು" ಎಂಬ ಶಬ್ದಗಳು, ಭಿಕ್ಷುವೇಷಧಾರಿಯಾದ ಆ ಜಿತೇಂ ದ್ರನ ಕಿವಿಗೆ ಬಿದ್ದವು.

—[೦]—

# ೭ ನೆಯ ಪ್ರಕರಣ—ಉಪಗುಪ್ತನು

ಮೃಗೇಂದ್ರರಾಜನ ಹೆಂಡತಿಯಾದ ಇಂದುಮತಿಯೂ, ಮಗಳಾದ ಪ್ರಣಯಿನಿಯೂ ವೇಷಾಂತರಮಾಡಿ ಘನಶ್ಯಾಮನೆಂಬ ಸರದಾರನ ಬೆಂಗಾವಲಿನಿಂದ ಹರಿದ್ವಾರಕ್ಕೆ ಹೊರಟದ್ದನ್ನು ವಾಚಕರು ಬಲ್ಲರಷ್ಟೇ? ಆ ಮೂವರು ಎಡೆಬಿಡದೆ ಪ್ರವಾಸಮಾಡಿ ಮಧುರಾಪಟ್ಟಣಕ್ಕೆ ಬಂದರು. ಅವರ ಕುದುರೆಗಳು ದಣಿದದ್ದರಿಂದ ನಾಲ್ಕುದಿನ ಆ ಪಟ್ಟಣದಲ್ಲಿ ವಾಸ ಮಾಡಬೇಕೆಂದು ಅವರು ಯೋಚಿಸಿದರು. ಆದರೆ ಆ ಪಟ್ಟಣದಲ್ಲಿ ಅವರಿಗೆ ಯಾರ ಗುರುತೂ ಇದ್ದಿಲ್ಲ. ಘನಶ್ಯಾಮನಿಗೆ ನಂದಿಗುಪ್ತನೆಂಬ ಒಬ್ಬ ಬೌದ್ಧಧರ್ಮದ ವ್ಯಾಪಾರಸ್ಥನ ಚಿಕ್ಕಂದಿನ ಪರಿಚಯ ಮಾತ್ರ ಇತ್ತು. ನಂದಿಗುಪ್ತನು ಪ್ರಸಿದ್ಧ ಶ್ರೀಮಂತನು. ಔದಾರ್ಯದಲ್ಲಿ ಆತನನ್ನು ಸರಿಗಟ್ಟುವವರು ಇಡಿಯ ಮಧುರಾಪಟ್ಟಣದಲ್ಲಿ ಮತ್ತೊಬ್ಬನಿದ್ದಿಲ್ಲ. ಘನಶ್ಯಾಮನು ನಂದಿಗುಪ್ತನನ್ನು ಕಾಣದೆ ನಾಲ್ವತ್ತು ವರ್ಷಗಳಾಗಿದ್ದವು; ಆದರೂ ಆಶ್ರಯಕ್ಕೆ ತಕ್ಕಸ್ಥಾನವೆಂದು ತಿಳಿದು ಘನಶ್ಯಾಮನು ನಂದಿಗುಪ್ತನ ಮನೆಯನ್ನು ಹುಡುಕುತ್ತ ಹೊರಟನು. ಅಷ್ಟು ಹೊತ್ತಿಗೆ ನಂದಿಗುಪ್ತನು ಸತ್ತು ಹತ್ತುವರ್ಷಗಳಾಗಿದ್ದವು. ಆತನ ಮಗನಾದ ಉಪಗುಪ್ತನು, ಔದಾರ್ಯದಿಂದ ತನ್ನ ತಂದೆಯ ಸಂಪತ್ತನ್ನೂ, ಮನೆಮಾರುಗಳನ್ನೂ ಕಳಕೊಂಡು, ಕೇವಲ ಬಡವನಂತೆ ಒಂದು ಸಣ್ಣ ಮನೆಯಲ್ಲಿರುತ್ತಿದ್ದನು. ಘನಶ್ಯಾಮನು ಆತನ ಮನೆಗೆ ಹೋಗಿ ಆತನ ತಂಧೆಯ ಗುರುತು ಪರಿಚಯವನ್ನು ಹೇಳಲು, ಉಪಗುಪ್ತನು ಸಂತೋಷಬಟ್ಟು ಆ ಮೂವರನ್ನು ತನ್ನ ಮನೆಯಲ್ಲಿ ಆದರದಿಂದ ಇಳಿಸಿಕೊಂಡನು. ಉಪಗುಪ್ತನು ಬಡವನಾದರೂ ಅತಿಥಿಸತ್ಕಾರದಲ್ಲಿ ಹೆಸರಾಗಿದ್ದನು. ಆತನ ಹೆಂಡತಿಯಾದ ಬಕುಲಾದೇವಿಯು ಪತಿಭಕ್ತಿಪರಾಯಣಳಾಗಿದ್ದಳು. ಒಟ್ಟಿಗೆ, ದಂಪತಿಗಳು ತೀರ ಚಿಕ್ಕವರಾದರೂ ಸಜ್ಜನರಿದ್ದರು. ಘನಶ್ಯಾಮನು ನಂದಿಗುಪ್ತನ ಸದ್ಗುಣಗಳನ್ನೂ, ಐಶ್ವರ್ಯವನ್ನೂ ವರ್ಣಿಸಲು, ಉಪಗುಪ್ತನು ಆತ

ನನ್ನು ಕುರಿತು—ಸಜ್ಜನನೇ, ನೀನು ನನ್ನ ತಂದೆಯ ಸದ್ಗುಣಗಳ ನೆನಪು ಮಾಡಿಕೊಟ್ಟದ್ದಕ್ಕಾಗಿ ನಿನ್ನ ಉಪಕಾರವೆಣಿಸುವೆನು. ತಂದೆಯಕಾಲದ ಶ್ರೀಮಂತಗಿರಿಯು ನನ್ನ ಕಾಲದಲ್ಲಿ ಉಳಿದಿರುವದಿಲ್ಲ. ತಂದೆ ಸಂಪಾದಿಸಿದ ಅಪಾರವಾದ ಸಂಪತ್ತೂ, ಮನೆಮಾರುಗಳೂ ನನ್ನ ಕೈ ಬಿಟ್ಟು ಹೋದವು; ಆದ್ದರಿಂದ ನಿಮ್ಮ ಮರ್ಯಾದೆಗೆ ತಕ್ಕಂತೆ ನಿಮಗೆ ಪ್ರಶಸ್ತಸ್ಥಳವನ್ನು ಇಳಕೊಳ್ಳಲಿಕ್ಕೆ ಕೊಡುವದು ನನ್ನಿಂದಾಗುವಹಾಗಿಲ್ಲ; ಸೇವೆಗಾಗಿ ದಾಸದಾಸಿಯರನ್ನು ಕಳಿಸುವದೂ ಆಗುವದಿಲ್ಲ. ಇದಕ್ಕಾಗಿ ಕ್ಷಮಿಸಬೇಕು. ನಾನು ನಿಮ್ಮ ನಮ್ರ ಸೇವಕನಿರುತ್ತೇನೆ, ನನ್ನ ಪ್ರಿಯಪತ್ನಿಯು ತಮ್ಮ ದಾಸಿಯಾಗಿರುತ್ತಾಳೆ, ನಮ್ಮಿಂದ ಸೇವೆಯನ್ನು ಗ್ರಹಿಸಬೇಕು. ಸದ್ಗೃಹಸ್ಥನೇ, ಆ ದ್ರವ್ಯವೂ, ಆ ಸಂಪತ್ತೂ, ಆ ದೊಡ್ಡ ಮನೆಯೂ ಹೋದದ್ದಕ್ಕಾಗಿ ನಾನು ದುಃಖಪಡುವದಿಲ್ಲ; ತಮ್ಮಂಥ ಯೋಗ್ಯರಾದ ಅತಿಥಿಗಳ ಸತ್ಕಾರವನ್ನು ಕೈಮುಟ್ಟಿ ಮಾಡುವ ಯೋಗವು ನನಗೂ ನನ್ನ ಹೆಂಡತಿಗೂ ಒದಗಿದ್ದಕ್ಕಾಗಿ ನನಗೆ ಪರಮಾನಂದವಾಗಿದೆ.

ಉಪಗುಪ್ತನ ಈ ವಿನಯದ ಮಾತುಗಳಿಗೂ, ಸಾತ್ವಿಕಸ್ವಭಾವಕ್ಕೂ ಇಂದುಮತಿಯುಸಂತೋಷಪಟ್ಟು ಆತನನ್ನುಕುರಿತು—ಉಪಗುಪ್ತಶ್ರೇಷ್ಠಿಗಳೇ, ನಿಮ್ಮ ನಮ್ರಸ್ವಭಾವವನ್ನೂ, ಅತಿಥಿಗಳ ಮೇಲಿನ ನಿಮ್ಮ ಶ್ರದ್ಧೆಯನ್ನೂ, ಇದ್ದದ್ದರಲ್ಲಿ ಸಂತೋಷಪಡುವ ನಿಮ್ಮ ದೊಡ್ಡಮನಸ್ಸನ್ನೂ, ನಿಮ್ಮ ಸಾತ್ವಿಕಸ್ವಭಾವವನ್ನೂ ನೋಡಿ ನನಗೆ ಬಹಳ ಸಂತೋಷವಾಗಿದೆ. ನಿಮ್ಮ ಈ ಸದ್ಗುಣಗಳ ಮೇಲೆಯೂ, ಸುಸ್ವಭಾವದಮೇಲೆಯೂ ಇಡಿಯ ಜಗತ್ತಿನ ಸಂಪತ್ತನ್ನು, ಅದೇಕೆ, ಪ್ರತ್ಯಕ್ಷ ಕುಬೇರನ ಸಂಪತ್ತನ್ನು ಕೂಡ ನಿವಾಳಿಸಿ ಚಲ್ಲಬಹುದು. ನೀವು ತಾಯಿ—ತಂದೆಗಳ ಹೆಸರನ್ನು ನಿಜವಾಗಿ ಕಾದಿರಿ, ಎಂದು ನುಡಿದಳು. ಇಂದುಮತಿಯು ಈ ವರ್ಣನವು ನಿರರ್ಥಕವಾದದ್ದಿದ್ದಿಲ್ಲ. ಉಪಗಪ್ತನು ಅಂಥ ಸತ್ಪುರುಷನೇ ಆಗಿದ್ದನು. ಉಪಗುಪ್ತನನ್ನು ಲಕ್ಷ್ಮಿಯು ತೊಲಗಿದಳು; ಆತನ ಪರಿವಾರವು ಕರಗಿತು; ಎಲ್ಲ ಕೆಲಸಗಳನ್ನು ಕೈಮುಟ್ಟಿ ಮಾಡುವ ಪ್ರಸಂಗವು ಆತನಿಗೆ ಒದಗಿತು. ಬಹಳ ಹೇಳುವದೇನು? ಮಧ್ಯಾಹ್ನಕ್ಕೆ ಅಭಾವವಾಗಿ ಸಾವುಕಾರರು ಆತನನ್ನು ಪರಿಪರಿಯಾಗಿ ಪೀಡಿಸಿದರು; ಆದರೂ

೬

ಆ ಸಜ್ಜನನ ಸದ್ಗುಣಗಳು ಲೇಶವಾದರೂ ಕಡಿಮೆಯಾಗಲಿಲ್ಲ ಐಶ್ವರ್ಯ ಕಾಲದಲ್ಲಿದ್ದ ನಮ್ರಸ್ವಭಾವವೂ, ಉದಾರಬುದ್ಧಿಯೂ ಈಗಾದರೂ ಆತನಲ್ಲಿ ಅಚ್ಚಳಿಯದೆ ಇದ್ದವು. ದೊಡ್ಡ ಮನಸ್ಸೂ, ಸಾತ್ವಿಕಸ್ವಭಾವವೂ, ಸ್ವಧರ್ಮ ನಿಷ್ಠೆಯೂ ಉಪಗುಪ್ತನ ಹುಟ್ಟುಗುಣಗಳಾಗಿದ್ದವು ಬಡತನದ ಮೂಲಕ ಆತನ ಮನಸ್ಸಿನ ಸ್ಥಿರತ್ವಕ್ಕೆ ಎಂದೂ ಭಂಗಬರಲಿಲ್ಲ, ತೃಪ್ತಿಗೆ ಎಂದೂ ಕೊರತೆ ಬರಲಿಲ್ಲ. ಆತನು ಬೌದ್ಧಧರ್ಮದ ಉಪಾಸಕನಾಗಿದ್ದನು ಬೌದ್ಧಧರ್ಮದ ಮಹತ್ತತ್ವಗಳನ್ನು ಆತನು ಉತ್ತಮ ರೀತಿಯಿಂದ ತಿಳಕೊಂಡು, ಅದ ರಂತೆ ಪ್ರತ್ಯಕ್ಷವಾಗಿ ಆಚರಿಸುತ್ತಿದ್ದನು ತಂದೆಯ ಅಂಥ ಅಪಾರವಾದ ಸಂಪತ್ತು ಉಪಗುಪ್ತನ ದಾನಶೂರತ್ವಕ್ಕೆ ಈಡಾಗಲಿಲ್ಲ ಉಪಗು ಪ್ತನ ದಾನಶೂರತ್ವದ ಫಲವೆಂದು ತಿಳಿದು ಎಷ್ಟೋ ಜನರು ಆತನ ಅನ್ನಸತ್ರದಲ್ಲಿ ಸುಗ್ರಾಸಭೋಜನ ಮಾಡುತ್ತಿದ್ದರು, ಅದರೆ ಉಪಗು ಪ್ತನಿಗೂ, ಆತನ ಹೆಂಡತಿಗೂ ಮಧ್ಯಾಹ್ನಕ್ಕೆ ಒಮ್ಮೊಮ್ಮೆ ಹಿಂಡಿ ರೊಟ್ಟಿ ಹೊಟ್ಟೆತುಂಬ ಸಿಗುತ್ತಿದ್ದಿಲ್ಲ! ಉಪಗುಪ್ತನು ಮಾರ್ಗಸ್ಥರ ಅನುಕೂಲತೆಗಾಗಿ ಕಟ್ಟಿಸಿದ ವಿಶಾಲವಾದ ಧರ್ಮಶಾಲೆಯನ್ನು, ಆತನ ಮುರುಕುಮನೆಯು ಎಂದೂ ಸರಿಗಟ್ಟುವಹಾಗಿದ್ದಿಲ್ಲ ಇವೆಲ್ಲಗುಣಗಳಿಗಿಂತ ಉಪಗುಪ್ತನಲ್ಲಿ ಒಂದು ಅತ್ಯಂತ ಶ್ರೇಷ್ಠಗುಣವು ವಾಸಿಸುತ್ತಿತ್ತು. ಆ ಸುಸ್ವರೂಪಿಯಾದ ತರುಣನು ಪರನಾರೀ ಸಹೋದರನಾಗಿದ್ದನು ಏಕ ಪತ್ನೀವ್ರತದಲ್ಲಿ ಶ್ರೀರಾಮಚಂದ್ರನಿಗೆ ಹೋಲಿಸುವದಾದರೆ ಉಪಗುಪ್ತ ನನ್ನೇ ಹೋಲಿಸಬಹುದಾಗಿತ್ತು. ಒಟ್ಟಿಗೆ, ಉಪಗುಪ್ತನ ಇಂದ್ರಿಯನಿಗ್ರ ಹವು, ಮಹಾ–ಮಹಾ ತಪಸ್ವಿಗಳನ್ನು ನಾಚಿಸಬಹುದಾಗಿತ್ತು! ಅರ ಣ್ಯದಲ್ಲಿ ವಾಸಿಸುವ, ಸ್ತ್ರೀಯರ ನೆರಳಿನ ದರ್ಶನವೂ ಇಲ್ಲದ, ಕಂದಮೂ ಲಾದಿ ನಿಸ್ಸತ್ವಾಹಾರಗಳನ್ನೇ ಸೇವಿಸುವ, ಚತುರ್ಥಾಶ್ರಮವನ್ನು ಸ್ವೀಕ ರಿಸಿರುವ ವೃದ್ಧಮುನಿಗಳಿಂದಾಗದ ಇಂದ್ರಿಯ ನಿಗ್ರಹವನ್ನು, ನಗರದಲ್ಲಿ ವಾಸಿಸುವ ರೂಪವತಿಯರಾದ ಸ್ತ್ರೀಯರ ಸಂಸರ್ಗದಲ್ಲಿ, ಕಾಲಕ್ರ ಮಣಮಾಡುವ ತರುಣನಾದ ಉಪಗುಪ್ತನು ಲೀಲಾಮಾತ್ರದಿಂದ ಮಾಡುತ್ತಿದ್ದನೆಂದಬಳಿಕ, ಆ ಮಹಾತ್ಮನ ಯೋಗ್ಯತೆಯನ್ನೇನು

ವರ್ಣಿಸಬೇಕು.!

ಮಥುರಾ ಪಟ್ಟಣದಲ್ಲಿದ್ದ ವಾಸವದತ್ತೆಯೆಂಬ ಗಣಿಕಾಸ್ತ್ರೀಯ ವೃತ್ತಾಂತವು ಉಪಗುಪ್ತನ ಇಂದ್ರಿಯ ನಿಗ್ರಹದ ಅತ್ಯುತ್ತಮ ಉದಾಹರಣವಾಗಿದೆ. ವಾಸವದತ್ತೆಯು ಪ್ರಸಿದ್ಧ ವೇಶ್ಯೆಯು. ಆಕೆಯ ಅದ್ವಿತೀಯ ರೂಪವನ್ನು ನೋಡುವದಕ್ಕಾಗಿ ದೂರ ದೂರ ದೇಶಗಳ ತರುಣರು ಮಥುರಾಪಟ್ಟಣಕ್ಕೆ ಎಡತಾಕುತ್ತಿದ್ದರು. ವಿಲಾಸಿಗಳಾದ ರಾಜರೂ, ಸರದಾರರೂ ವಾಸವದತ್ತೆಯ ನಿತ್ಯದ ಯಜಮಾನರಾಗಿರುತ್ತಿದ್ದರು. ದೊಡ್ಡ-ದೊಡ್ಡ ಶ್ರೀಮಂತರು ನೀರಿನಂತೆ ದ್ರವ್ಯವನ್ನು ವೆಚ್ಚಮಾಡಿದರೂ, ಅವರಿಗೆ ವಾಸವದತ್ತೆಯ ದರ್ಶನವು ಕ್ವಚಿತ್ತಾಗಿ ಆಗುತ್ತಿತ್ತು. ವಾಸವದತ್ತೆಯು ಬೀದಿಯನ್ನು ಹಿಡಿದು ಸಾಗಿದಳೆಂದರೆ, ತರುಣರು ಪರವಶರಾಗಿ ಬಾಯಿತೆರೆದು ಮರುಳರಂತೆ ನೋಡುತ್ತ ನಿಂತುಕೊಳ್ಳುತ್ತಿದ್ದರು. ಒಂದು ದಿನ ವಾಸವದತ್ತೆಯು ಉಪಗುಪ್ತನ ಚಿಕ್ಕ ಅಂಗಡಿಯ ಮುಂದೆ ಹಾದು ಹೋಗುವಾಗ, ಉಪಗುಪ್ತನ ಸುಂದರ ರೂಪವು ಆಕೆಯ ಕಣ್ಣಿಗೆ ಬಿದ್ದಿತು. ಆಕೆಯು ಉಪಗುಪ್ತನನ್ನು ಕಣ್ಣುತುಂಬ ನೋಡುವ ಉದ್ದೇಶದಿಂದ ಆತನ ಆ ಸುಗಂಧ ದ್ರವ್ಯದ ಅಂಗಡಿಯಲ್ಲಿ ವ್ಯಾಪಾರ ಮಾಡುವ ನೆವದಿಂದ ಕುಳಿತುಕೊಂಡಳು. ಆಗ ನೆರೆಹೊರೆಯ ತರುಣರಾದ ಅಂಗಡಿಕಾರರು, ಇಂದು ಉಪಗುಪ್ತನ ಭಾಗ್ಯೋದಯವಾಯಿತೆಂದು ಮನಸ್ಸಿನಲ್ಲಿ ಅಂದುಕೊಳ್ಳಹತ್ತಿದರು. ಉಪಗುಪ್ತನ ಔದಾರ್ಯದ ಸ್ವಭಾವವನ್ನೂ, ಮೋಹಕ ಸ್ವರೂಪವನ್ನೂ, ತಾರುಣ್ಯವನ್ನೂ ನೋಡಿ ಆ ಗಣಿಕೆಯು ಆತನ ಮೇಲೆ ಲುಬ್ಧಳಾದಳು; ಆದರೆ ಉಪಗುಪ್ತನ ಸದೃಢ ಮನಸ್ಸಿನ ಮೇಲೆ ಆಕೆಯ ಸೌಂದರ್ಯದ ಪರಿಣಾಮವು ಎಷ್ಟುಮಾತ್ರವೂ ಆಗಲಿಲ್ಲ. ವಾಸವದತ್ತೆಯು ಮನೆಗೆ ಹೋಗಿ, ತನ್ನ ದಾಸಿಯ ಮುಖಾಂತರ ಒಂದು ಪ್ರಣಯಪತ್ರಿಕೆಯನ್ನು ಕಳಿಸಿ, "ಇಂದು ತಮ್ಮ ಸಹವಾಸದ ಲಾಭವು ದೊರೆಯಬೇಕೆಂದು ಪ್ರಾರ್ಥಿಸಿದಳು. ಅದಕ್ಕೆ ಉಪಗುಪ್ತನು—"ನಾನು ಬಡವನು; ಪುನಃ ನನ್ನನ್ನು ಕಾಣುವದರಿಂದ ನಿನಗಾಗತಕ್ಕ ಪ್ರಯೋಜನವೇನು? ನನ್ನನ್ನು ನೋಡುವ ಪ್ರಸಂಗವು ನಿನಗೆ

ಮುಂದೆ ಬರಬಹುದು" ಎಂದು ದಾಸಿಗೆ ಸ್ಪಷ್ಟವಾದ ಉತ್ತರವನ್ನು ಕೊಟ್ಟು ಕಳಿಸಿದನು. ಈ ಉತ್ತರವನ್ನು ಕೇಳಿ, ವಾಸವದತ್ತೆಯು ಪರಮಾಶ್ಚರ್ಯಪಟ್ಟು—ನಾನು ನಿಮ್ಮಿಂದ ಒಂದು ಕಾಸನ್ನಾದರೂ ಇಚ್ಛಿಸುವದಿಲ್ಲ. ಕೇವಲ ದರ್ಶನಾಪೇಕ್ಷೆಯಿಂದಲೂ. ಸಹವಾಸದ ಇಚ್ಛೆಯಿಂದಲೂ ನಿಮ್ಮ ಬರವನ್ನು ಎದುರು ನೋಡುವೆನು, ಎಂದು ಉಪಗುಪ್ತನಿಗೆ ಮತ್ತೆ ಹೇಳಿಕಳಿಸಿಕೊಟ್ಟು, ದಾರಿದ್ರ್ಯವನ್ನು ದೂರ ಮಾಡುವೆನೆಂಬ ಆಶೆಯನ್ನು ಹಚ್ಚಿದಳು; ಆದರೆ ಉಪಗುಪ್ತನು ತನ್ನ ಶೀಲದಿಂದ ರತಿಮಾತ್ರನಾದರೂ ಭ್ರಷ್ಟನಾಗಲಿಲ್ಲ. ಮುಂದೆ ಕೆಲವು ದಿವಸಗಳ ಮೇಲೆ ಅರಸನು ಆ ಸೌಂದರ್ಯಶಾಲಿನಿಯಾದ ಗಣಿಕೆಯ ಮೇಲೆ ಕೋಪಿಸಿ, ಆಕೆಯ ಕಿವಿ-ಮೂಗುಗಳನ್ನು ಕೊಯಿಸಿ, ಆಕೆಯನ್ನು ಶ್ಮಶಾನದಲ್ಲಿ ಚೆಲ್ಲಿಸಿದನು. ಆಗ ಉಪಗುಪ್ತನು ಆಕೆಯ ದರ್ಶನಕ್ಕೆ ಹೋಗಿ, ಆಕೆಯ ಬಳಿಯಲ್ಲಿ ಕುಳಿತುಕೊಂಡನು. ಆತನನ್ನು ನೋಡಿ ಗಣಿಕೆಯು ನಾಚಿದಳು. ಆಕೆಯು ಉಪಗುಪ್ತನಿಗೆ—ಘನವಂತನೆ, ಈ ದೇಹವು ತಾರುಣ್ಯಭರದಿಂದ ಪ್ರಕಾಶಿತವಾಗಿ, ಉತ್ತಮ ವಸ್ತ್ರಾಭರಣಗಳಿಂದ ಅಲಂಕೃತವಾಗಿರುವಾಗ, ಕಾಮಿಜನರ ಆದರಕ್ಕೆ ಪಾತ್ರವಾಗಿತ್ತು. ಆಗ ನಾನು ನಿನ್ನ ದರ್ಶನಲಾಭವನ್ನು ಇಚ್ಛಿಸಲು ನೀನು ಪೂರ್ಣ ಮಾಡಲಿಲ್ಲ; ಸಹವಾಸದ ಸುಖವನ್ನು ಒದಗಿಸಿಕೊಡಲಿಲ್ಲ; ಆದರೆ ಈಗ ಇಂಥ ಕಷ್ಟಮಯ ಸ್ಥಿತಿಯು ಪ್ರಾಪ್ತವಾಗಿರಲು, ನನ್ನ ಆನಂದ-ಸುಖ-ಸೌಂದರ್ಯಗಳು ನಷ್ಟವಾಗಿ ಹೋಗಿರಲು, ಇಂಥ ವಿಪನ್ನಸ್ಥಿತಿಯಲ್ಲಿ ನೀನು ನನ್ನ ಬಳಿಗೆ ಬಂದ ಕಾರಣವೇನು?

ವಾಸವದತ್ತೆಯ ಈ ಮರ್ಮಭೇದಕ ಮಾತುಗಳನ್ನು ಕೇಳಿ ಉಪಗುಪ್ತನು ಆಕೆಯನ್ನು ಕುರಿತು—ವಾಸವದತ್ತೆಯೇ, ನಿನ್ನ ದರ್ಶನಕ್ಕೆ ಯೋಗ್ಯವಾದ ಕಾಲವು ಇದೇ ಎಂದು ನಾನು ತಿಳಿಯುವೆನು. ಮನುಷ್ಯನ ಐಹಿಕಸುಖವು ನಾಶಹೊಂದತಕ್ಕದ್ದೆಂಬದನ್ನು ನೋಡುವದಕ್ಕಾಗಿ ನಾನು ಬುದ್ಧಿಪೂರ್ವಕವಾಗಿ ನಿನ್ನ ಬಳಿಗೆ ಬಂದಿರುತ್ತೇನೆ, ಎಂದು ನುಡಿದು, ಮರಣೋನ್ಮುಖಳಾಗಿ ಬಿದ್ದುಕೊಂಡಿದ್ದ ಆಕೆಗೆ ಧರ್ಮೋಪದೇಶ

ವನ್ನು ಮಾಡಿದನು. ದುಃಖವೇಗದಿಂದ ಅಸ್ವಸ್ಥವಾಗಿದ್ದ ಆಕೆಯ ಮನಸ್ಸಿಗೆ ಆ ಉಪದೇಶದಿಂದ ಶಾಂತಿಯು ಪ್ರಾಪ್ತವಾಯಿತು. ಆಕೆಯು ಬುದ್ಧ, ಧರ್ಮ, ಹಾಗು ಸಂಘ ಎಂಬ ತ್ರಯೀಯನ್ನು ಆಶ್ರಯಿಸಿ ದೇಹವನ್ನು ಬಿಟ್ಟಳು. ಪ್ರಿಯವಾಚಕರೆ, ಉಪಗುಪ್ತಸೆಟ್ಟಿಯು ಇಂಥ ಸತ್ಪುರುಷನಿದ್ದನು; ಅವನು ಸಂಸಾರದಲ್ಲಿದ್ದೂ ಇಲ್ಲದಂತೆ ಇದ್ದನು. ಇಂದ್ರಿಯ ಜನ್ಯಸುಖದ ಮೇಲಿನ ಆಸಕ್ತಿಯನ್ನೂ, ಸಂಸಾರದ ಸುಖದುಃಖಗಳನ್ನೂ ಆತನು ಪೂರ್ಣವಾಗಿ ಮರೆತುಬಿಟ್ಟಿದ್ದನು. ಇಂಥ ಪುಣ್ಯ ಪುರುಷನು ವಾಸಿಸುವ ಪವಿತ್ರ ಸ್ಥಳವು ತಮ್ಮ ವಾಸಕ್ಕಾಗಿ ದೊರೆತದ್ದರಿಂದ ಇಂದುಮತಿರಾಣಿಗೆ ಬಹಳ ಸಂತೋಷವಾಯಿತು ಬೌದ್ಧರು ಅತ್ಯಂತ ದುಷ್ಟರಿರುತ್ತಾರೆಂತಲೂ, ಅವರು ನೀತಿಯನ್ನು ಕಾಲಿನಿಂದೊದ್ದು, ಮನಬಂದಂತೆ ಆಚರಣೆ ಮಾಡುವರೆಂತಲೂ ಪ್ರಣಯಿನಿಯು ತಿಳಕೊಂಡಿದ್ದಳು; ಆದರೆ ಉಪಗುಪ್ತನ ಚರಿತ್ರ ಶ್ರವಣದಿಂದ ಆಕೆಯ ತಪ್ಪುತಿಳುವಳಿಕೆಯು ದೂರವಾಯಿತು. ಧನಿಕರ ಭವ್ಯಮಂದಿರದಲ್ಲಿ ದೊರೆಯದೆ ಇದ್ದ ಸುಖ–ಸನ್ಮಾನಗಳು ಉಪಗುಪ್ತನ ಆ ಮುರುಕು ಮನೆಯಲ್ಲಿ ಅವರಿಗೆ ದೊರೆತವು.

ಇಂದುಮತಿಯೇ ಮೊದಲಾದವರು ಆ ದಿನ ಉಪಗುಪ್ತನ ಆತಿಥ್ಯದಿಂದ ಸಂತುಷ್ಟರಾಗಿ ರಾತ್ರಿ ಮಲಗಿಕೊಂಡರು. ಒಂದೇಸವನೆ ಹಲವು ದಿನ ಮಾರ್ಗವನ್ನು ಕ್ರಮಿಸಿದ್ದರಿಂದ ಅವರಿಗೆ ಗಾಢವಾದ ನಿದ್ರೆಯು ಹತ್ತಿತು. ಅವರು ಮಲಗಿಕೊಂಡಿದ್ದ ಒಂದೇ ಮಗ್ಗಲಿಗೆ ಬೆಳಗಾಯಿತು. ಎಲ್ಲರೂ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ತಮ್ಮ ತಮ್ಮ ಉದ್ಯೋಗಗಳನ್ನು ಕೈಕೊಳ್ಳತಕ್ಕವರಿದ್ದರು ಅಷ್ಟರಲ್ಲಿ ಒಂದು ಅಸಮಾಧಾನದ ಸಂಗತಿಯು ಒದಗಿತು. ಉಪಗುಪ್ತನು ತನ್ನ ಅಂಗಡಿಯನ್ನು ತೆರೆದು ಸಾಮಾನುಗಳನ್ನು ವ್ಯವಸ್ಥೆಗೊಳಿಸುತ್ತಿರಲು, ಆತನ ಹಳೆಯ ಸಾವುಕಾರನೊಬ್ಬನು, ಇಬ್ಬರು ಸರಕಾರಿಯ ಅಧಿಕಾರಿಗಳನ್ನು ಕರಕೊಂಡು ಬಂದು ಉಪಗುಪ್ತನನ್ನು ಬಂಧಿಸಿ ಒಯ್ಯುವದಕ್ಕಾಗಿ ಅಂಗಡಿಯ ಬಾಗಿಲಲ್ಲಿ ಕುಳಿತುಕೊಂಡಿದ್ದನು. ಈ ಲಕ್ಷಣವನ್ನು ತಿಳಿದು, ಉಪಗುಪ್ತನು ಸಾವುಕಾರನನ್ನೂ, ಅಧಿಕಾರಿಗಳನ್ನೂ ವಿನಯದಿಂದ ನಮಸ್ಕರಿಸಿ, "ಸ್ವಲ್ಪ ಕುಳಿತು

ಕೊಳ್ಳಿರಿ, ಈಗ ಬರುವೆನು"ಎಂದು ಹೇಳಿ, ಒಳಗೆ ಹೆಂಡತಿಯ ಬಳಿಗೆ ಹೋದನು ತನಗೆ ಬಂದಿದ್ದ ಸಂಕಟದವಾರ್ತೆಯು ಅತಿಥಿಗಳ ಕಿವಿಗೆ ಬೀಳ ಬಾರದೆಂದು ಆತನು ಬಹಳವಾಗಿ ಯತ್ನಿಸಿದನು; ಆದರೆ ಆತನ ಯತ್ನವು ಸಫಲವಾಗಲಿಲ್ಲ. ಸಾವುಕಾರನಿಗೆ ಉಪಗುಪ್ತನು ಎರಡು ಸಾವಿರ ಹೊನ್ನು ಗಳನ್ನು ಕೊಡಬೇಕಾಗಿದ್ದು, ಅದಕ್ಕಾಗಿ ಉಪಗುಪ್ತನನ್ನು ಹಿಡಕೊಂಡು ಹೋಗಲಿಕ್ಕೆ ಸರಕಾರಿಯ ಅಧಿಕಾರಿಗಳೊಡನೆ ಸಾವುಕಾರನು ಬಂದಿರುತ್ತಾ ನೆಂಬ ಸುದ್ದಿಯು ಇಂದುಮತಿಗೂ, ಪ್ರಣಯಿನಿಗೂ. ಘನಶ್ಯಾಮನಿಗೂ ಗೊತ್ತಾಯಿತು ಅವರು ಬಹಳವಾಗಿ ನೊಂದುಕೊಂಡರು ಕೂಡಲೆ ಎರಡು ಸಾವಿರ ಹೊನ್ನುಗಳನ್ನು ಕೊಟ್ಟು ಉಪಗುಪ್ತನನ್ನು ಬಿಡಿಸಿಕೊಳ್ಳಲಿಕ್ಕೆ ಅವರಿಗೆ ಧನಾನುಕೂಲವಿದ್ದಿಲ್ಲ. ಇಂದ್ರಪುರದಿಂದ ಧನವನ್ನು ತರಿಸಿಕೊಳ್ಳ ಲಿಕ್ಕೆ ತಿಂಗಳೊಪ್ಪತ್ತು ಬೇಕಾಗುತ್ತಿತ್ತು. ಅಲ್ಲಿಯವರೆಗೆ ತಡೆಯಬೇಕೆಂದು ಸಾವುಕಾರನಿಗೆ ಹೇಳಿಕೊಳ್ಳಲಿಕ್ಕೆ ಪ್ರಣಯಿನಿಯೂ, ಘನಶ್ಯಾಮನೂ ಹೊರಗೆ ಬಂದರು. ಸಾವುಕಾರನು ಏನು ಅನ್ನುವನೋ ಕೇಳಬೇಕೆಂಬ ಉದ್ದೇಶದಿಂದ ಇಂದುಮತಿಯು ಬಾಗಿಲ ಹಿಂದೆ ಕುಳಿತುಕೊಂಡಿದ್ದಳು. ಘನಶ್ಯಾಮನು ಸಾವುಕಾರನ ಸಂಗಡ ಇನ್ನು ಮಾತಾಡತಕ್ಕವನು, ಅಷ್ಟ ರೊಳಗೆ ಬೀದಿಯಲ್ಲಿ ಭೇರಿಯ ನಾದದೊಡನೆ ರಾಜದೂತರು ಡಂಗುರವನ್ನು ಸಾರುತ್ತಲಿದ್ದರು. ಡಂಗುರದೊಳಗಿನ ಕೆಲವು ಶಬ್ದಗಳು ಪ್ರಣಯಿನಿಯ ಹಾಗೂ ಘನಶ್ಯಾಮನ ಕಿವಿಗೆ ಬೀಳಲು, ಅವರು ಅಸಮಾಧಾನದಿಂದ ಡಂಗು ರವನ್ನು ಕಿವಿಗೊಟ್ಟು ಕೇಳತೊಡಗಿದರು. ಆಗ ರಾಜದೂತರು, ಎಲ್ಲೈ ವೀರರೇ, ಲಕ್ಷ್ಯಗೊಟ್ಟು ಕೇಳಿರಿ. ಅಶೋಕನು ಕಲಿಂಗದೇಶವನ್ನು ಗೆದ್ದನು ಕಲಿಂಗದ ಯುವರಾಜನಾದ ಜಿತೇಂದ್ರನನ್ನು ಹಿಡತರಲು, ಆ ಬೌದ್ಧಚಕ್ರವರ್ತಿಯು ಆಜ್ಞಾಪಿಸಿರುತ್ತಾನೆ. ಜಿತೇಂದ್ರನು ದರಿದ್ವಾರ ದಿಂದ ಎಲ್ಲಿಯೋ ಹೊರಟು ಹೋಗಿರುವನು ಆತನನ್ನು ಹಿಡಕೊ ಟ್ಟವರಿಗೆ ಹತ್ತುಸಾವಿರ ಹೊನ್ನುಗಳು ಉಚಿತವಾಗಿ ದೊರೆಯುವವು." ಎಂದು ಉಚ್ಚಸ್ವರದಿಂದ ನುಡಿದರು.

ಈ ದುಷ್ಟವಾರ್ತೆಯನ್ನು ಕೇಳಿ, ಘನಶ್ಯಾಮನೂ, ಪ್ರಣಯಿನಿಯೂ

ಸಾವುಕಾರನೊಡನೆ ಮಾತಾಡುವದನ್ನು ಬಿಟ್ಟು, ಅಸಮಾಧಾನದಿಂದ ಒಳಗೆ ಬಂದರು. ಪ್ರಣಯಿನಿಯ ಕಣ್ಣೊಳಗಿಂದ ನೀರುಗಳು ಒಂದೇಸವನೆ ಸುರಿಯುತ್ತಿದ್ದವು. ಇಂದುಮತಿಯು ಒಳಗಿನಿಂದಲೇ ಡಂಗುರದ ಧ್ವನಿಯನ್ನು ಸ್ಪಷ್ಟವಾಗಿ ಕೇಳಿದ್ದಳು. ಆ ವೀರಪತ್ನಿಯು ಅಂತರಂಗದಲ್ಲಿ ಅತ್ಯಂತ ವ್ಯಥೆಪಟ್ಟರೂ ಹೊರಗೆ ಅಷ್ಟು ಅಸಮಾಧಾನವನ್ನು ಪ್ರಕಟಿಸದೆ ಮಗಳನ್ನು ಕುರಿತು—ಪ್ರಣಯಿನಿ, ಕಣ್ಣೀರು ಒರಿಸು; ದುಃಖಪಡುವದಕ್ಕೆ ಇದು ಸಮಯವಲ್ಲ. ಇಂಥ ಪ್ರಸಂಗವು ಬರಬಹುದೆಂತಲೇ ಧೂರ್ತನಾದ ವಿಶಾಖಾನಂದ ಮಂತ್ರಿಯು ನಮ್ಮನ್ನು ರಾಜಧಾನಿಯಿಂದ ಮೊದಲೇ ದಾಟಹಾಕಿದ್ದಾನೆ. ಪರಿಣಾಮದಲ್ಲಿ ಕಲಿಂಗದೇಶಕ್ಕೆ ಅಹಿತವಾಗದಿದ್ದರೂ, ಗುರುಗಳ ಅಪ್ಪಣೆಯಂತೆ ನಾವು ವಿಚಾರಪೂರ್ವಕವಾಗಿ ನಡಕೊಳ್ಳಬೇಕಾಗುತ್ತದೆ. ರಾಜದೂತರ ಡಂಗುರವನ್ನು ಕೇಳಿದರೆ ಜಿತೇಂದ್ರಕುಮಾರನ ಗತಿಯು ನೆಟ್ಟಗೆ ಕಾಣುವದಿಲ್ಲ. ಬೌದ್ಧರು ಅಪ್ರಬುದ್ಧನಾದ ನನ್ನ ಆ ಕೂಸನ್ನು ಹುಡುಕದೆ ಬಿಡರು! ತಂಗೀ, ಯುದ್ಧದಲ್ಲಿ ಎಂದೂ ಹಿಂದಕ್ಕೆ ಸರಿಯದ ನಿನ್ನ ಹಡೆದವರ ಪರಿಣಾಮವೇನಾಗಿದೆಯೋ ದೇವರೇಬಲ್ಲ. ಒಟ್ಟಿಗೆ, ನಮ್ಮ ಮೇಲೆ ಆಕಾಶವೇ ಹರಿದು ಬಿದ್ದಂತಾಗಿರುತ್ತದೆ. ಈ ಪ್ರಸಂಗದಲ್ಲಿ ದುಃಖಕ್ಕೆ ಅನುವು ಕೊಟ್ಟು ನಾವು ಹುಚ್ಚರಂತೆ ವರ್ತಿಸಿದರೆ, ಮತ್ತಿಷ್ಟು ಅನರ್ಥವು ಒದಗಬಹುದು. ವೈರಿಗಳು ನಮ್ಮ ಗುರುತು ಹಿಡಿಯದಂತೆ ಎಚ್ಚರಪಡತಕ್ಕದ್ದು. ತನ್ನ ತಮ್ಮನಾದ ವೀತಾಶೋಕನೊಡನೆ ನಿನ್ನ ಲಗ್ನ ಮಾಡಬೇಕೆಂದು ಯೋಚಿಸುತ್ತಿದ್ದ ಅಶೋಕರಾಜನ ಕೈಯಲ್ಲಿ ನಾವು ಸಿಕ್ಕರೆ, ಎಷ್ಟು ಅನರ್ಥವಾದೀತೆಂಬದನ್ನು ತಿಳಿದುನೋಡು. ಹಾಗಾದರೆ ನಿನ್ನ ಹಡೆದವರ ಅಭಿಮಾನೋಕ್ತಿಯ ಗೌರವವೇನು ಉಳಿದಂತಾಗುವದು? ನಿಜವಾದ ಕ್ಷತ್ರಿಯ ವೀರರು ಸತ್ಯಪ್ರತಿಜ್ಞರಾಗಲು, ಪ್ರಾಣಕೊಡುವರಲ್ಲದೆ, ರಾಜ್ಯಭೋಗಕ್ಕೆ ಜೋತು ಭ್ರಷ್ಟಪ್ರತಿಜ್ಞರಾಗತಕ್ಕವರಲ್ಲ. ಕಲಿಂಗಭೂಪತಿಯು ರಾಜ್ಯಭ್ರಷ್ಟನಾದರೆ, ಪ್ರಯತ್ನದಿಂದ ತಿರುಗಿ ಆತನು ರಾಜ್ಯವನ್ನು ಸಂಪಾದಿಸಬಹುದು; ಆದರೆ ಬೌದ್ಧರೊಡನೆ ಶರೀರಸಂಬಂಧ ಮಾಡಲಿಕ್ಕಿಲ್ಲೆಂಬ ಪ್ರತಿಜ್ಞಾಭಂಗದಿಂದಾಗುವ ಅಪಮಾನವನ್ನು ಆತನು ತುಂಬಿಕೊಳ್ಳ

ಲಾರನು; ಆದ್ದರಿಂದ, ನೀನು ಬಹಳ ಜಾಗರೂಕಳಾಗಿರತಕ್ಕದ್ದು. ಇನ್ನು ಮೇಲೆ ನೀನು ಸ್ತ್ರೀವೇಷವನ್ನು ತ್ಯಜಿಸಿ ಪುರುಷವೇಷವನ್ನು ಧರಿಸತಕ್ಕದ್ದು. ನಿನ್ನನ್ನು ನಾನು ಇನ್ನು ಪ್ರಣಯಿನಿಯೆಂದು ಕರೆಯದೆ, ಪ್ರತೋದನೆಂದು ಕರೆಯುವೆನು. ಇಳಿಯೆ ಮುಳುಗಿದವರಿಗೆ ಚಳಿಯೇನು ಮಳೆಯೇನು? ದುಃಖೋದಧಿಯಲ್ಲಿ ಮುಳುಗಿಹೋದ ನಾವು, ಕಣ್ಣೀರುಹಾಕಿ ಮಾಡುವದೇನು?—ಚಿಂತೆಯಿಂದ ಕೊರಗಿ ಗಳಿಸುವದೇನು?—ಅಸಮಾಧಾನದಿಂದ ಉಸುರ್ಗಳೆದು ಕಟ್ಟಿಕೊಳ್ಳುವದೇನು? ಬಿಡು. ಮನಸ್ಸನ್ನು ಕಲ್ಲುಮಾಡು. ದುಃಖದ ಚಿಹ್ನವು ಲೇಶವಾದರೂ ಮುಖದಲ್ಲಿ ತೋರಲಾಗದು. ಪಾಟಲಿಪುತ್ರಕ್ಕೆ ಹೋದ ಹೊರತು ನಿನ್ನ ಹಡೆದವರ ಸುದ್ದಿಯು ಗೊತ್ತಾಗುವದಿಲ್ಲವಾದುದರಿಂದ, ನಾವು ಇನ್ನು ಹರಿದ್ವಾರಕ್ಕೆ ಹೋಗದೆ ಪಾಟಲಿಪುತ್ರಕ್ಕೆ ಹೋಗೋಣ. ಘನಶ್ಯಾಮ, ಕಣ್ಣು ಒರಿಸು. ಇದೇ ಏನು ನಿನ್ನ ಪ್ರಸಂಗಾವಧಾನವು! ಹೀಗೆ ಕಣ್ಣೀರು ಹಾಕುತ್ತ ಕಾಲಕಳೆಯುವದಕ್ಕಿಂತ, ಸಾಧುಪುರುಷನಾದ ಉಪಗುಪ್ತನಿಗೆ ಈಗ ಬಂದಿರುವ ವಿಪತ್ತನ್ನು ದೂರಮಾಡಲು ಯತ್ನಿಸುವದು ಭೂಷಣವಲ್ಲವೆ! ದೇವರು ಪರೋಪಕಾರಿಗಳ ಪಕ್ಷಪಾತಿಯು. ಪ್ರತೋದ, ಘನಶ್ಯಾಮ, ಏಳಿರಿ. ಸಜ್ಜನರ ಸೇವೆ ಮಾಡಿ, ಈಶ್ವರ ಕೃಪೆಗೆ ಪಾತ್ರರಾಗೋಣ!

ಈಮೇರೆಗೆ ತಾಯಿಯು ಆಡಿದ ಮಾತುಗಳನ್ನು ಕೇಳಿ, ಪ್ರಣಯಿನಿಯು ಉತ್ಸಾಹಗೊಂಡಳು. ಉಪಗುಪ್ತನನ್ನು ಬಂಧಮುಕ್ತಮಾಡುವ ಮಾರ್ಗವು ಆಕೆಗೆ ಗೊತ್ತಾಯಿತು. ಆಕೆಯು ತನ್ನ ಬಳಿಯಲ್ಲಿ ಗುಪ್ತವಾಗಿ ಇಟ್ಟುಕೊಂಡಿದ್ದ ಪ್ರೀತಿಯ ರತ್ನಹಾರವನ್ನು ಉಪಗುಪ್ತನ ಕೈಯಲ್ಲಿ ಕೊಟ್ಟು—ಸಜ್ಜನನೇ, ಇದನ್ನು ನಿನ್ನ ಸಾವುಕಾರನಿಗೆ ಕೊಟ್ಟು ಋಣಮುಕ್ತನಾಗು, ಅನ್ನಲು, ಉಪಗುಪ್ತನು ಆಶ್ಚರ್ಯಪಟ್ಟು ಅತ್ಯಂತ ವಿನಯದಿಂದ—ತಂಗೀ, ದೇವರು ನಿನ್ನ ಕಲ್ಯಾಣಮಾಲಿ, ನೀನು ಚಕ್ರವರ್ತಿಯ ಹೆಂಡತಿಯಾಗು. ಬೇಡಮ್ಮಾ, ಕೂಸಾದ ನೀನು ಅತಿಥಿಯಾಗಿ ಬಂದು ನಿನ್ನ ನೆಲೆಯಿಲ್ಲದ ಔದಾರ್ಯದಿಂದ ನನ್ನ ಸತ್ವಹರಣಮಾಡಬೇಡ. ನನ್ನ ದೇಹವನ್ನು ಮಾರಿಯಾದರೂ ಋಣವನ್ನು ತೀರಿಸುವೆನು; ಅದು ಆಗದಿ

ದ್ದರೆ ಋಣಮುಕ್ತತೆಗಾಗಿ ಪುನರ್ಜನ್ಮವನ್ನು ತಾಳುವೆನು ನಿನ್ನ ಉಜ್ವಲವಾದ ಪರೋಪಕಾರ ಗುಣವನ್ನು ನೋಡಿ, ನಾನು ಧನ್ಯನಾದೆನು. ಹಿರಿಯರ ಪುಣ್ಯದಿಂದಲೇ ನಿನ್ನಂಥ ಸಜ್ಜನರ ಸಂದರ್ಶನವು ನನಗೆ ಆಯಿತು, ಎಂದು ನುಡಿದು, ತನ್ನ ಹೆಂಡತಿಗೆ ಹೇಳತಕ್ಕ ಮಾತುಗಳನ್ನು ಹೇಳಿ, ಅತಿಥಿಗಳ ಯೋಗಕ್ಷೇಮಕ್ಕಾಗಿ ಆಕೆಯನ್ನು ಎಚ್ಚರಗೊಳಿಸಿ, ತಾನು ಸರಕಾರಿಯ ಅಧಿಕಾರಿಗಳ ಸ್ವಾಧೀನವಾಗಿ ಹೊರಟುಹೋದನು. ಇತ್ತ ಸತ್ವಶೀಲಳಾದ ಉಪಗುಪ್ತನ ಹೆಂಡತಿಯು, ಪತಿಯ ವಿಯೋಗಕ್ಕಾಗಿ ಮನಸ್ಸಿನಲ್ಲಿ ಅಸಮಾಧಾನಪಟ್ಟರೂ, ಪತಿಯ ಆಜ್ಞೆಯಂತೆ ಹೊರಗೆ ಸಮಾಧಾನವನ್ನು ಪ್ರಕಟಿಸುತ್ತ ಅತಿಥಿಗಳಾದ ಇಂದುಮತಿಯೇ ಮೊದಲಾದವರ ಉದರ-ಸತ್ಕಾರದಲ್ಲಿ ತೊಡಗಿದಳು. ಬಕುಲೆಯ ಈ ತಾಳ್ಮೆಯನ್ನೂ, ದೊಡ್ಡ ಮನಸ್ಸನ್ನೂ ನೋಡಿ ಇಂದುಮತಿಯೂ, ಪ್ರಣಯಿನಿಯೂ ಆಶ್ಚರ್ಯಪಟ್ಟರು. ಆಗ ಚಿಕ್ಕವಳಾದ ಪ್ರಣಯಿನಿಯು ಮನಸ್ಸಿನೊಳಗೆ— “ ಅತಿಥಿಗಳ ಸತ್ಕಾರದಲ್ಲಿ ಇಷ್ಟು ಜಾಗರೂಕರಾಗಿದ್ದ ಈ ದಂಪತಿಗಳ ಪವಿತ್ರಾನ್ನವನ್ನು ಎರಡು ದಿನ ಉಂಡ ನನಗೆ, ನನ್ನ ಅಣ್ಣನಾದ ಜಿತೇಂದ್ರನನ್ನು ಉಳಿಸಿಕೊಳ್ಳುವ ಹಂಚಿಕೆಯು ಗೊತ್ತಾಗಬಾರದೆ? ನಾನು ಎಂಥ ಪಾಪಿಯು! ನನ್ನ ಕಾಲಲ್ಲಿ ಅಪ್ಪನು ರಾಜ್ಯಭ್ರಷ್ಟನಾದನು. ಆತನು ಯುದ್ಧದಲ್ಲಿ ಮರಣಹೊಂದಿದ್ದರಂತೂ ಅನರ್ಥವೇ ಆಯಿತು. ಆತನು ಅಶೋಕನ ಸೆರೆಯಾಳಾಗಿದ್ದರೆ, ಕಾರಾಗೃಹದಲ್ಲಿ ಕೊಳೆಯಬೇಕಾಗುವದು. ಈ ಸ್ಥಿತಿಯಲ್ಲಿ ಅಣ್ಣನಾದ ಜಿತೇಂದ್ರನೂ ಸೆರೆಯಾಳಾದರೆ ತೀರಿಯೇ ಹೋಯಿತು. ಈ ಪ್ರಸಂಗದಲ್ಲಿ ನಾನು ಅಣ್ಣನನ್ನು ಉಳಿಸದಿದ್ದರೆ, ನಾನು ತಂದೆಯ ಕುಲಕ್ಕೆ ಕಂಟಕಳಾಗಿ ಜನಿಸಿದಂತಾಗುವದು. ಅಯ್ಯಯ್ಯಾ! ಏನು ನನ್ನ ಕೆಟ್ಟಬಾಳು, ಎಂದು ಚಿಂತಿಸುವಾಗ ಆಕೆಯ ಕಣ್ಣುಗಳು ನೀರಿನಿಂದ ತುಂಬಿ, ಕುತ್ತಿಗೆಯ ನರಗಳು ಬಿಗಿದವು; ಆದರೆ ಮಾತ್ರಾಜ್ಞಾಪಾಲಕಳಾದ ಆ ಸುಶೀಲೆಯು ಕಣ್ಣೀರ ಒಂದು ಹನಿಯನ್ನು ಕೂಡ ತಟಕಿಕ್ಕಗೊಡದೆ, ದುಃಖವನ್ನು ಕಷ್ಟದಿಂದ ನುಂಗಿಕೊಂಡಳು. ಹೀಗೆ ಆಕೆಯು ದುಃಖಪೀಡಿತಳಾಗಿ, ಸುಮ್ಮನೆ ಕುಳಿತು ಯೋಚಿಸುತ್ತಿರಲು, ಒಮ್ಮಿಂದೊಮ್ಮೆ ಆಕೆಗೆ ಒಂದು ಯುಕ್ತಿಯು ತೋಚಿ, ಆಕೆಯ

ಮುಖವು ಪ್ರಸ್ಫುಲ್ಲಿತವಾಯಿತು. ಆನಂದದ ಭರದಲ್ಲಿ ಆಕೆಯು ತನ್ನ ಯುಕ್ತಿಯನ್ನು ಕುರಿತು ಆಲೋಚಿಸಿ ಬಹು ಸಮಾಧಾನಪಟ್ಟು, ಕೂಕಲೆ ಎದ್ದು ಹೋಗಿ ಪುರುಷವೇಷದಿಂದ ತಾಯಿಯ ಮುಂದೆ ತಟ್ಟನೆ ಬಂದು ನಿಂತುಕೊಂಡಳು. ವಿಚಾರಮಗ್ನಳಾದ ಇಂದುಮತಿಯು ಪುರುಷವೇಷಧಾರಿಯಾದ ಪ್ರಣಯಿನಿಯನ್ನು ಒಮ್ಮೆಲೆ ನೋಡಿ, ಜಿತೇಂದ್ರನೇ ಬಂದನೆಂಬ ಭ್ರಾಂತಿಯಿಂದ— "ಬಾಳಾ, ಜಿತೇಂದ್ರಾ, ಬಾ ಇತ್ತ ಬಾ, ನನಗೆ ದೃಢವಾದ ಆಲಿಂಗನವನ್ನು ಕೊಡು. ದುಷ್ಟ ಬೌದ್ಧರ ಕಣ್ಣು ತಪ್ಪಿಸಿ, ಈ ಹತಭಾಗ್ಯಳನ್ನು ಸಮಾಧಾನಪಡಿಸುವದಕ್ಕಾಗಿ, ನನ್ನ ಪೂರ್ವಜರ ಪುಣ್ಯದಿಂದಲೇ ನೀನು ಪ್ರಾಪ್ತನಾಗಿರುತ್ತಿ;" ಎಂದು ನುಡಿದು, ಪ್ರಣಯಿನಿಯನ್ನು ಗಟ್ಟಿಯಾಗಿ ಅಪ್ಪಿಕೊಂಡು ಚುಂಬಿಸಿದಳು. ಅತ್ತ ಘನಶ್ಯಾಮನು, ಜಿತೇಂದ್ರನ ಅಕಲ್ಪಿತ ಆಗಮನವಾಯಿತೆಂದು ಸಂತೋಷಬಟ್ಟನು



## ೮ನೆಯ ಪ್ರಕರಣ, ಬಕುಲೆಯ ನಿಶ್ಚಯ.



ಈಮೇರೆಗೆ ಇಂದುಮತಿಯು ಮಗನನ್ನು ಅಪ್ಪಿಕೊಳ್ಳಲು, ಜಿತೇಂದ್ರನ ಶರೀರಕಾಠಿಣ್ಯವೂ, ಆತನ ಮಾತೃಸಂದರ್ಶನಾನಂದಬಾಷ್ಪಗಳ ಸ್ರಾವವೂ ಆಕೆಯ ಅನುಭವಕ್ಕೆ ಬಾರದ್ದರಿಂದ, ಆ ವೀರಮಾತೆಯು ಶಂಕಿತಳಾದಳು. ಅಷ್ಟರಲ್ಲಿ ಪ್ರಣಯಿನಿಯು ಮುಗುಳುನಗೆಯಿಂದ ನಗುತ್ತ ತಾಯಿಯನ್ನು ಕುರಿತು—ಅವ್ವಾ, ಶಂಕಿಸಬೇಡ; ಅಣ್ಣನಾದ ಜಿತೇಂದ್ರನ ಭೆಟ್ಟಿಯಾಗಲಿಲ್ಲೆಂದು ಅಸಮಾಧಾನಪಡಲೂ ಬೇಡ. ನಾನು ಇನ್ನು ಸ್ವಲ್ಪ ದಿನಗಳಲ್ಲಿ ನಿನಗೆ ಅಣ್ಣನ ಭೆಟ್ಟಿಯನ್ನು ಮಾಡಿಸುವೆನು. ಕಲಿಂಗರಾಜವಂಶದ ಅದೊಂದೇ ಅಂಕುರವು ಉಳಿದಿರುವದರಿಂದ, ಅದನ್ನು ನಾವೆಲ್ಲರೂ ಬಹು ಜಾಗರೂಕತೆಯಿಂದ ರಕ್ಷಿಸತಕ್ಕದ್ದು. ನನ್ನ ರೂಪವು ಅಣ್ಣನ ರೂಪವನ್ನು ಅಚ್ಚಳಿ

ಯದೆ ಹೋಲುತ್ತದೆಂಬದನ್ನು ನೀನು ಮನಗಂಡೆಯಷ್ಟೇ? ನೀನು ಈಗಲೆ ನನ್ನನ್ನು ರಾಜದೂತರಿಗೆ ಒಪ್ಪಿಸಿಬಿಡು, ಅಂದರೆ ಅಣ್ಣನ ಶೋಧದಕಾರ್ಯವು ನಿಂತುಹೋಗಿ, ಪರಿಪಕ್ವಕಾಲವು ಒದಗುವವರೆಗೆ ಆತನು ಎಲ್ಲಿಯಾದರೂ ಸುರಕ್ಷಿತವಾಗಿ ಇರುವನು. ಜನನಿ, ಇದರಿಂದ ಸ್ವಾರ್ಥವು ಸಾಧಿಸುವದಲ್ಲದೆ, ನನ್ನನ್ನು ಹುಡುಕಿಕೊಟ್ಟದ್ದಕ್ಕಾಗಿ ಅಶೋಕರಾಜನಿಂದ ನಿನಗೆ ಉಚಿತವಾಗಿ ದೊರೆಯುವ ಹತ್ತುಸಾವಿರ ಹೊನ್ನುಗಳನ್ನು ಈ ಸಾಧ್ವಿಗೆ ಕೊಟ್ಟರೆ ಪರಾರ್ಥವೂ ಸಾಧಿಸುವದು. ಹೀಗೆ ಸ್ವಾರ್ಥಪರಾರ್ಥಸಾಧನಕ್ಕೆ ಕಾರಣವಾಗುವ ಈ ನನ್ನ ದೇಹವು ಹುಟ್ಟಿ ಸಾರ್ಥಕವಾದಂತಾಗುವದಲ್ಲವೆ? ಇಂಥ ಪವಿತ್ರ ದೇಹವು ಉತ್ಪನ್ನವಾದ ನಿನ್ನ ಹೊಟ್ಟೆಯು ತಣ್ಣಗಾಗಿ, ನೀನೂ ಧನ್ಯಳಾಗಬಹುದು. ವೀರಪತ್ನಿಯೇ, ಶಂಕಿಸಬೇಡ. ತಂದೆಯಾದ ಮೃಗೇಂದ್ರನ ಇಚ್ಛೆಗೆ ವಿರುದ್ಧವಾಗಿ ಅಶೋಕನು ವರ್ತಿಸುವ ಪ್ರಸಂಗವೊದಗಿದಲ್ಲಿ, ಇಗೋ, ಈ ಕರಾರಿಯ ಸಹಾಯವು ನನಗಿರುತ್ತದೆಂಬದನ್ನು ನೆನಿಸಿ ಸಮಾಧಾನಪಡು. ನಾನು ಹೀಗೆ ಮಾಡಿದ್ದನ್ನು ಕೇಳಿ ತಂದೆಯಾದ ಮೃಗೇಂದ್ರನು— “ ನನ್ನ ಮಗಳು ಕಲಿಂಗರಾಜವಂಶವನ್ನು ರಕ್ಷಿಸಿ, ಸತ್ಪುರುಷನು ಬಂಧವಿಮೋಚನೆಮಾಡಿ, ವೀರಕ್ಷತ್ರಿಯ ರಾಜಪುತ್ರಿಯ ಶೀಲಕ್ಕೆ ಒಪ್ಪಬಹುದಾದ ಕೃತಿಯಿಂದ ಕಲಿಂಗರಾಜವಂಶದ ಮಾನಕಾಯ್ದಳೆಂಬದನ್ನು ಸ್ಮರಿಸಿ ಸಂತೋಷಪಡುವನು ” ಎಂದು ನುಡಿದು, ಪುರುಷವೇಷಧಾರಿಯಾದ ಪ್ರಣಯಿನಿಯು ತಾಯಿಯ ಮೋರೆಯನ್ನು ಆತುರದಿಂದ ನೋಡುತ್ತ, ಎಲ್ಲಿ ತನ್ನಮಾತಿಗೆ ಪ್ರತಿಕೂಲವಾಗಿ ತಾಯಿಯು ನುಡಿಯುವಳೋ ಎಂದು ತಳಮಳಿಸುತ್ತ ನಿಂತುಕೊಂಡಳು. ಮೊದಲೇ ಸಾಧ್ವಿಯಾದ ಇಂದುಮತಿಯ ವೃತ್ತಿಯು ಉಜ್ವಲವಾದದ್ದು, ಅದರಮೇಲೆ ಉಪಗುಪ್ತನಂಥ ಸತ್ಪುರುಷನ ನಿಸ್ಪೃಹತೆಯ ತೇಜಸ್ಸು ಬಿದ್ದಬಳಿಕ ಕೇಳುವದೇನು? ಆಕೆಯು ಆವೇಶದಿಂದ ಮಗಳನ್ನು ಕುರಿತು—ತಂಗೀ, ನನ್ನ ಹೊಟ್ಟೆಯಲ್ಲಿ ಹುಟ್ಟಿದವಳಲ್ಲಿಯಲ್ಲದೆ ಅನ್ಯರಲ್ಲಿ ಇಂಥ ಸತ್ವವು ಹೇಗೆ ಕಂಡುಬಂದೀತು! ನಡೆ, ಈಗಲೆ ಘನಶ್ಯಾಮನು ನಿನ್ನನ್ನು ರಾಜದೂತರಿಗೆ ಒಪ್ಪಿಸಿ ಉಚಿತವನ್ನು ಪಡೆಯುವನು, ಎಂದು ನುಡಿದು, ಮಗಳನ್ನು ಆಲಿಂಗಿಸಿ ಆಕೆಯನ್ನು ಘನಶ್ಯಾಮ

ನೊಡನೆ ರಾಜದೂತರಕಡೆಗೆ ಕಳುಹಿದಳು. ಜಿತೇಂದ್ರನ ಗುರುತು ಹಿಡಿಯು ವವನೊಬ್ಬನು ರಾಜದೂತರ ಬಳಿಯಲ್ಲಿದ್ದನು. ಆತನು ಪ್ರಣಯಿನಿಯನ್ನು ಜಿತೇಂದ್ರನೆಂದು ಒಪ್ಪಿಕೊಳ್ಳಲು, ಘನಶ್ಯಾಮನಿಗೆ ಹತ್ತುಸಾವಿರ ಹೊನ್ನು ಗಳು ದೊರೆತು, ಪ್ರಣಯಿನಿಯು ರಾಜದೂತರ ಕೈಸೇರಿದಳು.

ಇಂದುಮತಿಯು ಎಂಥ ಸತ್ವಸ್ಥಳಾದರೂ, ಮಗಳ ವಿಯೋಗದಿಂದ ಆಕೆಯ ಮನಸ್ಸು ಅಸಮಾಧಾನಪಡದೆ ಇರಲಿಲ್ಲ. ಅಕೆಯು ತನ್ನ ಅಸಮಾ ಧಾನವನ್ನು ಹೊರಗೆ ತೋರಗೊಡದೆ ಬಕುಲಾದೇವಿಯ ಬಳಿಗೆಹೋಗಿ ವಿನಯದಿಂದ—ಅಮ್ಮಾ ಸಾಧ್ವಿಯೇ, ಸತ್ಪುರುಷನಾದ ನಿನ್ನ ಪತಿಯನ್ನು ಈ ಧನಕೊಟ್ಟು ಬಿಡಿಸಿಕೊಂಡುಬಂದು ನಮ್ಮನ್ನು ಕೃತಾರ್ಥರನ್ನಾಗಿ ಮಾಡು. ದುಡ್ಡಿನ ಆಶೆಯಿಂದಲ್ಲ, ಪತಿಯಮೇಲಿನ ಭಕ್ತಿಯಿಂದ ಈ ಧನ ವನ್ನು ನೀನುಸ್ವೀಕರಿಸು, ಎಂದು ಹೇಳಿಕೊಂಡಳು. ಆಗ ಬಕುಲೆಯು ಸಂತೋ ಷಪಡುತ್ತ ಧನವನ್ನು ಸ್ವೀಕರಿಸಿ ಅವುಗಳೊಳಗಿನ ಎರಡುಸಾವಿರ ಹೊನ್ನನ್ನು ಸಾವುಕಾರನಿಗೆ ಕೊಟ್ಟು, ಪತಿಯನ್ನು ಬಿಡಿಸಿಕೊಂಡು ಬಂದಳು. ತನ್ನ ಮೇಲೆ ಇಂಥ ಉಪಕಾರಮಾಡಿದ ಪುಣ್ಯವಂತನು ಯಾವನಿರಬಹುದೆಂಬದರ ಗೂಢವು ಉಪಗುಪ್ತನಿಗೆ ತಿಳಿಯದಾಯಿತು. ಮನೆಗೆ ಬಂದಬಳಿಕ ಆತನು ಹೆಂಡತಿಯನ್ನು ಕೇಳಲು, ಆಕೆಯು ಯಾವತ್ತು ವೃತ್ತಾಂತವನ್ನು ಹೇಳಿ, ಉಳಿದಿದ್ದ ಎಂಟು ಸಾವಿರ ಹೊನ್ನಿನ ಚೀಲವನ್ನು ಪತಿಗೆ ತೋರಿಸಿದಳು. ಆಗ ಉಪಗುಪ್ತನು ತನ್ನ ಹೆಂಡತಿಯನ್ನು ಸಿಟ್ಟಿನಿಂದ ಒಮ್ಮೆ ನೋಡಿದನು. ಆತನು ತನ್ನ ಆಯುಷ್ಯದಲ್ಲಿ ಹೆಂಡತಿಯನ್ನು ಸಿಟ್ಟಿನಿಂದ ನೋಡಿದ್ದು ಇದೇ ಮೊದಲು. ಆ ಸಿಟ್ಟಿನ ನೋಟವು ಇನ್ನುಮೇಲೆ ಕಡೆಯದೆಂತಲೇ ಹೇಳ ಬಹುದು; ಯಾಕಂದರೆ, ಅಕ್ರೋಧನಾದ ಆ ಪುಣ್ಯವಂತನು, ಮುಂದೆ ಮರ ಣಪರ್ಯಂತವಾಗಿ ಹೆಂಡತಿಯನ್ನು ಕ್ರೋಧದಿಂದ ನೋಡುವ ಪ್ರಸಂಗ ವನ್ನೇ ತಪ್ಪಿಸಿಕೊಂಡು ಬಿಟ್ಟನು. ಉಪಗುಪ್ತನು ಈಮೇರೆಗೆ ಹೆಂಡತಿ ಯನ್ನು ಕ್ರೋಧಪೂರ್ಣದೃಷ್ಟಿಯಿಂದ ಒಮ್ಮೆನೋಡಿ, ಅದಕ್ಕೂ ಹೆಚ್ಚಿನ ಕ್ರೋಧದಿಂದ ಹೊನ್ನಿನಚೀಲವನ್ನು ನೋಡಿ, ಅದನ್ನು ಹುಲ್ಲಿಗೆ ಸರಿ ಮಾಡಿ ಕಾಲಿನಿಂದ ಒದ್ದು ಹೆಂಡತಿಗೆ—ಬಕುಲ, ನೀನು ಇಂದು ಬಹಳ

ಅಯೋಗ್ಯಕಾರ್ಯವನ್ನು ಮಾಡಿವೆ. ಇಷ್ಟು ದಿನ ನನ್ನ ಸಹವಾಸದಲ್ಲಿದ್ದರೂ, ನನ್ನ ಸ್ವಭಾವದ ಗುರುತು ನಿನಗೆ ಆಗಲಿಲ್ಲ. ನನ್ನ ಚರಿತ್ರಕ್ಕೆ ಕಲಂಕವನ್ನುಂಟುಮಾಡುವಂಥ ಕಾರ್ಯವು ನಿನ್ನಿಂದಾಯಿತು. ಈ ಪಾಪದ ಪರಿಮಾರ್ಜನವನ್ನು ನನಗೆ ಸಂಸಾರದಲ್ಲಿದ್ದು ಮಾಡಿಕೊಳ್ಳಲಿಕ್ಕೆ ಬರುವಹಾಗಿಲ್ಲ. ಸಂಪತ್ತಿನಮೇಲೆ ಅಷ್ಟು ಲೋಭವಿದ್ದರೆ, ತಂದೆಯು ಅಪಾರವಾದ ಸಂಪತ್ತನ್ನು ದಾನಧರ್ಮದಲ್ಲಿ ನೀರಿನಂತೆ ಯಾಕೆ ವೆಚ್ಚಮಾಡುತ್ತಿದ್ದೆನು? ವಾಸದತ್ತೆಯು ಮರಣಕಾಲದಲ್ಲಿ ತನ್ನ ಸಂಪತ್ತನ್ನೆಲ್ಲ ಕೊಡಲಿಚ್ಛಿಸಿದರೂ ನಾನು ಅದನ್ನು ಯಾಕೆ ನಿರಾಕರಿಸಿದ್ದೇನು? ನಿನ್ನ ಸಮಕ್ಷ ಪ್ರಣಯಿನೀದೇವಿಯು ತನ್ನ ಹಾರವನ್ನು ಸ್ವೀಕರಿಸಲು ಪ್ರಾರ್ಥಿಸುವಾಗ ಅದಕ್ಕೆ ನಾನು ಒಪ್ಪದೆ ಸಾವುಕಾರನ ಸ್ವಾಧೀನಕ್ಕೆ ಯಾಕೆ ಹೋದೆನು? ಈ ಸಂಗತಿಗಳನ್ನು ಕುರಿತು ಸ್ವಲ್ಪವಾದರೂ ವಿಚಾರಿಸಿದ್ದರೆ, ಇಂಥ ನಿಂದ್ಯಕಾರ್ಯವನ್ನು ಮಾಡಲಿಕ್ಕೆ ನೀನು ಪ್ರವೃತ್ತಳಾಗುತ್ತಿದ್ದಿಲ್ಲ. ಎಂಥ ಅವಿವೇಕತನವಿದು!

ಪತಿಯ ಈ ಮಾತನ್ನು ಕೇಳಿ ಬಕುಲೆಯು ಬಿಕ್ಕಿಬಿಕ್ಕಿ ಅಳುತ್ತ— ಸ್ವಾಮಿ, ನಾನು ಸಂಪತ್ತಿಯ ಆಶೆಯಿಂದ ಈ ಕಾರ್ಯವನ್ನು ಮಾಡಿದವಳಲ್ಲ, ತಮ್ಮ ಮೇಲಿನ ಪ್ರೇಮದ ಮೂಲಕವಾಗಿ ಇಂಥ ನಿಂದ್ಯವಾದ ಕಾರ್ಯವು ನನ್ನ ಕೈಯಿಂದಾಯಿತು.

ಉಪಗುಪ್ತ—ಮನೆಗೆ ಬಂದ ಅತಿಥಿಗಳ ದುಡ್ಡನ್ನು ಸ್ವೀಕರಿಸಲಿಕ್ಕೆ ಆಸ್ಪದಕೊಡುವ ನಿನ್ನ ಪ್ರೇಮವು ತಿರಸ್ಕರಿಸತಕ್ಕದ್ದೇಸರಿ. ಬಕುಲೆ, ಮಗಧದ ಅರಸುಮನೆತನದವರು ಕಲಿಂಗದ ಅರಸುಮನೆತನದವರನ್ನು ಎಷ್ಟು ದ್ವೇಷಿಸುತ್ತಾರೆಂಬದನ್ನು ನೀನು ಅರಿಯೆ. ಮಗಧಾಧಿಪತಿಗಳು ಭಗವಾನ್ ಬುದ್ಧನ ಅನುಯಾಯಿಗಳೆನಿಸಿಕೊಳ್ಳುತ್ತಾರೆ; ಆದರೆ ಅವರ ಕೃತಿಗಳುಮಾತ್ರ ರಾಕ್ಷಸಕೃತಿಗಳಾಗಿರುವವು. “ ಅಹಿಂಸಾಪರಮೋಧರ್ಮಃ ” ಎಂಬ ಅಂತಿಮ ಸಾಧ್ಯದ ಪ್ರಸಾರವನ್ನು ಈ ಮಗದಾಧಿಪತಿಗಳು, ಲಕ್ಷಾವಧಿ ಮನುಷ್ಯಸಂಹಾರವನ್ನು ಮಾಡಿ ಜಗತ್ತಿನಲ್ಲಿ ಮಾಡುತ್ತಿರುವರು! ಹಾಯ್ ಹಾಯ್! ಬೌದ್ಧಧರ್ಮದ ತತ್ವಗಳಲ್ಲಿ ಇಷ್ಟರಮಟ್ಟಿಗೆ ಅವರ ನಿಷ್ಠೆಯಿರುತ್ತದೆ! ! ಕಪಟಪ್ರಬಂಧದಲ್ಲಂತು ಜಗತ್ತಿನೊಳಗಿನ ಯಾವತ್ತು ರಾಷ್ಟ್ರಗಳಲ್ಲಿ ಮಗಧವು ಮುಂದಾ

ಗಿರುತ್ತದೆ. ಸಂಪುಷ್ಪಾಚಾರ್ಯನಂಥ ದುಷ್ಟಭಿಕ್ಷುವು, ತನ್ನಂಥ ನೀಚ ಭಿಕ್ಷುಗಳ ಗುಂಪನ್ನು ಕೂಡಿಕೊಂಡು ಮಗಧದ ರಾಜ್ಯಕಾರಭಾರವನ್ನು ನಡಿಸುತ್ತಿರುವನು ಇಂಥವರ ಕೈಯಲ್ಲಿ ಯುವರಾಜನಾದ ಜಿತೇಂದ್ರನು ಸಿಕ್ಕರೆ, ಆತನಮೇಲೆ ಏನಾದರೂ ತಪ್ಪು ಹೊರಿಸಿ ಹಗಲುಹಾಡೇ ಆತನ ತಲೆ ಹೊಡಿಸಲಿಕ್ಕೆ ಆ ದುಷ್ಟರು ಹಿಂದುಮುಂದು ನೋಡುವಹಾಗಿಲ್ಲ! ಆದರೆ ಬಕುಲ, ನೀನು ಇದೇನು ಕೆಲಸವನ್ನು ಮಾಡಿಇಟ್ಟೆ! ರಾಜಪುತ್ರನಕೊಲೆಗೆ ಕಾರಣವಾದ ಈ ದುಡ್ಡನ್ನು ನೀನು ಸ್ವೀಕರಿಸಬಹುದೆ! !

ಬಕುಲ—ಸ್ವಾಮಿ, ಹೀಗೆ ನನ್ನಮೇಲೆ ರುಷ್ಟರಾಗಬಾರದು, ಈ ಅಪರಾಧವು ನನ್ನ ಕೈಯಿಂದ ಅಜ್ಞಾನಮೂಲವಾಗಿ ಘಟಿಸಿರುತ್ತದೆ. ಯುವರಾಜನು ಇಂಥ ಆಪತ್ತಿಗೆ ಗುರಿಯಾದಾನೆಂಬದು ನನಗೆ ಆಗ ಗೊತ್ತಾಗಲಿಲ್ಲ. ಗೊತ್ತಾಗಿದ್ದರೆ ಧನವನ್ನು ನಾನು ಎಂದೂ ಸ್ವೀಕರಿಸುತ್ತಿದ್ದಿಲ್ಲ.

ಇಂದುಮತಿ—ಶ್ರೇಷ್ಠಿಯೇ, ಇದರಲ್ಲಿ ಬಕುಲಾದೇವಿಯ ಅಪರಾಧವೇನೂ ಇರುವದಿಲ್ಲ. ಯುವರಾಜನು ತಾನಾಗಿಯೇ ಶತ್ರುಗಳ ವಶವಾಗುವಾಗುವವನಿದ್ದನು, ಆದ್ದರಿಂದ ನಾವು ಆತನನ್ನು ಶತ್ರುಗಳಿಗೆ ಒಪ್ಪಿಸಿ ಉಚಿತವನ್ನು ಪಡೆದು, ಆಪತ್ಸಹಾಯವೆಂದು ಅದನ್ನು ಬಕುಲಾದೇವಿಗೆ ಆಗ್ರಹದಿಂದ ಕೊಟ್ಟೆವು.

ಉಪಗುಪ್ತ—ನೀವು ಯುವರಾಜನೊಡನೆ ಗುಪ್ತರೀತಿಯಿಂದ ಪ್ರವಾಸಮಾಡುತ್ತಿರುವದರಿಂದ, ಹಲವು ಬಗೆಯಾಗಿ ಯುವರಾಜನನ್ನು ರಕ್ಷಿಸುವದು ನಿಮ್ಮ ಕರ್ತವ್ಯವಾಗಿತ್ತು. ಹೀಗಿದ್ದು, ಯುವರಾಜನನ್ನು ಶತ್ರುಗಳ ಸ್ವಾಧೀನವಾಗ ಗೊಟ್ಟರೆಂದಬಳಿಕ, ನಿಮ್ಮ ಹೃದಯವು ರಕ್ತಮಾಂಸಗಳಿಂದ ರಚಿಸಲ್ಪಟ್ಟಿರದೆ, ಕಲ್ಲಿನಿಂದ, ಇಲ್ಲವೆ ಉಕ್ಕಿನಿಂದ ರಚಿಸಲ್ಪಟ್ಟಿರುವದೆಂದು ನನಗೆ ತೋರುವದು ಯುವರಾಜನು ಪ್ರಬುದ್ಧನಲ್ಲ, ತರುಣನು. ಬುದ್ಧಿವಾದಹೇಳಿ ಆತನ ಮನಸ್ಸನ್ನು ನೀವು ತಿರುಗಿಸಬೇಕಾಗಿತ್ತು. ಹಾಗೆ ಮಾಡದೆಯಿದ್ದದ್ದು ನಿಮ್ಮ ಅಪರಾಧವು.

ಈಮೇರೆಗೆ ನುಡಿದ ಉಪಗುಪ್ತನ ಮಾತುಗಳನ್ನು ಕೇಳಿ ಇಂದುಮತಿಗೆ ಬಹಳ ಅಸಮಾಧಾನವಾಯಿತು. ಉಪಗುಪ್ತನಿಗೆ ನಿಜವಾದ ಸಂಗತಿಯು

ತಿಳಿಯುದ್ದರಿಂದ ಹೀಗೆ ಮಾತಾಡುವನೆಂದು ಆಕೆಯು ತಿಳಿದರೂ, ದುಷ್ಟಬೌದ್ಧರ ಕೈಯಲ್ಲಿ ಸಿಕ್ಕಮಗಳ ಗತಿಯು ಏನಾಗುವದೋ ಎಂದು ಆಕೆಯು ಚಿಂತಿಸತೊಡಗಿದಳು. ತಾನು ಹಿಂದುಮುಂದು ವಿಚಾರಮಾಡದೆ ತಟ್ಟನೆ ಮಗಳನ್ನು ಕಳಿಸಿದ್ದು ನೆಟ್ಟಗಾಗಲಿಲ್ಲೆಂದು ಆಕೆಯು ಪಶ್ಚಾತ್ತಾಪಪಡಹತ್ತಿದಳು. ಅತ್ತ ಬಕುಲೆಯ ಹೃದಯವೂ ಪಶ್ಚಾತ್ತಾಪದಿಂದ ದಗ್ಧವಾಗತೊಡಗಿತ್ತು. ಒಂದು ಕಡೆಯಲ್ಲಿ ಘನಶ್ಯಾಮನೂ ಪಶ್ಚಾತ್ತಾಪದಿಂದ ತಳಮಳಿಸಹತ್ತಿದನು ಆಗ ಉಪಗುಪ್ತನು ಕ್ಷಣಮಾತ್ರ ವಿಚಾರಮಾಡಿ ಅವರೆಲ್ಲರನ್ನು ಕುರಿತು—ಆಗಲಿ, ಹೀಗೆಯೇ ನಿಮ್ಮ ಅಂತಃಕರಣಗಳು ಪಶ್ಚಾತ್ತಾಪದಿಂದ ದಗ್ಧವಾಗಲಿ. ನಿಮ್ಮಿಂದಾದ ಪಾಪವು ಭಯಂಕರವಾಗಿರುತ್ತದೆ. ಅದು ಸುಟ್ಟು ಭಸ್ಮವಾಗಬೇಕಾದರೆ ನಿಮಗೆ ಅತ್ಯಂತ ತೀವ್ರ ಪಶ್ಚಾತ್ತಾಪವಾಗುವದು ಅವಶ್ಯವಾಗಿರುತ್ತದೆ. ಬಕುಲ, ಪರಿಭ್ರಮಣರೂಪವಾದ ಈ ಸಂಸಾರವನ್ನು ಕಾಲಿನಿಂದ ಒದೆಯಲಿಕ್ಕೆ ಇದು ತಕ್ಕ ಸಮಯವಾಗಿದೆ. ನಾನು ಇಂದಿಲ್ಲ, ಇನ್ನು ನಾಲ್ಕು ತಿಂಗಳಲ್ಲಿ ಸಾವುಕಾರನಿಂದ ಬಿಡುಗಡೆ ಹೊಂದಿ ಬರುತ್ತಿದ್ದೆನು; ಆದರೆ ಸಾಂಸಾರಿಕ ಪ್ರೇಮದಲ್ಲಿ ಮುಳುಗಿಹೋಗಿದ್ದ ನಿನ್ನ ದುರ್ಬಲ ಮನಸ್ಸು, ಅಷ್ಟು ವಿರಹವನ್ನು ಸಹಿಸಲಿಕ್ಕೂ ಸಮರ್ಥವಾಗಲಿಲ್ಲ. ಸಂಸಾರದ ವ್ಯಾಪವು ಬೆಳೆದಂತೆ ಮನಸ್ಸು ಹೆಚ್ಚು ಹೆಚ್ಚು ಬಲಹೀನವಾಗುತ್ತ ಹೋಗುವದು; ಆದ್ದರಿಂದ ಬಕುಲ, ಬೇಗನೆ ಜಾಗರೂಕಳಾಗು.

ಪತಿಯ ಈ ಮಾತುಗಳನ್ನು ಕೇಳಿ ಬಕುಲೆಯು ಕಣ್ಣುಒರಿಸಿಕೊಂಡು ಪ್ರೇಮಲದೃಷ್ಟಿಯಿಂದ ಪತಿಯನ್ನು ನಖಶಿಖಾಂತವಾಗಿ ನೋಡಿದಳು. ಆಕೆಯ ಬಾಡಿದ ಮೋರೆಯಲ್ಲಿ ನಿಶ್ಚಯದ ಚಿಹ್ನವು ತೋರಹತ್ತಿತು. ಆಕೆಯ ದೇಹದಲ್ಲಿ ಒಂದು ಅದ್ಭುತವಾದ ಶಕ್ತಿಯು ಪ್ರವೇಶಿಸಿತು. ಈವೊತ್ತಿನವರೆಗೆ ಉಪಗುಪ್ತಶ್ರೇಷ್ಠಿಯು ಆಕೆಗೆ ಮಾಡುತ್ತಬಂದಿದ್ದ ಉಪದೇಶವು, ಇಂದು ಫಲಿಸುವದಾಯಿತು. ಆಕೆಯು ಕೂಡಲೆ ಮಧುರವಾದ ಶಬ್ದಗಳಿಂದ ಪತಿಯನ್ನು ಕುರಿತು ನಿಶ್ಚಯಪೂರ್ವಕವಾಗಿ—

ಬಕುಲ—ಸ್ವಾಮಿ, ಹೌದು, ನಾನು ಎಚ್ಚತ್ತೆನು.

ಉಪಗುಪ್ತ—ನೆಟ್ಟಗೆ ವಿಚಾರಮಾಡಿನೋಡು. ನೀನು ಪೂರ್ಣವಾಗಿ ಎಚ್ಚತ್ತಿರುವೆಯಾ?

ಬಕುಲ—ಬಹುದಿವಸಗಳಿಂದ ನಾನು ವಿಚಾರಮಾಡುತ್ತಲಿದ್ದೆನು. ಇಂದು ನನ್ನ ಮನಸ್ಸಿನ ನಿಶ್ಚಯವಾಯಿತು. ಈಗೊದಗಿದ ಆಕಸ್ಮಿಕ ಪ್ರಸಂಗದಿಂದ ನನ್ನ ಕಣ್ಣುಗಳು ಚೆನ್ನಾಗಿ ತೆರೆದಿರುತ್ತವೆ. ಸಂಸಾರ ಪರಿಭ್ರಮಣವು ದುಃಖದಾಯಕವೆಂತಲೂ, ನಿರ್ವಾಣಪ್ರಾಪ್ತಿಯ ಸುಖವು ಶಾಶ್ವತವೆಂತಲೂ ನನ್ನ ಮನಸ್ಸು ನಿಶ್ಚಯಿಸಿರುತ್ತದೆ. ನಾಥಾ, ಹೇಳಿರಿ; ನಾನು ಇನ್ನು ಏನು ಮಾಡಲಿ?

ಉಪಗುಪ್ತ—ಸಂಸಾರದಿಂದ ನಿನ್ನ ಮನಸ್ಸು ತಿರುಗಿತಷ್ಟೇ?

ಬಕುಲ—ತಿರುಗಿತು.

ಹೆಂಡತಿಯ ಈ ಮಾತುಗಳನ್ನು ಕೇಳಿ ಉಪಗುಪ್ತನಿಗೆ ಅತ್ಯಾನಂದವಾಯಿತು. ಆ ಆನಂದದ ಭರದಲ್ಲಿ ಆತನ ಮುಖದಿಂದ "ನಮೋಬುದ್ಧಾಯ" ಎಂಬ ಶಬ್ದಗಳು ಹೊರಟುಹೋದವು. ಆತನು ಸಾನಂದಾಶ್ಚರ್ಯದಿಂದ ಬಕುಲೆಯನ್ನು ನೋಡುತ್ತಿದ್ದನು. ಆಗ ಕ್ಷಣಕ್ಷಣಕ್ಕೆ ಹೆಚ್ಚುತ್ತಿದ್ದ ವೈರಾಗ್ಯದಿಂದ ಬಕುಲೆಯು ಪತಿಯನ್ನು ಕುರಿತು—

ಬಕುಲೆ—ಶ್ರೇಷ್ಠೀ, ನಾನು ಈಗ ಈ ಸಂಸಾರದ ಪಾಶವನ್ನು ಹರಿದು ಚಲ್ಲಿಕೊಟ್ಟುಬಿಟ್ಟಿರುತ್ತೇನೆ. ಕೆಲಕಾಲದವರೆಗೆ ನನಗೂ ನಿಮಗೂ ಪತಿಪತ್ನೀ-ಸಂಬಂಧವು ಇತ್ತು. ಅದು ನನ್ನ ಸಂಸಾರಪರಿತ್ಯಾಗದೊಡನೆ ಮರೆತುಹೋಗಹತ್ತಿದೆ. ನೀವು ಈವೊತ್ತಿನವರೆಗೆ ಯೋಗ್ಯ ಉಪದೇಶಮಾಡಿ ನನ್ನನ್ನು ಈ ಉಚ್ಚಪದವಿಗೆ ಏರಿಸಿದಿರಿ. ನಿಮ್ಮ ಅನಂತವಾದ ಉಪಕಾರವನ್ನು ಸ್ಮರಿಸುವ ಯೋಗ್ಯತೆಯು ನನ್ನದಲ್ಲ. ಇನ್ನು ಒಂದೇ ಮಾತನ್ನು ನಾನು ಬೇಡಿಕೊಳ್ಳುವೆನು.

ಈಗ ಉಪಗುಪ್ತನ ಕಣ್ಣುಗಳೊಳಗಿಂದ ಆನಂದಾಶ್ರುಗಳು ಒಂದೇಸವನೆ ಸುರಿಯುತ್ತಿದ್ದವು. ಆತನು ಸದ್ಗದಿತಕಂಠದಿಂದ ಹೆಂಡತಿಯನ್ನು ಕುರಿತು—

ಉಪಗುಪ್ತ—ಬಕುಲ, ಅಥವಾ ಎಲೈ ತರುಣಸ್ತ್ರೀಯೇ, ಇಂದಿಗೆ

ನನ್ನ ಉಪದೇಶದ ಸಾರ್ಥಕತೆಯಾಯಿತು. ನಿನ್ನೊಡನೆ ನನ್ನ ಲಗ್ನವನ್ನು ಚಿಕ್ಕಂದಿನಲ್ಲಿಯೇ ನಮ್ಮ ತಂದೆಯು ಮಾಡಿದ್ದನು. ಇಲ್ಲದಿದ್ದರೆ ನಾನು ಲಗ್ನದ ಗೊಂದಲಕ್ಕೇ ಬೀಳುತ್ತಿದ್ದಿಲ್ಲ. ಎಂದೋ ಸಂಸಾರವನ್ನು ತ್ಯಜಿಸಿ ಅಂತಿಮಸಾಧ್ಯದ ಕಡೆಗೆ ಧಾವಿಸುತ್ತಿದ್ದೆನು; ಆದರೆ ಈ ಪ್ರೊತ್ತಿನವರೆಗೆ ಕೇವಲ ನಿನ್ನ ಸಲುವಾಗಿ ನಾನು ಸಂಸಾರದಲ್ಲಿ ಇರಬೇಕಾಯಿತು. ನನ್ನ ಆಶ್ರಯವನ್ನು ಹೊಂದಿ ಬಂದಿದ್ದ ನಿನ್ನೊಬ್ಬಳನ್ನೇ ಅಜ್ಞಾನದಲ್ಲಿ ಮುಣುಗಿಸಿ ಹೋಗುವದು ನನಗೆ ಅನ್ಯಾಯವಾಗಿ ತೋರಿ, ಇಲ್ಲಿಯವರೆಗೆ ನಿನಗೆ ಉಪದೇಶಮಾಡುತ್ತ ಸಂಸಾರದಲ್ಲಿದ್ದೆನು. ನನ್ನ ಉಪದೇಶವು ಸಾರ್ಥಕವಾದದ್ದನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ. ಅಂತಿಮಸಾಧ್ಯವಾದ ನಿರ್ವಾಣಪ್ರಾಪ್ತಿಯ ಮಾರ್ಗವನ್ನು ನೀನೇ ನನಗೆ ನಿಷ್ಕಂಟಕವಾಗಿ ಮಾಡಿಕೊಟ್ಟೆ. ಇಂದಿಗೆ ನಾನು ಧನ್ಯನಾದೆನು! ಬಕುಲೆ, ಕಂಠವು ಬಿಗಿದುಬಂದಿತು ಮಾತಾಡಲಾರೆನು!

ಬಕುಲೆ—ಉಪಗುಪ್ತಶ್ರೇಷ್ಠಿ, ಇನ್ನು ಮೇಲೆ ನಾನು ನಿಮ್ಮ ಹೆಂಡತಿಯಲ್ಲ, ನಿಮ್ಮ ಒಬ್ಬ ಶಿಷ್ಯಳಿರುತ್ತೇನೆ. ಇನ್ನುಮೇಲೆ ನಾನು ಏನುಮಾಡಬೇಕೆಂಬಬಗ್ಗೆ ನನ್ನನ್ನು ನೀವು ಬೋಧಿಸಲೇಬೇಕು.

ಉಪಗುಪ್ತ—ನೀನು ಉಪದೇಶವನ್ನು, ನನಗಿಂತ ಯೋಗ್ಯನಾದ ಗುರುವಿನಿಂದ ಪಡೆಯಬೇಕೆಂದು ನನಗೆ ತೋರುತ್ತದೆ. ಯಾವತ್ತು ಬೌದ್ಧಭಿಕ್ಷುಗಳಲ್ಲಿ ಅಗ್ರೇಸರನಾಗಿದ್ದ ಮೊಗ್ಗಲೀ ಪುತ್ರನಾದ ತಿಷ್ಯನೆಂಬ ಮಹಾತ್ಮನು ನಿನಗೆ ಉಪದೇಶಮಾಡಲಿಕ್ಕೆ ಯೋಗ್ಯನು. ನೀನು ಆತನಕಡೆಗೆ ಹೋಗಿ ಭಿಕ್ಷುಣಿಯಾಗಿ ಜನ್ಮದ ಸಾಫಲ್ಯವನ್ನು ಮಾಡಿಕೋ. ಯುವರಾಜನಾದ ಜಿತೇಂದ್ರನ ಬಿಡುಗಡೆಮಾಡಹೊರತು ನಾನು ಭಿಕ್ಷುವಾಗಲಾರೆನು. ಆ ರಾಜಪುತ್ರನ ಬಂಧವಿಮೋಚನೆಗಾಗಿ ನಾನು ತನುಮನೋಧನಗಳಿಂದ ಯತ್ನಿಸುವೆನು. ಸಂಘಟಿಸಿದ ಈ ಪಾಪಕ್ಕಾಗಿ ನೀನಾದರೂ ಪಶ್ಚಾತ್ತಾಪಪಡುತ್ತಿರು, ಜಿತೇಂದ್ರನನ್ನು ಎಂದೂ ಮರೆಯಬೇಡ.

ಬಕುಲೆ—ಶ್ರೇಷ್ಠಿ, ಯುವರಾಜನು ಅಶೋಕನ ಕೈಯಿಂದ ಸುರಕ್ಷಿತವಾಗಿ ಬಿಡುಗಡೆಹೊಂದುವವರೆಗೆ ನನ್ನ ಮನಸ್ಸಿಗೆ ಶಾಂತಿಯು ದೊರೆಯಲಾರದು.

ಉಪಗುಪ್ತ—ಯುವರಾಜನ ಬಂಧವಿಮೋಚನವನ್ನು ಮಾಡಿಸುವದಕ್ಕಾಗಿ ನಾನು ಈಗಲೆ ಪಾಟಲಿಪುತ್ರಕ್ಕೆ ಹೊರಟೆನು ನೋಡು; ಇನ್ನು ನಿನ್ನ ಮಾರ್ಗವನ್ನು ನೀನು ಕಂಡುಕೋ.

ಈಮೇರೆಗೆ ನುಡಿದು, ಉಪಗುಪ್ತನು ಮನೆಯಿಂದ ಹೊರಬಿದ್ದನು. ಕೂಡಲೆ ಬಕುಲೆಯೂ, ಇಂದುಮತಿಯೂ, ಘನಶ್ಯಾಮನೂ ಆತನನ್ನು ಹಿಂಬಾಲಿಸಿದರು. ಉಪಗುಪ್ತನು ಆ ಎಂಟುಸಾವಿರ ಹೊನ್ನನ್ನೂ, ತನ್ನ ಮನೆಮಾರುಗಳನ್ನೂ ದಾನಧರ್ಮಮಾಡಬೇಕೆಂದು, ಸಜ್ಜನನಾದ ತನ್ನ ನೆರೆಯವನೊಬ್ಬನಮುಂದೆ ಹೇಳಿದನು. ಆಮೇಲೆ ಆ ಸಜ್ಜನಶ್ರೇಷ್ಠಿಯು ಇಂದುಮತಿ- ಘನಶ್ಯಾಮರನ್ನು ಕುರಿತು—"ಅತಿಥಿಮಹಾರಾಜರೇ, ಇನ್ನು ನನಗೆ ಅಪ್ಪಣೆಯನ್ನು ಕೊಡಬೇಕು" ಎಂದು ಪ್ರಾರ್ಥಿಸಲು, ಅವರು –ನಾವೂ ನಿಮ್ಮ ಸಂಗಡ ಪಾಟಲಿಪುತ್ರಕ್ಕೆ ಬರುತ್ತೇವೆಂದು ಹೇಳಿದರು. ಅದಕ್ಕೆ ಉಪಗುಪ್ತನು ಒಪ್ಪಿಕೊಂಡದ್ದರಿಂದ, ಅವರೆಲ್ಲರು ಪಾಟಲಿಪುತ್ರದ ಹಾದಿಯನ್ನು ಹಿಡಿದರು. ಇತ್ತ, ಬಕುಲೆಯು ಉಪಗುಪ್ತಶ್ರೇಷ್ಠಿಯ ಚರಣಗಳಮೇಲೆ ಮಸ್ತಕವನ್ನಿಟ್ಟು—ಗುರುವರ್ಯರೇ, ನಿಮಗೆ ನಾನು ಕಡೆಯ ನಮಸ್ಕಾರವನ್ನು ಮಾಡುತ್ತೇನೆ. ತಾವು ಈ ಜನ್ಮದಲ್ಲಿ ಪತಿಯಾಗದೆ ಗುರುಗಳಾದಿರಿ; ಅನ್ನಲು, ಉಪಗುಪ್ತನು "ಧರ್ಮದ ಅಭಿವೃದ್ಧಿಯಾಗಲಿ" ಎಂದು ಶ್ರೇಷ್ಠಗುರುವಿಗೆ ಒಪ್ಪುವಂತೆ ಆಶೀರ್ವದಿಸಿ, ಇಂದುಮತಿ–ಘನಶ್ಯಾಮರ ಆಗ್ರಹದಿಂದ ಪ್ರಣಯಿನಿಯ ಕುದುರೆಯನ್ನು ಹತ್ತಿಕೊಂಡು ಅವರೊಡನೆ ಪಾಟಲಿಪುತ್ರಕ್ಕೆ ಸಾಗಿದನು. ಇತ್ತ ಬಕುಲೆಯು ಅವರ ವಿರುದ್ಧ ದಿಕ್ಕಿಗೆ ಹಾದಿಸಿಕ್ಕತ್ತ ಹೊರಟುಹೋದಳು !!

# ೯ ನೆಯ ಪ್ರಕರಣ--ವೇಷಧಾರಿ ಪ್ರಣಯಿನಿಯು.



ಈಮೇರೆಗೆ ಕಲಿಂಗರಾಜಕುಟುಂಬವು ದೆಸೆಗೆಟ್ಟು ತಿರುಗುತ್ತಿರಲು, ಇತ್ತ ಜಯಶಾಲಿಯಾದ ಅಶೋಕನು, ವೈಭವದಿಂದ ಪಾಟಲಿಪುತ್ರವನ್ನು ಪ್ರವೇಶಿಸಿದನು. ಆತನ ಪ್ರಜೆಗಳೂ, ಮಾಂಡಲಿಕರೂ ಪ್ರಚಂಡವಾದ ದರ್ಬಾರು ನೆರೆಸಿ, ದುರ್ಲಭವಾದ ಚಕ್ರವರ್ತಿಯ ಪದವಿಯನ್ನು ಹೊಂದಿದ್ದಕ್ಕಾಗಿ ಅಶೋಕನನ್ನು ಅಭಿನಂದಿಸಿದರು. ಆಗ ಅಶೋಕನ ವೈಭವ-ಸಾಮರ್ಥ್ಯಗಳಿಗೆ ಎಣೆಯಿದ್ದಿಲ್ಲ; ಆತನು ಏರಿಕೆಯ ಪ್ರಾಯದ ಕೆಚ್ಚೆದೆಯ ವೀರನಾಗಿದ್ದನು. ಚಿಕ್ಕಂದಿನಿಂದ ಆ ವೀರಾಗ್ರಣಿಯು ದಿಗ್ವಿಜಯದಲ್ಲಿ ಕಾಲಹರಣ ಮಾಡಿದ್ದರಿಂದ, ವಿಷಯೋಪಭೋಗದ ನೆರಳು ಸಹ ಆತನಮೇಲೆ ಬಿದ್ದಿದ್ದಿಲ್ಲವೆಂದು ಹೇಳಬಹುದು. ಆತನು ಪವಿತ್ರ ಬ್ರಹ್ಮಚರ್ಯವ್ರತಸ್ಥನಾಗಿದ್ದನು. ದರಿಕಂದರ-ಗಿರಿಗಹ್ವರಗಳನ್ನು ಅಲೆದಾಡುತ್ತ, ವೈರಿಗಳನ್ನು ಸದೆಬಡೆಯುವದರಲ್ಲಿಯೇ ಕೃತಕೃತ್ಯತೆಯನ್ನು ಭಾವಿಸುತ್ತ ಬಂದಿದ್ದ ಆ ಪ್ರತಾಪಿಯ ಹೃದಯಕ್ಕೆ ಮಾರ್ದವದ ಗುರುತು ಸಹ ಇದ್ದಿಲ್ಲ. ಅಶೋಕನು ಮೊದಲೇ ಕ್ರೂರನು, ಅದರಲ್ಲಿ ಚಕ್ರವರ್ತಿಯಾಗಬೇಕೆಂಬ ಮಹತ್ವಾಕಾಂಕ್ಷೆಯ ಹುಚ್ಚು ಆತನ ತಲೆಗೇರಿತು. ಅಂದಬಳಿಕ ಕೇಳುವದೇನು? ಭರತಭೂಮಾತೆಯ ಅಸಂಖ್ಯ ಪುತ್ರರು ಅಶೋಕನ ಚಕ್ರವರ್ತಿಪದವಿಗೆ ಬಲಿಯಾದರು! ಪರಿಪಕ್ವಕಾಲವು ಒದಗಲು, ಮನುಷ್ಯನ ವೃತ್ತಿಯು ಯಾವದೊಂದು ಕಾರಣದಿಂದ ತಟ್ಟನೆ ಬದಲಾಗುವದೆಂಬಮಾತು ಸುಳ್ಳಲ್ಲ. ಕಲಿಂಗವಿಜಯದಲ್ಲಾದ ಅಸಂಖ್ಯ ಪ್ರಾಣಿಸಂಹಾರವನ್ನು ನೋಡಿ ಅಶೋಕನ ಪಾಷಾಣ ಹೃದಯವೂ ಕರಗಿ ನೀರಾಯಿತು. "ಅಹಿಂಸಾ ಪರಮೋ ಧರ್ಮಃ" ಎಂಬ ಶ್ರೇಷ್ಠತಮ ತತ್ವವನ್ನು ಪ್ರತಿಪಾದಿಸುವ ಬೌದ್ಧಧರ್ಮವನ್ನು, ಅಸಂಖ್ಯ ಪ್ರಾಣಿಹಿಂಸೆಯಿಂದ ತಾನು ಹಬ್ಬಿಸಿದ್ದು ಅನ್ಯಾಯವೆಂದು ಆತನ ಮನಸ್ಸಿಗೆ ಪಶ್ಚಾತ್ತಾಪವಾಯಿತು. ಆತನು ಬೌದ್ಧ ಧರ್ಮವನ್ನು

ಸ್ವೀಕರಿಸಿದ್ದರೂ, ಅಂಧಶ್ರದ್ಧೆಯುಮೂಲಕ ಸಂಪುಷ್ಟಾಚಾರ್ಯರಂಥ ದುಷ್ಟ ಭಿಕ್ಷುಗಳ ಮಾತಿಗೆ ಕಿವಿಗೊಟ್ಟು, ದಿಗ್ವಿಜಯಮಾಡಿ ಧರ್ಮವನ್ನು ಹಬ್ಬಿಸಿದ್ದರಿಂದ, ಬೌದ್ಧ ಧರ್ಮಕ್ಕೆ ತೀರ ನಿಷೇಧವಾಗಿದ್ದ ಪ್ರಾಣಿಹಿಂಸಾಪಾಪದ ಉರಲು ಆತನ ಕೊರಳಿಗೆ ಬಿದ್ದಿತು. ಪಶ್ಚಾತ್ತಾಪದಿಂದ ತಪ್ತವಾಗತೊಡಗಿದ್ದ ಅಶೋಕನ ಮನಸ್ಸು ಯುದ್ಧದ ಗೊಂದಲವು ತಪ್ಪಿದ್ದರಿಂದ ಸುವಿಚಾರದ ಕಡೆಗೆ ಹೊರಳಿದ್ದು ಅಸ್ವಾಭಾವಿಕವಲ್ಲ. ಧರ್ಮಪ್ರಸಾರಕ್ಕಾಗಿ ಇನ್ನು ಕೈಯಲ್ಲಿ ಶಸ್ತ್ರಹಿಡಿಯುಲಿಕ್ಕಿಲ್ಲವೆಂದು ಆತನು ಕಲಿಂಗ ಯುದ್ಧದ ಕೊನೆಯಲ್ಲಿ ಪ್ರತಿಜ್ಞೆಯನ್ನೇ ಮಾಡಿದನು. ತರುಣನಾದ ಅಶೋಕನಿಗೆ ಹೆಂಡಿರುಮಕ್ಕಳಿದ್ದಿಲ್ಲ, ಯುದ್ಧವನ್ನಂತು ಆತನು ಮಾಡುವಹಾಗಿದ್ದಿಲ್ಲ, ಈ ಸ್ಥಿತಿಯಲ್ಲಿ ಆತನು ಔದಾಸೀನ್ಯದಿಂದ ಯಾವಾಗಲೂ ವಿಚಾರಮಗ್ನನಾಗಿರುತ್ತಿದ್ದದ್ದು ಆಶ್ಚರ್ಯವೇನು?

ಒಂದುದಿನ ಅಶೋಕನು ಮೇಲುಪ್ಪರಿಗೆಯಲ್ಲಿ ಏಕಾಂತವಾಗಿ ಒಬ್ಬನೇ ಆಲೋಚಿಸುತ್ತ ಕುಳಿತುಕೊಂಡಿದ್ದನು. ಆಗ ಹೊರಗೆ ಎರಡುತಾಸು ಹೊತ್ತು ಇರಬಹುದು. ವೈಶಾಖಮಾಸವು, ದೂರ ಕಪ್ಪುಮೋಡವು ಇಳಿದು, ಗುಡುಗಿನ ಗಂಭೀರಧ್ವನಿಯು ಕೇಳಿಸತೊಡಗಿದೆ; ತುದಿಯ ವಿರಲ ಮೋಡಗಳು ಸೂರ್ಯಮಂಡಲವನ್ನು ಮುಸುಕಿ ಮಳೆಯ ಒಂದೊಂದೇ ಹನಿಗಳು ಉದರಹತ್ತಿ ತಂಗಾಳಿಯು ಬೀಸತೊಡಗಿದ್ದರಿಂದ ದಿಕ್ಕುಗಳು ಪ್ರಸನ್ನವಾಗಹತ್ತಿವೆ. ಈ ಸ್ಥಿತಿಯಲ್ಲಿ ಅಶೋಕನ ಕಣ್ಣಿಗೆ ಎರಡು ನವಿಲುಗಳ ಕ್ರೀಡೆಯು ಬಿದ್ದಿತು. ಅಶೋಕನು ಕುಳಿತ ಸ್ಥಳದಿಂದ ನವಿಲುಗಳು ದೂರವಿದ್ದಿಲ್ಲ. ಅವುಗಳಲ್ಲಿ ಗಂಡುನವಿಲು ಹೆಣ್ಣುನವಿಲನ್ನು ತನ್ನ ಚಂಚುವಿನಿಂದ ಮೆಲ್ಲಗೆ ಚುಚ್ಚಲು, ಅದರ ಈ ಅತಿಪ್ರಸಂಗಕ್ಕಾಗಿ ಹೆಣ್ಣುನವಿಲು ಸಿಟ್ಟಾದಂತೆ ತೋರಿಸಿ ಒನಪಿನಿಂದ ಕುಣಿಯುತ್ತ ಪತಿಯನ್ನು ಗಣನೆಗೆ ತಾರದೆ ದೂರ ಹೋಗುತ್ತಲಿತ್ತು. ಆಗ ಗಂಡುನವಿಲು ಲೀನತೆಯಿಂದ ಅದರ ಬೆನ್ನುಹತ್ತಿ ಹೋಗಿ ಹೆಂಡತಿಯ ಮನಸ್ಸನ್ನು ಒಲಿಸಿಕೊಳ್ಳುತ್ತಿರಲು, ಹೆಣ್ಣುನವಿಲು ಮುಂದಕ್ಕೆ ಹೋಗದೆ ತನ್ನ ಪತಿಯನ್ನು ಪ್ರೇಮಕಟಾಕ್ಷದಿಂದ ನೋಡುತ್ತ ನಿಂತುಕೊಳ್ಳುತ್ತಿತ್ತು. ಇನ್ನು ಇದು ನನ್ನಮೇಲೆ ಪ್ರಸನ್ನವಾಯಿತೆಂದು

ತಿಳಿದು, ಅಂಜುತ್ತಂಜುತ್ತ ಗಂಡುನವಿಲು ಹೆಂಡತಿಯನ್ನು ಮೆಲ್ಲನೆ ತನ್ನ ಚಂಚುವಿನಿಂದ ಚುಚ್ಚಲು, ಹೆಣ್ಣುನವಿಲು ಮತ್ತೆ ಮೊದಲಿನಂತೆ ಸುಳ್ಳೇ ಸಿಟ್ಟಾದಹಾಗೆ ತೋರಿಸಿ ದೂರಹೋಗುವದು. ಹೀಗೆ ಕೆಲವುಕಾಲವು ಕ್ರಮಿಸುವದರೊಳಗೆ ಹೆಣ್ಣುನವಿಲಿನ ಸುಳ್ಳುಸಿಟ್ಟು ಕಡಿಮೆಯಾಗಹತ್ತಿ ದಂಪತಿಗಳ ಪ್ರೇಮಕಲಹಕ್ಕೆ ಕಳೆಯೇರಿತು. ಮುಂದೆ ಪತಿಯು ಚಂಚುವಿನಿಂದ ಎಷ್ಟುಸಾರೆ ಚುಚ್ಚಿದರೂ, ಹೆಣ್ಣುನವಿಲು ಸ್ಥಳಬಿಟ್ಟು ಕದಲದಂತಾಯಿತು. ಹೀಗೆ ಮೊದಮೊದಲು ಶಾಂತಮನಸ್ಸಿನಿಂದ ಪತಿಯ ಚಂಚುವಿನ ಆಘಾತವನ್ನು ಸಹಿಸುತ್ತಿದ್ದ ಮಯೂರಿಯು, ಬರಬರುತ್ತ ಪ್ರೇಮದಿಂದ ಮತ್ತಳಾಗಿ ತಿರುಗಿ ಪತಿಯನ್ನು ತನ್ನ ಕೋಮಲವಾದ ಚಂಚುವಿನಿಂದ ಮೆಲ್ಲಮೆಲ್ಲನೆ ಕುಕ್ಕಹತ್ತಿದಳು. ಅಶೋಕನು ಆ ಪಕ್ಷಿದಂಪತಿಗಳ ಈ ಪ್ರೇಮಕಲಹವನ್ನು ಎವೆಯಿಕ್ಕದೆ ನೋಡುತ್ತಿದ್ದನು. ಆತನಿಗೆ ತಲ್ಲೀನಸ್ಥಿತಿಯು ಪ್ರಾಪ್ತವಾಗಿತ್ತು. ಪರಸ್ಪರ ಚಂಚುವಿನಿಂದ ಕುಕ್ಕುತ್ತಿದ್ದ ಆ ನವಿಲುಗಳ ಚಂಚುಗಳು ಕಡೆಗೆ ಒಂದಕ್ಕೊಂದು ಕೂಡಿದವು. ಪ್ರೇಮಭರದಿಂದ ಕಣ್ಣುಮುಚ್ಚಿ ಅವು ಒಂದಕ್ಕೊಂದು ಗುಟುಕುಕೊಡಹತ್ತಿದವು. ಅವು ಕೆಲವು ಹೊತ್ತು ಏಕಜೀವವಾಗಿದ್ದವು. ಆ ಚುಂಬನಸುಖದಿಂದ ಆನಂದಿತವಾಗಿದ್ದ ಗಂಡುನವಿಲು, ಪ್ರೇಮಭರದಿಂದ ತನ್ನ ದಿವ್ಯವಾದ ಗರಿಗಳನ್ನು ಪಸರಿಸಿ, ಹೆಂಡತಿಯ ಸುತ್ತುವರಿದು ಕುಣಿಯಹತ್ತಿತು. ಅದರ ಕಣ್ಣೊಳಗಿಂದ ಆನಂದಬಾಷ್ಪಗಳ ಹನಿಗಳು ಸುರಿಯುತ್ತಿದ್ದವು. ಆಗ ಪ್ರೇಮಾತಿಶಯದಿಂದ ಮತ್ತವಾಗಿದ್ದ ಹೆಣ್ಣುನವಿಲು ಆ ಹನಿಗಳನ್ನು ಗುಟುಕರಿಸಿ ಆನಂದಪಡುತ್ತಿತ್ತು. ಇದನ್ನು ನೋಡಿಯಂತೂ ಅಶೋಕನ ವಿಸ್ಮಯಕೌತುಕಗಳಿಗೆ ಮೇರೆಯಿಲ್ಲದಾಯಿತು. ಆತನು ಇಷ್ಟುಹೊತ್ತಿಗೆ ಹಲವು ದೇಶಗಳನ್ನೂ, ಎಷ್ಟೋ ಸುಂದರ ಕಲಾಕೌಶಲ್ಯಗಳನ್ನೂ, ಅನ್ಯರ ದೃಷ್ಟಿಗೆ ಬೀಳಲಸಾಧ್ಯವಾದ ಹಲವು ರಮ್ಯ ವನಪ್ರದೇಶಗಳನ್ನೂ ನೋಡಿದ್ದನು; ಚಕ್ರವರ್ತಿಯ ಪದವಿಯನ್ನಂತು ಆತನು ಸದ್ಯಕ್ಕೆ ಅನುಭವಿಸುತ್ತಲಿದ್ದನು; ಆದರೆ ಇಂದಿನ ಪ್ರಸಂಗದಿಂದ ಆದಷ್ಟು ಆಶ್ಚರ್ಯ—ಕೌತುಕಗಳು ಆತನಿಗೆ ಎಂದೂ ಆಗಿದ್ದಿಲ್ಲ.

ಮಯೂರದಂಪತಿಗಳ ಈ ವಿಚಿತ್ರ ಪ್ರೇಮವನ್ನು ನೋಡಿ, ಆನಂದಪರ

ವಶನಾಗಿದ್ದ ಸರಳ ಹೃದಯದ ಅಶೋಕನು, ಗಂಡುನವಿಲನ್ನು ಕುರಿತು—ಮಯೂರಾ, ನೀನು ನಿಜವಾಗಿ ಧನ್ಯನಾಗಿರುತ್ತೀ. ನಿನ್ನ ಪ್ರಿಯಳ ಸಹವಾಸದಿಂದ ನಿನಗಾಗುವ ಸುಖವನ್ನು ನೋಡಿಯೇ ನನಗೆ ಇಷ್ಟು ಆನಂದವಾಗಿರಲು, ಪ್ರತ್ಯಕ್ಷ ಆ ಸುಖವನ್ನು ಅನುಭವಿಸುವ ನಿನಗೆ ಎಷ್ಟು ಆನಂದವಾಗಿರಬಹುದು! ನೀನು ನಿಜವಾದ ಸುಖದ ಆಗರವನ್ನು ಸಂಪಾದಿಸಿರುವೆ. ಈ ಜಗತ್ತಿನಲ್ಲಿ ದುಡ್ಡು ಕೂಡಿಸುವದರಲ್ಲಿ ಆನಂದಪಡುವವರೂ, ಅಧಿಕಾರ ಸಂಪಾದನೆಯಲ್ಲಿ ಆನಂದಪಡುವವರೂ. ಬಹುಮಾನ ದೊರಕಿಸುವಲ್ಲಿ ಆನಂದಪಡುವವರೂ ಬಹು ಜನರಿರುವರು; ಆದರೆ ನಿನ್ನ ಆನಂದವನ್ನು ಅವರ ಆನಂದಗಳು ಎಷ್ಟುಮಾತ್ರವೂ ಸರಿಗಟ್ಟಲಾರವು. ಎಲೈ ಮಯೂರನೇ, ಕುಣಿ, ಜಗತ್ಪ್ರಳಯವಾಗುವವರೆಗೆ ಹೀಗೆಯೇ ಕುಣಿ; ಮತ್ತು ನಿನ್ನ ಬಂಧುವರ್ಗವಾದ ಯಾವತ್ತು ಪಕ್ಷಿಗಣಕ್ಕೆ ಈ ಪ್ರೇಮದ ಪಾಠವನ್ನು ಕಲಿಸು ಆ ಪಕ್ಷಿವರ್ಗವು ನಿನ್ನಂತೆ ಪ್ರೇಮಮಯವಾಗಿದ್ದರೆ, ಸಂಸಾರದ ತಾಪದಿಂದ ಕಂಗೆಟ್ಟು ಬಳಲುತ್ತಿರುವ ನಮ್ಮ ಮನುಷ್ಯಜಾತಿಗೆ ಪ್ರೇಮದ ಪಾಠವನ್ನು ಕಲಿಸು ಯಾಕಂದರೆ, ನಿನ್ನಿಂದ ಪ್ರೇಮದ ಪಾಠವನ್ನು ಕಲಿತವರು ಸಂಸಾರಕ್ಕೆ ಎಷ್ಟುಮಾತ್ರವೂ ಹೆದರುವಕಾರಣವಿಲ್ಲ, ಎಂದು ನುಡಿದು, ತನ್ನೊಳಗೆ—ಈ ಮಯೂರದಂಪತಿಗಳಂಥ ಪ್ರೇಮವು ಮನುಷ್ಯಜಾತಿಯಲ್ಲಿರಬಹುದೋ? ತನ್ನ ಸಹಚಾರಿಣಿಯ ವಿಷಯದ ಅತ್ಯಂತ ಕೋಮಲವಾದ ಮನೋವಿಕಾರವು ಮಯೂರನಲ್ಲಿರುವಂತೆ, ತನ್ನ ಪತ್ನಿಯ ವಿಷಯದ ಪ್ರೇಮವು ಪುರುಷನಲ್ಲಿ ವಾಸಿಸುತ್ತಿರಬಹುದೋ! ಮನುಷ್ಯಪ್ರಾಣಿಯು ಯಾವತ್ತು ಪ್ರಾಣಿಕೋಟಿಯಲ್ಲಿ ಅತ್ಯಂತವಾಗಿ ಸುಧಾರಿಸಿದವನಲ್ಲವೆ? ಆತನಲ್ಲಿ ದಿವ್ಯವಾದ ಜ್ಞಾನವೃಷ್ಟಿಯಿರುವದಲ್ಲವೆ? ಅಂದಬಳಿಕ ಈ ಮಯೂರ ದಂಪತಿಗಳಲ್ಲಿಯ ಪ್ರೇಮಕ್ಕಿಂತ ಮನುಷ್ಯ ದಂಪತಿಗಳಲ್ಲಿಯ ಪ್ರೇಮವು ಉಚ್ಚತಮವಾಗಿರಬಹುದು! ನಾನು ಇಂಥ ದೊಡ್ಡ ಚಕ್ರವರ್ತಿಯೆನಿಸಿಕೊಳ್ಳುತ್ತಿದ್ದರೂ, ಈ ಪವಿತ್ರ ಪ್ರೇಮಕ್ಕೆ ಪಾತ್ರನಾಗಿಲ್ಲವಲ್ಲ! ಈ ಮಯೂರನಿ ಪ್ರೇಮಲಸ್ವಭಾವದ ಈ ಮಯೂರಿಯು ದೊರೆತಿರುವಂತೆ, ಯಾಕ ಮಯೂರಗಳಿಗೆ ದೊರೆತಿರಬಹುದೋ? ಮನುಷ್ಯರಲ್ಲಿಯಂತು ಪಿಂಡ

ಪ್ರಕೃತಿಗಳೆಂದು ಹೇಳುವ ವಾಡಿಕೆಯಿದೆ. ಅಂದಬಳಿಕ ಪ್ರತಿಯೊಬ್ಬ ಹೆಂಡತಿಯು, ಈ ಮಯೂರಿಯಂತೆ ತನ್ನ ಗಂಡನ ವಿಷಯವಾಗಿ ಅಕೃತ್ರಿಮ ಪ್ರೇಮವನ್ನು ತಾಳಿರಬಹುದೋ? ಹಾಗಿದ್ದರೆ ಸಂಸಾರವು ದುಃಖಮಯವೆಂಬ ಸಿದ್ಧಾಂತವು ಎಲ್ಲರ ಮುಖದಿಂದ ಯಾಕೆ ಹೊರಡುತ್ತಿರಬಹುದು? ಇದರಮೇಲಿಂದ ಈ ಮಯೂರದಂಪತಿಗಳಂಥ ಪ್ರೇಮಲಸ್ವಭಾವದ ದಂಪತಿಗಳು, ಮನುಷ್ಯರಲ್ಲಿ ಅತಿ ವಿರಲವಾಗಿಗಬಹುದು. ಹೇಗೇ ಇರಲಿ, ಈ ಪವಿತ್ರಪ್ರೇಮದ ಸಂಬಂಧದಿಂದ ನಾನು ಜಗತ್ತಿನಲ್ಲಿ ತೀರ ಹಿಂದೆ ಉಳಿದಿರುವೆನು! ಎಲ್ಲ ಪ್ರಾಣಿಗಳು ಪ್ರಣಯದ ಆಧೀನವಾಗಿರಲು, ಆ ಪ್ರಣಯದ ವಿಷಯವಾಗಿ ನನ್ನಲ್ಲಿ ಅಜ್ಞಾನವು ಹೇಗೆ ಉಳಿದಿರಬಹುದು! ಒಬ್ಬ ಪ್ರಣಯಿನಿಯಾದರೂ ಈವೊತ್ತಿನವರೆಗೆ ಪ್ರಣಯವೃಷ್ಟಿಯನ್ನು ನನ್ನಮೇಲೆ ಸುರಿಸಿರುವದಿಲ್ಲವಲ್ಲ!

ಈಮೇರೆಗೆ ಯೋಚಿಸುತ್ತ, ಅಶೋಕನು ಒಬ್ಬ ಕಾಲ್ಪನಿಕ ಪ್ರಣಯಿನಿಯ ಮೂರ್ತಿಯನ್ನು ಮನಸ್ಸಿನಲ್ಲಿ ಕಲ್ಪಿಸತೊಡಗಿದನು. ಈ ಕೆಲಸದಲ್ಲಿ ಆತನು ನುರಿತವನಲ್ಲದ್ದರಿಂದ ಮೂರ್ತಿಯ ರಚನೆಯು ಬೇಗನೆ ಆಗಲೊಲ್ಲದು. ಅಶೋಕನು ಕಲಿಂಗರಾಜ ಪುತ್ರಿಯನ್ನು ತನ್ನ ತಮ್ಮನಸಲುವಾಗಿ ಕೇಳಲಿಕ್ಕೆ ಕಳಿಸುವ ಪ್ರಸಂಗದಲ್ಲಿ, ಆ ಲೋಕಸುಂದರಿಯ ಮೋಹಕಸ್ವರೂಪವನ್ನೊಮ್ಮೆ ಆಕೆಯ ಭಾವಪಟದಲ್ಲಿ ನೋಡಿದ್ದನು. ಅದೇ ಸ್ವರೂಪವೇ ಅಶೋಕನ ಮನಸ್ಸಿನಲ್ಲಿ ಬರತೊಡಗಿತು; ಆದರೆ ಅಶೋಕನಿಗೆ ಈ ರೂಪದ ಚಿಂತನವು ಪಾಪಮೂಲವಾಗಿ ತೋರಿತು. ಆತನು ಎಷ್ಟು ಯತ್ನಿಸಿದರೂ ಆ ಸುಂದರಿಯ ರೂಪವು ಆತನ ಹೃತ್ಪಟಲದೊಳಗಿಂದ ಅಳಿಸಿ ಹೋಗಲೊಲ್ಲದು. ಆತನುಅಳಿಸುವದನ್ನು ಬಿಡಲೊಲ್ಲನು. ಹೀಗಿರುವಾಗ ಮೋಹನನೆಂಬ ಸೇವಕನು ಅಲ್ಲಿಗೆ ಬಂದು—"ಕಲಿಂಗದೇಶದ ರಾಜಕುಮಾರನನ್ನು ಸೇವಕರು ಸೆರೆಹಿಡಿದು ತಂದಿರುವರೆ"ಂದು ಅಶೋಕನಮುಂದೆ ಹೇಳಿದನು. ತನ ದನಿಯನ್ನು ಕೇಳಿದ ಕೂಡಲೆ ಮಯೂರದಂಪತಿಗಳು ಹಾರಿಹೋದವು. ಆಗ ಅಶೋಕನು ರಾಜಪುತ್ರನನ್ನು ತನ್ನ ಬಳಿಗೆ ಕರತರಲು ಆಜ್ಞಾಪಿಸಿ, ಮತ್ತೆ ತನ್ನ ಮೂರ್ತಿ 'ಸದಲ್ಲಿ ತೊಡಗಿದನು. ಅಷ್ಟರಲ್ಲಿ ದೂತರು ಪುರುಷವೇಷಧಾರಿಯಾದ

ಪ್ರಣಯಿನಿಯನ್ನು ಅಶೋಕನ ಎದುರಿಗೆ ನಿಲ್ಲಿಸಿದರು. ಪ್ರಣಯಿನಿಯು ಅಶೋಕನನ್ನು ನೋಡಿದ್ದು ಇದೇ ಮೊದಲು. ಆಕೆಯು ಅಶೋಕನ ಕ್ರೂರ ಚರಿತ್ರವನ್ನೂ, ಬೌದ್ಧರ ಕಠೋರ ಹೃದಯದ ನಡತೆಯನ್ನೂ ಕೇಳಿದವಳಾದುದರಿಂದ, ಆಕೆಯ ಮನಸ್ಸಿನಲ್ಲಿ ಅಶೋಕನ, ಹಾಗು ಬೌದ್ಧರವಿಷಯವಾಗಿ ತಿರಸ್ಕಾರವು ವಾಸಿಸುತ್ತಿತ್ತು. ತನ್ನ ತಂದೆಯನ್ನು ಸೋಲಿಸಿ, ಕಲಿಂಗದೇಶವನ್ನು ಕೈಸೇರಿಸಿಕೊಂಡು, ಅಣ್ಣನಾದ ಜಿತೇಂದ್ರನನ್ನು ಸೆರೆಹಿಡತರಲು ಡಂಗುರಸಾರಿಸಿದ ಅಶೋಕನ ವಿಷಯವಾಗಿ ಆ ಸ್ವಾಭಿಮಾನದ ಕ್ಷತ್ರಿಯ ರಾಜಪುತ್ರಿಯು, ಸಹಾನುಭೂತಿಯನ್ನಾದರೂ ಹೇಗೆ ತಾಳಬೇಕು? ಅಶೋಕನು ತನ್ನ ಕ್ರೂರಸ್ವಭಾವಕ್ಕನುಸರಿಸಿ, ಉಗ್ರಸ್ವರೂಪಿಯಾಗಿರಬಹುದೆಂದು ಆಕೆಯು ಭಾವಿಸಿದ್ದಳು; ಆದರೆ ಸುಪ್ರಸನ್ನ ಮುಖಮುದ್ರೆಯ ಅಶೋಕನ ಮನೋಹರ ಮೂರ್ತಿಯು ಕಣ್ಣಿಗೆ ಬಿಸ್ತಕೂಡಲೆ, ಆಕೆಯ ಭಾವನೆಯು ಸ್ವಲ್ಪ ಬದಲಾಯಿತು. ಆ ಬೌದ್ಧ ಚಕ್ರವರ್ತಿಯ ತೇಜಃಪುಂಜಸ್ವರೂಪವನ್ನೂ, ಶಾಂತಮುದ್ರೆಯನ್ನೂ, ಸೌಜನ್ಯದ ನಡತೆಯನ್ನೂ ನೋಡಿ ಆಕೆಯು ಮೊದಲು ಆಶ್ಚರ್ಯಪಟ್ಟರೂ, ಆತನ ಹಲವು ಕ್ರೂರ ಕೃತ್ಯಗಳು ಆಕೆಯ ಕಣ್ಣಿಗೆ ಕಟ್ಟಿದ್ದರಿಂದ, ಆ ಕಲಿಂಗ ರಾಜಪುತ್ರಿಯು ಅಶೋಕನನ್ನು ವಿಷತುಂಬಿದ ಸುವರ್ಣಕಲಶವೆಂದು ಭಾವಿಸಿದಳು! ಪಾಪ! ಕಲಿಂಗಯುದ್ಧದಿಂದ ಅಶೋಕನ ಚಿತ್ತವೃತ್ತಿಯು ಬದಲಾದದ್ದನ್ನು ಆಕೆಯೇನು ಬಲ್ಲಳು? ತಾನು ಬಂದು ಬಹಳಹೊತ್ತಾದರೂ ಅಶೋಕನು ತನಗೆ ಅವಮಾನಕರವಾದ ಉದ್ಧಟತನದ ಮಾತುಗಳನ್ನಾಡಿ ಕಾರಾಗೃಹಕ್ಕೆ ಕಳಿಸದೆ, ತನ್ನನ್ನು ಪ್ರೀತಿಪೂರ್ವಕವಾಗಿ ನೋಡುತ್ತಿರುವದನ್ನು ಸ್ಮರಿಸಿ ಪ್ರಣಯಿನಿಯು ಕೌತುಕಪಟ್ಟಳು. ಆತನು ಮಾತಾಡದಿದ್ದರೂ ಶಿಷ್ಟಾಚಾರಕ್ಕನುಸರಿಸಿ ತಾನು ಮಾತಾಡಬೇಕೆಂದು ಭಾವಿಸಿ ಆಕೆಯು ಅಶೋಕನನ್ನು ವಂದಿಸಿ—"ಚಕ್ರವರ್ತಿಯು ಜಯಶೀಲನಾಗಲಿ" ಎಂದು ನುಡಿದಳು.

ಜಿತೇಂದ್ರ ವೇಷಧಾರಿಯಾದ ಪ್ರಣಯಿನಿಯನ್ನು ನೋಡಿ ಅಶೋಕನ ಚಕಿತನಾದನು! ತನ್ನ ಹೃತ್ಪಟಲದಲ್ಲಿ ಮೂಡಿರುವ ಕಲಿಂಗರಾಜಪುತ್ರಿಂ ಪ್ರಣಿಯಿನಿಯ ರೂಪವನ್ನು ಜಿತೇಂದ್ರನ ರೂಪವು ಅಚ್ಚಳಿಯದೆ ಸ

ತ್ತಿದ್ದದ್ದನ್ನು ನೋಡಿ, ಆತನಿಗೆ ಮೊದಲು ಆಶ್ಚರ್ಯವಾಯಿತು; ಆದರೆ ಜಿತೇಂದ್ರನು ಪ್ರಣಯಿನಿಯ ಅಣ್ಣನಾದ್ದರಿಂದ, ಅಣ್ಣತಂಗಿಯರಲ್ಲಿ ಸಾದೃಶ್ಯವಿರುವದು ಸ್ವಾಭಾವಿಕವೆಂಬಮಾತು ಹೊಳೆದಕೂಡಲೆ ಆತನು ಸಮಾಧಾನಪಟ್ಟನು. ಪ್ರಣಯಿನಿಯ ಸಲುವಾಗಿ ಆತನಲ್ಲಿ ಅತ್ಯಂತವಾದ ಆದರವು ಉತ್ಪನ್ನವಾಯಿತು. ಅಷ್ಟರಲ್ಲಿ ಪ್ರಣಯಿನಿಯು ಸ್ವರ್ಗೀಯವಾದ ಮಂಜುಲನಾದದಿಂದ ಮೇಲೆ ಹೇಳಿದಂತೆ "ಚಕ್ರವರ್ತಿಯು ಜಯಶೀಲನಾಗಲಿ" ಎಂದು ನುಡಿಯಲು, ಅಶೋಕನು—ಕಲಿಂಗರಾಜಪುತ್ರನೇ, ನಿನ್ನ ಉತ್ಕರ್ಷವಾಗಲಿ, ಪ್ರೇಮಪೂರ್ವಕವಾಗಿ ನಾನು ನಿನ್ನ ಸ್ವಾಗತ ಮಾಡುವೆನು" ಎಂದು ನುಡಿದು, ತನ್ನ ಸಿಂಹಾಸನದಿಂದಿಳಿದು ಜಿತೇಂದ್ರನನ್ನು ತನ್ನ ಹತ್ತರ ಸಿಂಹಾಸನದಮೇಲೆ ಕುಳ್ಳಿರಿಸಿಕೊಳ್ಳಬೇಕೆಂದು ಆತನು ಕೈಹಿಡಿಯಹೋಗಲು, ತಂದೆಯ ಪ್ರತಿಜ್ಞೆಯನ್ನು ಚನ್ನಾಗಿ ನೆನಪಿನಲ್ಲಿಟ್ಟಿದ್ದ ಪ್ರಣಯಿನಿಯು, ಸ್ತ್ರೀಸ್ವಭಾವಕ್ಕನುಸರಿಸಿ ತಟ್ಟನೆ ಹಿಂದಕ್ಕೆ ಸರಿದು,—ಚಕ್ರವರ್ತಿಯೇ, ನನ್ನನ್ನು ಮುಟ್ಟಲಾಗದು. ನನ್ನ ತಂದೆಯು ಮರಣಹೊಂದಿರುವನೆಂಬ ಸುದ್ದಿಯು ಜನರಲ್ಲಿ ಹಬ್ಬಿರುವದು; ಆದರೆ ಗುರುವರ್ಯರಾದ ಚಿದಾನಂದಸ್ವಾಮಿಗಳು, ಆತನು ಮರಣಹೊಂದಿರುವದಿಲ್ಲೆಂದು ನಿಶ್ಚಯಬುದ್ಧಿಯಿಂದ ಪ್ರತಿಪಾದಿಸುತ್ತಾರೆಂತಲೂ ನಾನು ಜನರ ಬಾಯಿಂದ ಕೇಳಿದ್ದೇನೆ. ಅಂದಬಳಿಕ ತಂದೆಯ ಮರಣದ ವಿಷಯವಾಗಿ ಸಂಶಯಗ್ರಸ್ತನಾಗಿರುವ ನಾನು, ವೈದಿಕ ಧರ್ಮಾಜ್ಞೆಯಂತೆ ತಂದೆಯ ಔರ್ಧ್ವದೈಹಿಕ ಕರ್ಮಗಳನ್ನು ಮಾಡುವದು ಹೇಗೆ? ಉದಾರಾಂತಃಕರಣದ ಚಕ್ರವರ್ತಿಯೇ, ಮೃತಪಿತೃವಿನ ಔರ್ಧ್ವದೈಹಿಕಕರ್ಮಗಳನ್ನು ಮಾಡುವವರೆಗೆ ಪುತ್ರನು ಸೂತಕದಿಂದಿರಬೇಕಾಗುವದು; ಆದ್ದರಿಂದ ನನ್ನ ಸ್ಪರ್ಶದಿಂದ ನೀನೂ ಅಪವಿತ್ರನಾಗಬೇಡ, ನಿನ್ನ ಪವಿತ್ರಸಿಂಹಾಸನವನ್ನೂ ಅಪವಿತ್ರವಾಗಿ ಮಾಡಬೇಡ. ನಿನ್ನ ಈ ಸೌಜನ್ಯದ ನಡತೆಯಿಂದ ನಾನು ಅತ್ಯಂತ ಸಂತುಷ್ಟನಾಗಿ, ನಿನ್ನ ಔದಾರ್ಯಕ್ಕಾಗಿ ಕೃತಜ್ಞನಾಗಿದ್ದೇನೆ. ಅಶೋಕಸಾರ್ವಭೌಮನೇ, ನೆರೆಯಾಳಾದ ವೈರಿಗಳನ್ನು ಈ ಪರಿ ಆದರಿಸುವ ಧೀರೋದಾತ್ತ ಭೂಪತಿಗಳು ಜಗತ್ತಿನಲ್ಲಿ ...ಂತ ವಿರಲ! ನಿನ್ನ ಅಪ್ಪಣೆಯನ್ನು ಮೀರುವೆನೆಂದು ವಿಕಲ್ಪತಾಳಬೇ

ಡೆಂದು ತಲೆಬಾಗಿ ಬೇಡಿಕೊಳ್ಳುವೆನು. ಚಕ್ರವರ್ತಿಯ ಕರಸ್ಪರ್ಶನ ಅಲಭ್ಯ ಲಾಭಪಡೆಯುವ ಪ್ರಾಣಿಯು ಧನ್ಯಸಲ್ಲವೇ? ನಿನ್ನ ಅಪ್ಪಣೆಯಾದರೆ, ಈ ಆಸನದಲ್ಲಿ ನಾನು ಕುಳಿತುಕೊಳ್ಳುವೆನು; ಚಕ್ರವರ್ತಿಗಳವರು ತಮ್ಮ ಪವಿತ್ರ ಸಿಂಹಾಸನವನ್ನು ಅಲಂಕರಿಸತಕ್ಕದ್ದು.

ಪ್ರಣಯಿನಿಯ ಈ ಮಾತುಗಳನ್ನು ಕೇಳಿ, ಅಶೋಕನಿಗೆ ಅಸಮಾಧಾನವಾಯಿತು. ತನ್ನ ಚಿತ್ತಹರಣಮಾಡಿಬಿಟ್ಟಿದ್ದ ಜಿತೇಂದ್ರನನ್ನು, ಬಹುಮಾನದಿಂದ ಮನ್ನಿಸಬೇಕೆಂಬ ಆ ಚಕ್ರವರ್ತಿಯ ಸದಿಚ್ಛೆಯು ನಿಷ್ಫಲವಾಯಿತು ಆತನು ನಿರುಪಾಯನಾಗಿ ಜಿತೇಂದ್ರನನ್ನು ಕುರಿತು—ಕಲಿಂಗ ರಾಜಪುತ್ರಾ, ನಿನ್ನ ಈ ವಿನಯವನ್ನೂ, ಸೌಜನ್ಯವನ್ನೂ ನೋಡಿ ನನಗೆ ಬಹಳ ಸಂತೋಷವಾಗಿದೆ. ನಿನ್ನ ಸೂಚನೆಯನ್ನು ನಾನು ತಿರಸ್ಕರಿಸುವದಿಲ್ಲ. ನಿನಗೆ ಕುಳಿತುಕೊಳ್ಳಲಿಕ್ಕೆ ಬಾರದ ಸಿಂಹಾಸನವು, ಈ ಪ್ರಸಂಗದಲ್ಲಿ ನನಗಾದರೂ ಬೇಡ. ನೀನು ಆ ಆಸನದಲ್ಲಿ ವಿಶ್ರಮಿಸು, ನಾನು ಈ ಆಸನದಲ್ಲಿ ಕುಳಿತುಕೊಳ್ಳುತ್ತೇನೆ, ಎಂದು ನುಡಿದು, ಅಶೋಕನು ಸಿಂಹಾಸನದ ಬದಿಯಲ್ಲಿದ್ದ ಒಂದು ಆಸನದಮೇಲೆ ಕುಳಿತುಕೊಂಡನು. ಅತ್ತ ಪ್ರಣಯಿನಿಯೂ ಆಸನದಲ್ಲಿ ಕುಳಿತುಕೊಂಡಳು. ತಾನು ಇನ್ನು ಸ್ವಲ್ಪ ಹೊತ್ತಿನಲ್ಲಿ ಸೆರೆಮನೆಯ ನೋಬತಿಯಾಗುವೆನೆಂದು ತಿಳಿದಿದ್ದ ಪ್ರಣಯಿನಿಯು, ತನ್ನನ್ನು ಅಶೋಕನು ಈಪರಿ ಆದರಿಸುವದರ ಗೂಢವನ್ನು ತಿಳಿಯದಾದಳು. ಅಷ್ಟರಲ್ಲಿ ಅಶೋಕನು—

ಅಶೋಕ—ರಾಜಪುತ್ರಾ, ನನ್ನ ಸೈನಿಕರು ಮಾರ್ಗದಲ್ಲಿ ನಿನ್ನೊಡನೆ ಸರಿಯಾಗಿ ನಡೆದುಕೊಂಡರಷ್ಟೇ? ನೀನು ಯಾವಮಾತಿಗೂ ಸಂಕೋಚಪಡಬೇಡ. ಕಲಿಂಗ ಯುದ್ಧದಿಂದ ನನ್ನ ಕ್ರೂರಸ್ವಭಾವವು ಅಳಿದುಹೋಗಿರುತ್ತದೆ. ತನ್ನ ಶತ್ರುವಿನ ಮಗನೊಡನೆಯೂ ಅಶೋಕನು ಎಷ್ಟು ಪ್ರೇಮದಿಂದ ನಡೆದುಕೊಳ್ಳುವನೆಂಬದನ್ನು ಈಗ ಜಗತ್ತಿನ ಅನುಭವಕ್ಕೆ ತಂದುಕೊಡಬೇಕಾಗಿದೆ. ಜಿತೇಂದ್ರ—ರಾಜಕುಮಾರಾ, ಕಲಿಂಗಯುದ್ಧದಲ್ಲಾದ ಭಯಂಕರ ಪ್ರಾಣಹಾನಿಯಿಂದ ನನ್ನ ಶತ್ರುಭಾವವು ಸಂಪೂರ್ಣನಷ್ಟವಾಗಿರುತ್ತದೆಂಬ ಮಾತನ್ನು ಚೆನ್ನಾಗಿ ನೆನಪಿನಲ್ಲಿಡು.

ಪ್ರಣಯಿನಿ—ಭಗವನ್, ಕಲಿಂಗದೇಶದ ರಾಜಪುತ್ರನನ್ನು ಹೇಗೆ ನಡೆಸಿಕೊಳ್ಳಬೇಕೆಂಬದನ್ನು ನಿಮ್ಮ ಸೈನಿಕರು ಚೆನ್ನಾಗಿ ಅರಿತಿದ್ದರು. ಅವರಿಂದ ಯಾವಬಗೆಯ ತೊಂದರೆಯೂ ನನಗೆ ತಟ್ಟಲಿಲ್ಲ. ಇಲ್ಲಿಗೆ ಬಂದಬಳಿಕ ನಿಮ್ಮ ಪ್ರೇಮಲ ಹೃದಯವನ್ನೂ, ಔದಾರ್ಯವನ್ನೂ ನೋಡಿ ನನಗೆ ಬಹಳ ಸಮಾಧಾನವಾಗಿದೆ.

ಅಶೋಕ—ಜಿತೇಂದ್ರ ರಾಜಪುತ್ರಾ, ನಿನ್ನನ್ನು ನೋಡಿದಕೂಡಲೆ ನನ್ನ ಮನಸ್ಸು ಪ್ರಸನ್ನವಾಯಿತು. ಇದಕ್ಕೆ ನೀನು, ಪೂರ್ವಜನ್ಮದ ಋಣಾನುಬಂಧವೆನ್ನು, ಅಥವಾಚಿತ್ರಯೋಗವೆನ್ನು, ಬೇಕಾದದ್ದು ಅನ್ನು. ನಿನ್ನ ದೃಢವಾದ ಸಹವಾಸವನ್ನು ಪಡೆಯುವ ಇಚ್ಛೆಯು ನನಗೆ ಆಗಿರುತ್ತದೆ. ಕಲಿಂಗ ರಾಜಮನೆತನದೊಡನೆ ಸಖ್ಯ ಬೆಳಿಸಬೇಕೆಂದು ನಾನು ಈ ಮೊದಲೇ ನಿಶ್ಚಯಿಸಿರುತ್ತೇನೆ; ಆದರೆ ನನ್ನ ಸಖನಾದ ನೀನು ಆಜನ್ಮ ನನ್ನನ್ನಗಲದೆ ಪರಮಮಿತ್ರನಾಗಿ ನನ್ನೊಡನೆ ವ್ಯವಹರಿಸತಕ್ಕದ್ದು. ನನ್ನ ಈ ಮಾತನ್ನು ನಡಿಸುವ ಅನುಗ್ರಹಮಾಡುವೆನೆಂದು ನೀನು ವಚನವನ್ನು ಕೊಡು.

ಈ ಮಾತನ್ನು ಕೇಳಿ ಪ್ರಣಯಿನಿಯು ಶಂಕಿಸಿದಳು. ಯಾವಮಾತು ತನಗೆ ಬೇಡಾಗಿರುವದೋ, ಅದೇಮಾತನ್ನು ನಡಿಸುವಬಗ್ಗೆ ಅಶೋಕನು ಅಗ್ರಹಮಾಡುವದನ್ನು ನೋಡಿ, ಆಕೆಯು ಅಸಮಾಧಾನಪಟ್ಟಳು. ಚಕ್ರವರ್ತಿಯು ತನ್ನದೃಢಮೈತ್ರಿಯನ್ನು ಇಚ್ಛಿಸುತ್ತಿರಲು, ಅದನ್ನು ನಿರಾಕರಿಸುವದೂ ಕಷ್ಟ, ಸ್ತ್ರೀಯಾದ ತಾನು ತಂದೆಯ ಪ್ರತಿಜ್ಞಾಭಂಗಕ್ಕೆ ಕಾರಣವಾದ ಚಕ್ರವರ್ತಿಯ ಮಾತನ್ನು ನಡಿಸುದೂ ಕಷ್ಟ; ಹೀಗಾಗಿ ಪ್ರಣಯಿನಿಗೆ ಇತ್ತಬಿದ್ದರೆ ಕೆರೆ, ಅತ್ತಬಿದ್ದರೆ ಬಾವಿ ಎಂಬಂತಾಯಿತು; ಆದರೂ ಚತುರೆಯಾದ ಆ ರಾಜಪುತ್ರಿಯು ಅಶೋಕನನ್ನು ಕುರಿತು—

ಪ್ರಣಯಿನಿ—ಚಕ್ರವರ್ತಿಯೇ, ನನ್ನ ಮೇಲೆ ಈಗ ನೀನು ಮಾಡಿರುವ ಪರಮಾನುಗ್ರಹದಿಂದ ನಾನು ಧನ್ಯನಾದೆನು. ವಚನಕೊಡುವ ಮಾತು ಈಗ ಇರಲಿ. ಅದಕ್ಕೆ ಇಷ್ಟು ಅವಸರವು ನೆಟ್ಟಗಲ್ಲೆಂದು ನನಗೆ ತೋರುತ್ತದೆ. ಸಾರ್ವಭೌಮನಾದ ನಿನ್ನೊಡನೆ ಇಂಥ ದೃಢಮೈತ್ರಿಯನ್ನು ಬೆಳೆಸುವ ಯೋಗ್ಯತೆಯು ನನ್ನಲ್ಲಿರುವದೊ, ಇಲ್ಲವೋಎಂಬ ಬಗ್ಗೆ ನಾನು ಶಾಂತ

ಚಿತ್ತದಿಂದ ವಿಚಾರಮಾಡುವೆನು. ತಂದೆಯ ಮರಣವಾರ್ತೆಯಿಂದ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಗುರುಮುಖದಿಂದ ಅದರ ನಿಷ್ಕರ್ಷವಾಗಲಿ. ಉದಾರಮನಸ್ಸಿನ ಚಕ್ರವರ್ತಿಯೇ, ನೀನು ಪ್ರಸನ್ನನಾದರೆ, ನಾನು ಪ್ರತಿ ಚಕ್ರವರ್ತಿಯಾಗಬಹುದು; ಆದರೆ ಆ ಪದವಿಗೆ ನಾನು ಯೋಗ್ಯನಿರುವೆನೋ ಎಂಬ ಬಗ್ಗೆ ನಾನು ವಿಚಾರಮಾಡುವದು ಹಿತಕರವಲ್ಲವೇ?

ಅಶೋಕ—ರಾಜಪುತ್ರಾ, ಆಗಲಿ, ಹಾಗೆಯೇ ಆಗಲಿ; ಸಮಾಧಾನದಿಂದ ವಿಚಾರಮಾಡು. ನಾನೂ ಅಷ್ಟರಲ್ಲಿ ಕಲಿಂಗರಾಜ್ಯದ ವ್ಯವಸ್ಥೆಯನ್ನು ಮಾಡುವೆನು; ನಿನ್ನ ತಂದೆಯ ವೃತ್ತಾಂತವೂ ಗೊತ್ತಾಗುವದು. ನಿನ್ನ ವಿಚಾರವು ನಿಶ್ಚಿತವಾಗುವವರೆಗೆ ನೀನು ಇದೇ ಮಂದಿರದಲ್ಲಿ ವಾಸಿಸುವಂತೆ ಮಾಡಬೇಕು. ದಿನಾಲು ನನಗೆ ನಿನ್ನ ದರ್ಶನಲಾಭವು ಅನಾಯಾಸವಾಗಿ ಘಟಿಸಿದರೂ ನನಗೆ ಸಮಾಧಾನವಾಗುವದು. ನನ್ನ ಈ ಆಜ್ಞಾಪಾಲನವು ನಿನಗೆ ಮಹಾಶಿಕ್ಷೆಯಂತೆ ಕಾಣಬಹುದು; ಆದರೆ ನನ್ನ ಸಮಾಧಾನಕ್ಕಾಗಿ ಇಷ್ಟು ಮಾತನ್ನು ನೀನು ನಡಿಸಲೇಬೇಕು.

ಅಶೋಕನ ಈ ಮಾತುಗಳನ್ನು ಕೇಳಿ, ಪ್ರಣಯಿನಿಯು ಮನಸ್ಸಿನಲ್ಲಿ ಬೆದರಿದಳು. ತಾನು ವೇಷಧಾರಿಯೆಂಬದನ್ನು ಅಶೋಕನು ಕಂಡುಹಿಡಿದನೋ ಏನೋ ಎಂದು ಶಂಕಿಸಹತ್ತಿದಳು. ಆತನು ಈಗ ಕಂಡು ಹಿಡಿಯದಿದ್ದರೂ, ತಾನುದೃಢಸಹವಾಸದಲ್ಲಿ ಚಕ್ರವರ್ತಿಯಮುಂದೆ ತನ್ನ ನಿಜಸ್ವರೂಪವನ್ನು ಬಚ್ಚಿಡುವದು ಆಕೆಗೆ ಅಸಂಭವವಾಗಿ ತೋರಿತು. ಹೀಗಿರುವಾಗ ರಾಜಮಾತೆಯಾದ ಬುದ್ಧಿಮತಿಯು ಅಲ್ಲಿಗೆ ಬಂದಳು. ಬುದ್ಧಿಮತಿಯ ಗುರುತು ವಾಚಕರಿಗೆ ಚನ್ನಾಗಿ ಇರುವದು. ಕಲಿಂಗರಾಜಮನೆತನವನ್ನು ಮಣ್ಣುಗೂಡಿಸಿ, ಆ ರಾಜ್ಯವನ್ನು ತನ್ನ ಹಸ್ತಕನಾದ ವಿಶಾಖಾನಂದಮಂತ್ರಿಗೆ ಒಪ್ಪಿಸಬೇಕೆಂದು ಆಕೆಯು ನಿಶ್ಚಯಿಸಿದ್ದಳು. ರಾಜಮಾತೆಯು ಹೀಗೆ ನಿಶ್ಚಯಿಸಲಿಕ್ಕೆ ಆ ವೃದ್ಧಮಂತ್ರಿಯ ಪತ್ನಿಯಾದ ಪ್ರಮೀಲೆಯು ಮಾಡಿದ ರಾಜದ್ರೋಹದ ಸಾಹಸವೇ ಕಾರಣವು. ಅಶೋಕನು ಸಮಾನಸ್ಕಂಧನಂತೆ ಪ್ರಣಯಿನಿಯೊಡನೆ ಮಾತಾಡುತ್ತ ಕುಳಿತದ್ದನ್ನು ಸಹಿಸದೆ, ರಾಜಮಾತೆಯು ಅಶೋಕನನ್ನು ಕುರಿತು-

ಬುದ್ಧಿಮತಿ—ಕುಮಾರಾ, ಕಲಿಂಗದ ರಾಜಪುತ್ರನು ಈತನೇ ಏನು?

ಅಶೋಕ—ಹೌದು, ಇವನೇ ರಾಜಪುತ್ರನಾದ ಜಿತೇಂದ್ರನು. ಜಿತೇಂದ್ರಾ, ಇವರು ನಮ್ಮ ಮಾತೃಶ್ರೀಯವರು.

ಪ್ರಣಯಿನಿ—ರಾಜಮಾತೆಯೇ, ಈ ಕಲಿಂಗದೇಶದ ಯುವರಾಜನಾದ ಜಿತೇಂದ್ರನು ಅತ್ಯಂತವಾದ ಆದರದಿಂದ ನಮಸ್ಕರಿಸುವನು.

ಬುದ್ಧಿಮತಿ—ಜಿತೇಂದ್ರಾ, ನೀನು ನಮ್ಮ ನೆರೆಯಾಳು! ಹೀಗೆ ನನಗೆ ನಮಸ್ಕರಿಸಲಿಕ್ಕೆ ನಿನಗೆ ಅಧಿಕಾರವಿಲ್ಲ. ಇಂದಿಗೆ ಕಲಿಂಗದೇಶವು ವಿಶಾಖಾನಂದನ ಆಧೀನದಲ್ಲಿರುತ್ತದೆ. ವಿಶಾಖಾನಂದನ ಜ್ಯೇಷ್ಠಪುತ್ರನಹೊರತು ಮತ್ತೊಬ್ಬನು ಕಲಿಂಗದ ಯುವರಾಜಪದವಿಯನ್ನು ಧರಿಸಲಾಗದು. ನೀನು ಬರೇ ಜಿತೇಂದ್ರನೆಂತಲೇ ಕರೆಯಿಸಿಕೊಂಡು, ಮುಂದಿಗೆ ನಿನ್ನ ಗುರುತುಮಾಡಿಕೊಡತಕ್ಕದ್ದು!

ಅಶೋಕ—ವಿಶಾಖಾನಂದನು ಕಲಿಂಗದೇಶದ ರಾಜ್ಯಾಧಿಕಾರಿಯಾಗಲಿಕ್ಕೆ, ಒಂದುಮಾತಿನ ಪ್ರತಿಬಂಧವಿರುತ್ತದೆಂಬದನ್ನು ರಾಜಮಾತೆಯು ಮರೆತಿರಲಿಕ್ಕಿಲ್ಲ. ಮೃಗೇಂದ್ರನು ಬದುಕಿ ಇದ್ದು, ಆತನು ಮಗಧದ ಸಾರ್ವಭೌಮತ್ವವನ್ನು ಒಪ್ಪಿಕೊಂಡರೆ, ಯಾವ ಪ್ರತಿಬಂಧವೂ ಇಲ್ಲದೆ ಆತನ ರಾಜ್ಯವನ್ನು ಆತನಿಗೆ ಕೊಡಬೇಕಾಗುವದು. ಆತನು ಮರಣಹೊಂದಿದ್ದಪಕ್ಷದಲ್ಲಿ ಈ ಜಿತೇಂದ್ರ ರಾಜಕುಮಾರನು ಬೌದ್ಧಧರ್ಮವನ್ನು ಸ್ವೀಕರಿಸಲು ಒಪ್ಪಿದರೆ, ಕಲಿಂಗದ ಪಟ್ಟವನ್ನು ಈತನಿಗೆ ಕೊಡಬೇಕಾಗುವದು. ಅಂದಬಳಿಕ ಯಾವ ಮಾತಿನದೂ ಪೂರ್ಣ ನಿರ್ಣಯವಾಗದ ಈಗಿನ ಸ್ಥಿತಿಯಲ್ಲಿ, ಜಿತೇಂದ್ರನನ್ನು ಕಲಿಂಗದ ಯುವರಾಜನೆಂದು ಕರೆಯುವದೂ, ಆತನು ತನ್ನನ್ನು ಯುವರಾಜನೆಂದು ಕರೆಯಿಸಿಕೊಳ್ಳುವದೂ ಅನ್ಯಾಯವಲ್ಲ.

ರಾಜಮಾತೆ—ನನಗೆ ಅನ್ಯಾಯವಾಗಿ ತೋರುತ್ತದೆ ಮೃಗೇಂದ್ರನ ಕಥೆಯಂತು ಮುಗಿದೇಹೋಗಿರುವದು. ಜಿತೇಂದ್ರನು ಈಗ ಬೌದ್ಧಧರ್ಮವನ್ನು ಸ್ವೀಕರಿಸಲಿಕ್ಕೆ ಒಪ್ಪಿಕೊಳ್ಳದ ಪಕ್ಷದಲ್ಲಿ ತನ್ನ ಯುವರಾಜ ಪದವಿಯನ್ನೇ ಏಕೆ, ಕಲಿಂಗದಮೇಲಿನ ತನ್ನ ಹಕ್ಕನ್ನೂ ಬಿಟ್ಟುಕೊಡಬೇಕಾಗುವದು.

ಅಶೋಕ—ಮಾತೆಯೇ, ಈ ಕೆಲಸದಲ್ಲಿ ಇಷ್ಟು ಅವಸರಮಾಡುವದು ಸರಿಯಲ್ಲ. ಪೂರ್ಣ ನಿರ್ಣಯವಾಗುವವರೆಗೆ ಈ ಜಿತೇಂದ್ರ ಯುವರಾಜನನ್ನು ನನ್ನ ಈ ಪ್ರಾಸಾದದಲ್ಲಿಯೇ ಇಟ್ಟುಕೊಳ್ಳಬೇಕೆಂದುಮಾಡಿರುವೆನು.

ಅಶೋಕನ ವೃತ್ತಿಯು ದಿನದಿನಕ್ಕೆ ಸೌಮ್ಯವಾಗುತ್ತ ನಡೆದಿರುವದನ್ನು ಬುದ್ಧಿಮತಿಯು ನೋಡುತ್ತಲಿದ್ದಳು. ಈ ಪ್ರಸಂಗದಲ್ಲಿ ತನ್ನ ಆಗ್ರಹವು ನಡೆಯದೆಂದು ತಿಳಿದು, ಆಕೆಯು ಅಶೋಕನಿಗೆ—ಆಗಲಿ, ನೀನು ಸಾವಕಾಶವಾಗಿ ಈ ಮಾತಿನ ನಿರ್ಣಯವನ್ನು ಮಾಡು; ಆದರೆ ಈ ಜಿತೇಂದ್ರನನ್ನು ಬಹಳವಾದರೆ ತುರಂಗದರ್ಬಾರದಲ್ಲಿರಿಸು. ಇದಕ್ಕೂ ಹೆಚ್ಚಿನ ಮಾನವನ್ನು ಕೊಡುವದು ನನ್ನ ಮನಸ್ಸಿಗೆ ಬರುವದಿಲ್ಲ. ಈ ಪ್ರಾಸಾದದಲ್ಲಿರಲಿಕ್ಕೆ ಸೆರೆಯಾಳಾದ ಜಿತೇಂದ್ರನು ಸರ್ವಥಾ ಪಾತ್ರನಲ್ಲ, ಎಂದು ನುಡಿಯುತ್ತಿರಲು, ಈ ಸಂಧಿಯನ್ನು ಸಾಧಿಸಿ ಪ್ರಣಯಿನಿಯು ಅಶೋಕನನ್ನು ಕುರಿತು—ಚಕ್ರವರ್ತಿಯೇ, ಮಾತೆಯವರ ವಿಚಾರವು ಸಮರ್ಪಕವಾಗಿದೆ. ನಾನು ತುರಂಗದರ್ಬಾರಕ್ಕೆ ಸಂತೋಷದಿಂದ ಹೋಗುವೆನು, ಎಂದು ಹೇಳಿದನು. ತಾಯಿಯ ಈ ಅತಿಪ್ರಸಂಗಕ್ಕೂ, ಜಿತೇಂದ್ರನ ಅದೂರದರ್ಶಿತನಕ್ಕೂ ಅಸಮಾಧಾನಪಟ್ಟು, ಹೆಚ್ಚು ಆಗ್ರಹ ಮಾಡಲಾರದೆ, ಒಂದು ರಥವನ್ನು ತರಿಸಿ ಅದರಲ್ಲಿ ಜಿತೇಂದ್ರನೊಡನೆ ಕುಳಿತು, ಆ ಉದಾರಾಂತಃಕರಣದ ಸಾರ್ವಭೌಮನು ತುರಂಗದರ್ಬಾರದ ಕಡೆಗೆ ಸಾಗಿದನು.

———[೦]———

## ೧೦ನೆಯ ಪ್ರಕರಣ--ವಿಚಿತ್ರ ಮನೋನಿಗ್ರಹ.



ಈ ಮೇರೆಗೆ ಪ್ರಣಯಿನಿಯು ತನ್ನ ಅಣ್ಣನಾದ ಜಿತೇಂದ್ರನ ಕಷ್ಟವನ್ನು ದೂರಮಾಡುವದಕ್ಕಾಗಿ ಪುರುಷವೇಷದಿಂದ ಪಾಟಲಿಪುತ್ರರಾಜಧಾನಿಯಲ್ಲಿ ಅಶೋಕನ ತುರಂಗದರ್ಬಾರವೆಂಬ ಸೆರೆಮನೆಯೊಳಗೆ ವಾಸಿಸುತ್ತಿದ್ದಳು. ಇತ್ತ ಮಥುರಾಪಟ್ಟಣದಿಂದ ಹೊರಟ ಬೌದ್ಧ ಭಿಕ್ಷುವೇಷಧಾರಿ

ಯಾದ ಜಿತೇಂದ್ರನು, ಪಾಟಲಿಪುತ್ರಕ್ಕೆ ಹೋಗಬೇಕೆಂದು ಹೊರಟು ಮಾರ್ಗವನ್ನು ಕ್ರಮಿಸುತ್ತ, ಕಪಿಲವಸ್ತುನಗರದ ಪೂರ್ವದಿಕ್ಕಿನ ಸರೋವರದ ತೀರದಲ್ಲಿದ್ದ ಧರ್ಮಶಾಲೆಯಲ್ಲಿ ಇಳಿದುಕೊಂಡನು. ವೇಷಕ್ಕೊಪ್ಪುವಂತೆ ಆತನು ಅಂದು ಆ ಪಟ್ಟಣದಲ್ಲಿ ಭಿಕ್ಷೆಬೇಡಿ ಕ್ಷುಧಾಶಾಂತಿಯನ್ನು ಮಾಡಿಕೊಂಡನು. ಹರಿದ್ವಾರದ ಗುರುಕುಲದಲ್ಲಿ ಚಿದಾನಂದಸ್ವಾಮಿಗಳ ಶಿಕ್ಷಣದಿಂದ ಬಾಲ್ಯವನ್ನು ಕಳೆದ ಆ ಸುಂದರ ತರುಣನಿಗೆ, ಸೃಷ್ಟಿಸೌಂದರ್ಯವನ್ನು ನೋಡುವ ಲವಲವಿಕೆ ಬಹಳ. ಅದರಲ್ಲಿ ತನ್ನ ತಂದೆತಾಯಿಗಳೂ, ತಂಗಿಯೂ ದೇಶಭ್ರಷ್ಟರಾಗಿ ಯಾವ ದುರ್ದಶೆಯನ್ನು ಹೊಂದಿದರೋ ಎಂಬ ಚಿಂತೆಯಿಂದ ಅವನ ಮನಸ್ಸು ಉದಾಸೀನವಾದಾಗ, ಅದನ್ನು ಸಮಾಧಾನಗೊಳಿಸಲಿಕ್ಕೆ ಸೃಷ್ಟಿಯ ಅವಲೋಕನದ ಹೊರತು ಆತನಿಗೆ ಬೇರೆ ಸಾಧನವೇ ಈಗ ಉಳಿದಿದ್ದಿಲ್ಲ. ಆತನು ಧರ್ಮಶಾಲೆಯಲ್ಲಿ ಚಿಂತೆಮಾಡುತ್ತ ಒತ್ತಟ್ಟಿಗೆ ಸುಮ್ಮನೆ ಬಿದ್ದುಕೊಂಡಿದ್ದನು. ಹೊತ್ತು ಮುಣುಗಿತು. ಅಂದು ಹುಣ್ಣಿವೆಯಾದದ್ದರಿಂದ ನಿರಭ್ರವಾದ ಆಕಾಶದಲ್ಲಿ ಚಂದ್ರನು ತನ್ನ ಶೀತಲ ಕರಗಳನ್ನು ಪಸರಿಸುತ್ತ ಉದಯಹೊಂದಿ ಮೇಲಕ್ಕೇರಹತ್ತಿದನು. ತಾಸು ರಾತ್ರಿಯಾಯಿತು, ಎರಡು ತಾಸು ರಾತ್ರಿಯಾಯಿತು, ಮೂರುತಾಸು ರಾತ್ರಿಯಾಯಿತು; ಆದರೂ ಜಿತೇಂದ್ರನು ಮೇಲಕ್ಕೇಳಲಿಲ್ಲ. ರಾತ್ರಿಯು ಕ್ರಮಿಸುತ್ತ ಕ್ರಮಿಸುತ್ತ ಆರು ತಾಸಿಗೆ ಬಂದರೂ ಜಿತೇಂದ್ರನ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಮುಂದೆಯಾದರೂ ಬೇಗನೆ ನಿದ್ದೆಹತ್ತುವ ಲಕ್ಷಣವು ಆತನಿಗೆ ತೋರಲಿಲ್ಲ. ಆತನು ಉಸುರ್ಗಳೆಯುತ್ತ ಮಲಗಿದಲ್ಲಿಂದಲೇ ಸರೋವರದಕಡೆಗೆ ದೃಷ್ಟಿಯನ್ನು ಹೊರಳಿಸಿದನು. ಸರೋವರದ ಸ್ವಚ್ಛೋದಕದಮೇಲೆ ಚಂದ್ರಪ್ರಕಾಶವು ಬಿದ್ದು, ನೋಡುವವರ ಮನಸ್ಸನ್ನು ಆಕರ್ಷಿಸುತ್ತಿತ್ತು. ಆಗ ಜಿತೇಂದ್ರನು ಚಟ್ಟನೆ ಎದ್ದು, ನೆಟ್ಟಗೆ ಸರೋವರಕ್ಕೆ ಹೋಗಿ ದಡದಡ ಪಾವಟಿಗೆಗಳನ್ನು ಇಳಿದು, ನೀರೊಳಗೆ ಕಾಲು ಇಳಿಬಿಟ್ಟುಕೊಂಡು, ಕಡೆಯ ಪಾವಟಿಗೆಯ ಮೇಲೆ ಕುಳಿತುಕೊಂಡನು. ಮಧ್ಯರಾತ್ರಿಯು, ಸದ್ದು ಅಡಗಿದೆ, ಸುಳಿಗಾಳಿಯು ಕೂಡ ಸುಳಿಯದ್ದರಿಂದ ಸರೋವರದ ನೀರು ಸ್ತಬ್ಧವಾಗಿದೆ, ಚಂದ್ರಪ್ರಕಾಶದಿಂದ ನೈದಿಲೆಗಳು ಕುಲುಕುಲು

ನಗುತ್ತಿರುವಂತೆ ತೋರುತ್ತಿರಲು, ಸೂರ್ಯನಿಲ್ಲದ್ದರಿಂದ ಕಮಲಗಳು ಬಾಡಿ ಕಲಾಹೀನವಾಗಿ ತೋರುತ್ತಲಿವೆ. ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ್ದ ಆ ಇಬ್ಬರು ಬಾಲಿಕೆಯರ ಈ ಭಿನ್ನ ಸ್ವಭಾವಗಳನ್ನು ಸ್ಮರಿಸಿ ಜಿತೇಂದ್ರನು ಕೌತುಕಪಟ್ಟನು. ಆತನು ಸರೋವರದ ಸೌಂದರ್ಯವನ್ನೂ, ಸ್ವಚ್ಛವಾದ ಆಕಾಶದಲ್ಲಿ ಕಳಪಿಲ್ಲದೆ ಲಕಲಕಿಸುವ ನಿಶಾಕರನನ್ನೂ ಕಣ್ಣುತುಂಬ ನೋಡುತ್ತ, ಮುಖಪ್ರಕ್ಷಾಲನ ಮಾಡಿಕೊಂಡು ಆಗಾಗ್ಗೆ ಬಾಯಿಮುಕ್ಕಳಿಸಿ ಉಗುಳುತ್ತಿರಲು, ಆತನ ಚಿತ್ತವೃತ್ತಿಯು ಸ್ವಲ್ಪ ಶಾಂತವಾಯಿತು. ಋಷ್ಯಾಶ್ರಮವಾಸಿಯಾದ ಆ ಪುಣ್ಯವಂತನಿಗೆ, ಚಿಂತೆಯ ಗುರುತೇ ಇದ್ದಿಲ್ಲೆಂದು ಹೇಳಬಹುದು. ಅಂತೇ ಆತನು ತನ್ನ ಕುಟುಂಬದ ದುರವಸ್ಥೆಯ ಚಿಂತೆಯನ್ನು ಕಾರಣಾಂತರದಿಂದ ಆಗಾಗ್ಗೆ ಮರೆತು, ಉಲ್ಲಾಸವೃತ್ತಿಯಿಂದ ಕಾಲಹರಣ ಮಾಡುತ್ತಿದ್ದನು.

ಈಮೇರೆಗೆ ಜಿತೇಂದ್ರನು, ಸರೋವರದ ಸೌಂದರ್ಯಾವಲೋಕನದಿಂದ ಸಮಾಧಾನವನ್ನು ತಾಳಿ, ಸುಸ್ವರದಿಂದ ಗಾಯನ ಮಾಡತೊಡಗಿದನು. ಬರಬರುತ್ತ ಆತನು ಗಾಯನದಲ್ಲಿ ತಲ್ಲೀನವಾಗಿರಲು, ಒಬ್ಬ ಸುಂದರಿಯು ಆತನ ಬಳಿಯಲ್ಲಿ ಬಂದು ನಿಂತುಕೊಂಡಳು. ಪಟ್ಟಣದಿಂದ ಬಹು ದೂರದಲ್ಲಿದ್ದ ಸರೋವರದಲ್ಲಿ, ಇಷ್ಟು ಮಧ್ಯರಾತ್ರಿಯಲ್ಲಿ ಮನುಷ್ಯ ಸಂಚಾರವಾಗುವ ಸಂಭವವೇ ಇದ್ದಿಲ್ಲ. ಸರೋವರದಲ್ಲಿ ತಾನೇತಾನೆಂದು ತಿಳಿದು ಜಿತೇಂದ್ರನು ನಿಶ್ಶಂಕೆಯಿಂದ ಗಾಯನಮಾಡುತ್ತ ಕುಳಿತುಕೊಂಡಿದ್ದನು. ಅಷ್ಟರಲ್ಲಿ ತನ್ನ ಎದುರಿಗೆ ನೀರಲ್ಲಿ ಒಬ್ಬ ಸ್ತ್ರೀಯ ಪ್ರತಿಬಿಂಬವು ಬಿದ್ದದ್ದನ್ನು ನೋಡಿ, ತನ್ನ ಹಿಂದೆ ಯಾವಳೋ ಒಬ್ಬ ಸ್ತ್ರೀಯು ನಿಂತುಕೊಂಡಿರುವಳೆಂದು ಆತನು ತಿಳಿದು, ಹಿಂದಕ್ಕೆ ಹೊರಳಿನೋಡಿದನು. ಕೂಡಲೆ ಆತನು ಆ ಸ್ತ್ರೀಯನ್ನು ಕುರಿತು--ಇಷ್ಟು ರಾತ್ರಿಯಲ್ಲಿ ಈ ನಿರ್ಜನವಾದ ವನದಲ್ಲಿ ತಿರುಗುವ ನೀನು ಯಾರು? ಎಂದು ಪ್ರಶ್ನಮಾಡಿದನು. ಆದಕ್ಕೆ ಆ ಸ್ತ್ರೀಯು ಉತ್ತರಕೊಡದೆ, ತನ್ನ ಮೋರೆಯ ಮೇಲಿನ ಮುಸುಕನ್ನು ತೆರೆದು, ಮುಗುಳುನಗೆಯಿಂದ ಜಿತೇಂದ್ರನನ್ನು ನೋಡುತ್ತ ನಿಂತುಕೊಂಡಳು. ಮತ್ತೊಬ್ಬ ಅಳ್ಳೆದೆಯವನಾಗಿದ್ದರೆ, ಇದೇನು ಭೂತವೋ, ಪಿಶಾಚವೋ ಎಂದು ಅಂಜಬ

ಹುದಾಗಿತ್ತು; ಆದರೆ ಜಿತೇಂದ್ರನು ಕೆಚ್ಚೆದೆಯ ವೀರನಾಗಿದ್ದನು. ಆತನ ಮನಸ್ಸನ್ನು ಈ ಭೂತಪಿಶಾಚಗಳ ಕಲ್ಪನೆಯು ಪ್ರವೇಶಿಸಲೇ ಇಲ್ಲ. ಆತರುಣ ರಾಜಪುತ್ರನು ಅಂಜುವದೊತ್ತಟ್ಟಿಗುಳಿದು, ಆ ಸುಂದರಿಯ ಸೌಂದರ್ಯಕ್ಕಾಗಿ, ಆಶ್ಚರ್ಯಪಟ್ಟನು. ಆಕೆಯು ಹದಿನಾರುವರ್ಷದ ಪ್ರಾಯದವಳಾಗಿದ್ದಳು. ಆಕೆಯ ಮೈಬಣ್ಣವು ಕಾದಬಂಗಾರದಂತಿದ್ದು, ಎಲ್ಲ ಅವಯವಗಳು ಭರಯೌವನದ ಯೋಗದಿಂದ ತುಂಬಿಬಂದು ಮನೋಹರವಾಗಿ ಒಪ್ಪುತ್ತಿದ್ದವು. ಸರ್ವಾಲಂಕಾರ ಭೂಷಿತೆಯಾಗಿದ್ದ ಆ ಸುಂದರಿಯನ್ನು ನೋಡಿದವರು, ಈಕೆಯು ಯಾವಳೋ ಒಬ್ಬ ಮಹಾ ತೇಜಸ್ವಿಯಾದ ಕುಲೀನ ಯುವತಿಯೆಂದು ತರ್ಕಿಸಬಹುದಾಗಿತ್ತು. ಜಿತೇಂದ್ರನಂತು ಹಾಗೆಯೇ ತರ್ಕಿಸಿದನು. ಇಂಥ ಕುಲೀನಳಾದ ಸುಂದರ ತರುಣಿಯು ಸರ್ವಾಲಂಕಾರಭೂಷಿತೆಯಾಗಿ, ಮಧ್ಯರಾತ್ರಿಯಲ್ಲಿ ವನದೊಳಗಿನ ಸರೋವರದಲ್ಲಿ ನನ್ನ ಬಳಿಗೆ ಬರುವ ಕಾರಣವೇನಿರಬಹುದೆಂಬದು ಆತನ ಮನಸ್ಸಿಗೆ ಹೊಳೆಯದಾಯಿತು. ಆ ತೇಜಸ್ವಿಯು ಬ್ರಹ್ಮಚರ್ಯವ್ರತಸ್ಥನು, ಸರಳಹೃದಯುದವನು, ಮಹಾಸತ್ವಶಾಲಿಯು ಅಂತೇ ನಿರ್ವಿಕಾರಮನಸ್ಕನಾಗಿ ಆ ತರುಣಿಯನ್ನು ಕುರಿತು—

ಜಿತೇಂದ್ರ—ತಂಗೀ, ನಿನ್ನನ್ನು ನೋಡಿದರೆ ನನ್ನ ತಂಗಿಯ ನೆನಪು ಆಗುತ್ತದೆ. ನೀನು ಯಾರಮ್ಮಾ, ಇಷ್ಟು ರಾತ್ರಿಯಲ್ಲಿ ಇಲ್ಲಿಗೆ ಒಬ್ಬಳೇ ಬಂದಕಾರಣವೇನು?

ತರುಣಿ—ಭಿಕ್ಷುಶ್ರೇಷ್ಠನೇ, ತರುಣನಾದ ನೀನು ಏಕಾಂತದಲ್ಲಿ ಈ ಸರೋವರದೊಳಗೆ ಒಬ್ಬನೇ ಕುಳಿತಿರುವದನ್ನು ನೋಡಿ ನಾನು ಬಂದೆನು. ಇಲ್ಲಿಗೆ ಬಂದಬಳಿಕಂತು ನಾನು ಒಬ್ಬಳೇ ಇದ್ದ ಹಾಗಾಗುವದಿಲ್ಲವಷ್ಟೆ? ನಿನ್ನಂಥ ಸುಂದರ ತರುಣನು ಒಬ್ಬನೆಯಿರುವದನ್ನು ನೋಡಿ, ಯಾವ ಸುಂದರಿಯು ನಿನ್ನ ಯೋಗಕ್ಷೇಮವನ್ನು ಕೇಳಲಿಕ್ಕೆ ಬಾರದೆಯಿದ್ದಾಳು?

ಜಿತೇಂದ್ರ—ವಿರಕ್ತನಾದ ನನ್ನ ಯೋಗಕ್ಷೇಮವನ್ನು ಕೇಳಿ ಯಾರಿಗೇನು ಪ್ರಯೋಜನವಾದೀತು?

ತರುಣಿ—ತರುಣಭಿಕ್ಷುವೇ, ಭರಯೌವನದಲ್ಲಿ ನೀನು ವೈರಾಗ್ಯವನ್ನು ತಾಳಲಿಕ್ಕೆ ಕಾರಣವೇನು? ಸಂಸಾರಸುಖದ ಅಸ್ವಾದವನ್ನು ಅನುಭವಿಸುವ

ಮೊದಲೇ ನೀನು ವೈರಾಗ್ಯವನ್ನು ತಾಳಿದೆಯಾ! ನಿನ್ನ ಪೂರ್ವವೃತ್ತಾಂತ ವನ್ನು ನಾನು ಕೇಳಬೇಕಾಗಿದೆ.

ತರುಣಿಯ ಈ ಪ್ರಶ್ನವನ್ನು ಕೇಳಿ, ಜಿತೇಂದ್ರನು ಬೆದರಿದನು. ನನ್ನ ಗುರುತನ್ನು ಈಕೆಯು ಹಿಡಿದಳೋ, ಎಂಬ ಸಂಶಯವು ಆತನ ಮನಸ್ಸಿನಲ್ಲಿ ಉತ್ಪನ್ನವಾಯಿತು. ಆದರೆ ನನ್ನ ಗುರುತು ಹಿಡಿದಿದ್ದರೆ, ಇಂಥ ಮಧ್ಯ ರಾತ್ರಿಯಲ್ಲಿ ಒಬ್ಬಳೇ ಅದನ್ನು ಕೇಳಲಿಕ್ಕೆ ಬರುವ ಸಂಭವವಿಲ್ಲ; ಮೇಲಾಗಿ ಈಕೆಯ ಅಂಗವಿಕ್ಷೇಪಗಳನ್ನು ನೋಡಿದರೆ, ಶುದ್ಧಮನಸ್ಸಿನ ಹೆಣ್ಣುಮಗ ಳಂತೆ ಕಾಣುವದಿಲ್ಲ ಒಳ್ಳೇದು, ಏನಾಗುತ್ತದೆ ನೋಡೋಣ, ಎಂದು ಆ ತರುಣಿಯನ್ನು ಕುರಿತು—

ಜಿತೇಂದ್ರ—ಅಮ್ಮಾ, ನಮ್ಮಂಥ ವಾಂಥಸ್ಥರ ಇತಿಹಾಸದಲ್ಲಿ ಮಹ ತ್ವವೇನಿರುವದು? ನಾನು ತಂದೆತಾಯಿಗಳ ಹೊಟ್ಟೆಯಲ್ಲಿ ಹುಟ್ಟಿ ದೊಡ್ಡವನಾ ದಮೇಲೆ ಗುರುಕುಲವಾಸದಿಂದ ಅಲ್ಪಸ್ವಲ್ಪ ವಿದ್ಯೆಯನ್ನು ಕಲಿತೆನು. ಅಷ್ಟರಲ್ಲಿ ನನ್ನ ಕುಟುಂಬದಮೇಲೆ ಭಯಂಕರ ಪ್ರಸಂಗ ಒದಗಿದ್ದರಿಂದ, ನಾನು ದುಃಖಪಟ್ಟು ಈ ಭಿಕ್ಷುವಿನ ವೇಷವನ್ನು ಹಾಕಿಕೊಂಡು ತಿರುಗ ಹತ್ತಿರುತ್ತೇನೆ.

ತರುಣಿ—ಹಾಗಾದರೆ ಇದು ವೇಷವೋ? ನೀನು ನಿಜವಾಗಿ ಸಂಸಾರ ವಿರಕ್ತನಲ್ಲವಷ್ಟೆ?

ಜಿತೇಂದ್ರ—ನನಗೆ ಸಂಸಾರಸುಖದ ಕಲ್ಪನೆಯೇ ಇಲ್ಲದ್ದರಿಂದ, ವೈರಾ ಗ್ಯದ ಮಹತ್ವವು ನನಗೆ ತೋರುವದಿಲ್ಲ.

ತರುಣಿ—ತರುಣಭಿಕ್ಷುಶ್ರೇಷ್ಠನೇ, ನಿನ್ನ ಮಾತನ್ನು ಕೇಳಿ ನನಗೆ ಬಹಳ ಸಂತೋಷವಾಯಿತು. ಇದು ಮಾತಿನಲ್ಲಿ ಹೊತ್ತು ಗಳೆಯುವ ಪ್ರಸಂಗವಲ್ಲ. ನಿನ್ನ ಸೌಂದರ್ಯಕ್ಕೆ ಮರುಳಾಗಿದ್ದ ವಿಶಾಖಾನಂದನ ಮಂತ್ರಿಯ ಹೆಂಡತಿ ಯಾದ ಈ ಪ್ರಮೀಲೆಯು, ನಿನ್ನ ಸಹವಾಸವನ್ನು ಇಚ್ಛಿಸಿ ದೀನಳಾಗಿ ಬಂದಿ ದ್ದಾಳೆ, ನನ್ನನ್ನು ಮಂತ್ರಿಯ ಹೆಂಡತಿಯೆಂದೂ ತಿಳಿಯಬೇಡ. ಸದ್ಯಕ್ಕೆ ವಿಶಾಖಾನಂದನೇ ಕಲಿಂಗದೇಶದ ರಾಜನಾಗಿರುವದರಿಂದ, ಈ ಪ್ರಮೀಲೆಯು ಕಲಿಂಗದೇಶದ ರಾಣಿಯಾಗಿದ್ದಾಳೆ! ಈ ದಿನ ನಾನು ಇಂದ್ರಭುವನದಿಂದ

ಹೊರಟು ಪಾಟಲಿಪುತ್ರರಾಜಧಾನಿಗೆ ಹೋಗುತ್ತಿರಲು, ಊರಲ್ಲಿ ಭಿಕ್ಷೆಬೇಡು ತ್ತಿದ್ದ ನಿನ್ನನ್ನು ನೋಡಿ ಮೋಹಿತಳಾಗಿ ಇಲ್ಲಿಗೆ ಬಂದಿದ್ದೇನೆ. ಎಂಥವರಿಗೂ ಅಲಭ್ಯಳಾದ ನಾನು, ನಿನ್ನ ಸೇವಕಳಾಗಬಂದಿರುವೆನು, ದುರ್ಲಕ್ಷಿಸದೆ ನನ್ನನ್ನು ಅಂಗೀಕರಿಸು. ವಿಶಾಖಾನಂದನು ವೃದ್ಧನು; ಹೆಸರಿಗೆ ಮಾತ್ರ ನನ್ನ ಪತಿಯು!

ಈಮೇರೆಗೆ ನುಡಿದು, ಪ್ರಮೀಲೆಯು ಇಲ್ಲದ ಸಲಿಗೆಯಿಂದ ಜಿತೇಂ ದ್ರನ ತೀರ ಸಮೀಪಕ್ಕೆ ಹೋದಳು. ಆಗ ಜಿತೇಂದ್ರನು ಸಂತಪ್ತನಾಗಿ ಹಿಂದಕ್ಕೆ ಸರಿದು, ಪ್ರಮೀಲೆಯನ್ನು ಕುರಿತು—

ಜಿತೇಂದ್ರ—ಸರಿ, ಪ್ರಮೀಲಾರಾಣಿಯೇ, ಹಿಂದಕ್ಕೆ ಸರಿದು ನಿಲ್ಲು. ಕಲಿಂಗದೇಶದ ರಾಣಿಯೆನಿಸಿಕೊಳ್ಳುವ ನೀನು, ಇಂಥ ಪಾಪವಾಸನೆಗೆ ಒಳಗಾಗತಕ್ಕದ್ದಲ್ಲ. ಶೌರ್ಯವೂ, ಪ್ರಜಾಪಾಲನದಕ್ಷತೆಯೂ ಅರಸನಲ್ಲಿ ಅವಶ್ಯವಾಗಿ ಇರುವಂತೆ, ಯಾವತ್ತೂ ಸ್ತ್ರೀಯರು ಅನುಕರಿಸುವಂಥ ಪರಿಶು ದ್ಧವಾದ ಪಾತಿವ್ರತ್ಯವು ಆತನ ಹೆಂಡತಿಯಲ್ಲಿ ಇರಬೇಕಾಗುವದು.

ಪ್ರಮೀಲೆ—ತರುಣನೇ, ನೀನು ಬೇಕಾದಷ್ಟು ಹೇಳು ನನ್ನ ಮನೋ ವಿಕಾರವನ್ನು ನಾನು ಸಹಿಸಲಾರೆನು. ನಿನ್ನ ಮೇಲೆ ಪ್ರೇಮವನ್ನಿಡಲಿಕ್ಕೆ ಕಲಿಂಗದ ರಾಣಿಯ ಪದವಿಯಿಂದ ಬಾಧೆಬರುತ್ತಿದ್ದರೆ, ಆ ರಾಣಿಯಪದವಿ ಯನ್ನು ತ್ಯಜಿಸಲಿಕ್ಕೆ ನಾನು ಸಿದ್ಧಳಿರುತ್ತೇನೆ! ಪ್ರಿಯಕರನೇ, ನನ್ನ ನಿರ್ಮಲವಾದ ಪ್ರೇಮವನ್ನು ವ್ಯಕ್ತ ಮಾಡುವದಕ್ಕಾಗಿ ನೀನು ಏನು ಮಾಡೆಂದರೂ ಮಾಡುವೆನು.

ಜಿತೇಂದ್ರ—ಆ! ಪವಿತ್ರ ಪ್ರೇಮವೆನ್ನುವೆಯಾ? ಪ್ರಮೀಲಾರಾಣಿಯೇ, ಹೀಗೆ ನೀನು ಪ್ರೇಮದ ವಿಡಂಬನೆ ಮಾಡುವದು ಸರಿಯಲ್ಲ. ವ್ಯಭಿಚಾ ರಿಯ ಕಾಮವಾಸನೆಗೆ ನಿರ್ಮಲ ಪ್ರೇಮವೆನ್ನಬಹುದಾದ ಬಳಿಕ, ಬಂಧು ಹತ್ಯಕ್ಕೆ ಬಂಧುಪ್ರೇಮವೆಂತಲೂ, ರಾಜದ್ರೋಹಕ್ಕೆ ರಾಜನಿಷ್ಠೆಯೆಂತಲೂ ಅನ್ನಲಿಕ್ಕೆ ಪ್ರತಿಬಂಧವೇನು? ಆ ಪವಿತ್ರಪ್ರೇಮವೆಂಬ ಶಬ್ದವನ್ನು ಉಚ್ಚರಿ ಸುವಾಗ ನೀನು, ವಿಶಾಖಾನಂದನ ಧರ್ಮಪತ್ನಿಯಿರುವೆಯೆಂಬ ಮಾತನ್ನು ಮರೆತು ಬಿಡುತ್ತೀಯಲ್ಲ! ಧರ್ಮಬಂಧನಬದ್ಧವಾದ ಆ ವಿವಾಹಿತ ಪತ್ನೀ

ತ್ವವನ್ನು ನೀನು ಹೀಗೆ ಧಿಕ್ಕರಿಸಿ ಕಾಪಿಯಾಗಬಹುದೆ?

ಪ್ರಮೀಲೆ(ತಾಪದಿಂದ)— ಅಂಥ ಧರ್ಮಬಂಧನದ ಮೇಲೆಯೂ, ವಿವಾಹಬಂಧನದ ಮೇಲೆಯೂ ಪ್ರಮೀಲಾರಾಣಿಯು ಈಗ ಉಗುಳುವಳು! ಇಂದ್ರಿಯಗಳು ಶಿಥಿಲವಾಗಿರುವ, ಬುದ್ಧಿಯು ಭ್ರಂಶವಾಗಿರುವ, ಒಂದು ಕಾಲು ಶ್ಮಶಾನದಲ್ಲಿದ್ದು ಮತ್ತೊಂದನ್ನು ಶ್ಮಶಾನದಲ್ಲಿಡುವದಕ್ಕಾಗಿ ಮೇಲ ಕ್ಕೆತ್ತುತ್ತಿರುವ, ಪ್ರೇತಸ್ವರೂಪನಾದ ವೃದ್ಧವಿಶಾಖಾನಂದನೊಡನೆ ಆದ ವಿವಾಹಬಂಧನಕ್ಕೆ ವಿವಾಹಬಂಧನವೆನ್ನಬಹುದೆ? ನಾನು ಕಲಿಂಗದ ರಾಣಿ ಯಾಗಬೇಕೆಂಬ ಹಟದಿಂದ ವಿಶಾಖಾನಂದನೊಡನೆ ಉಪಚಾರಕ್ಕಾಗಿ ಲಗ್ನ ವಾದದ್ದೇನೋ ನಿಜ. ಇಷ್ಟರಹೊರತು ವಿಶಾಖಾನಂದನೊಡನೆ ಬೇರೆಯಾವ ಬಗೆಯಿಂದಲೂ ನನ್ನ ಸಂಬಂಧವಾಗಿರುವದಿಲ್ಲ ನಿನ್ನನ್ನು ನೋಡುವದ ಕ್ಕಿಂತ ಮೊದಲು, ನನ್ನಮನಸ್ಸಿನಲ್ಲಿ ಪ್ರೇಮದ ಸೆಲೆಯು ಉತ್ಪನ್ನವಾಗಿದ್ದ ರಷ್ಟೇ ಆ ಜರಠನನ್ನು ಪ್ರೀತಿಸುವದು?

ಜಿತೇಂದ್ರ—ಹೋಗು, ಪ್ರಮೀಲಾರಾಣಿಯೇ, ತಟ್ಟನೆ ಇಲ್ಲಿಂದ ಹೊರಟು ಹೋಗು. ಬೇಕಾದಾಗ ವಿವಾಹ ಬಂಧನಕ್ಕೊಳಗಾಗಿ, ಬೇಡಾ ದಾಗ ಅದನ್ನು ಹರಿದು ಚಲ್ಲುವ ನಿನ್ನಂಥ ಧರ್ಮಲಂಡಳು, ಇನ್ನುಮೇಲೆ ನನ್ನೆದುರಿಗೆ ನಿಂತುಕೊಳ್ಳುವದು ಸರಿಯಲ್ಲ. ನಿನ್ನಲ್ಲಿ ಪ್ರೇಮದ ಸೆಲೆಯು ಉತ್ಪನ್ನವಾಗಿದ್ದರೆ, ಅದರಿಂದ ನಿನ್ನ ಮನಸ್ಸಿನೊಳಗಿನ ಹೊಲಸನ್ನು ತೊಳೆದು ಬಿಡು. ಪ್ರತ್ಯಕ್ಷ ಅಪ್ಸರೆಯು ಬಂದರೂ ಆಕೆಯ ಸ್ವರ್ಗೀಯ ಪ್ರೇಮಕ್ಕೂ, ನನ್ನ ಹೃದಯದಲ್ಲಿ ಸ್ಥಳದೊರೆಯಲಾರದು! ಅಂದಬಳಿಕ ನಿನ್ನಂಥ ಹೇಸಿ ಹೆಂಗಸಿನ ಮಾತೇಕೆ? ನನ್ನ ಅಂತಃಕರಣವು ಈ ಮೊದಲೇ ಒಬ್ಬ ಸುಂದ ರಿಯ ಪವಿತ್ರಪ್ರೇಮದಿಂದ ತುಂಬಿಹೋಗಿರುತ್ತದೆ. ನಿನ್ನಂಥ ಪಾಪಿಷ್ಠೆಯು ನನ್ನ ಹೃದಯವನ್ನು ಪ್ರವೇಶಿಸತೊಡಗಿದರೆ, ಅಲ್ಲಿದ್ದ ಆ ಪವಿತ್ರ ಮೂರ್ತಿಯ ತೇಜಸ್ಸಿನಿಂದ ನೀನು ಸುಟ್ಟು ಭಸ್ಮವಾದೀ.

ಜಿತೇಂದ್ರನ ಈ ಮಾತುಗಳನ್ನು ಕೇಳಿದಕೂಡಲೆ, ಪ್ರಮೀಲೆಯ ಎದೆ ಯೊಡೆದು ನೀರಾಯಿತು. ಆಕೆಯು ಮಹಾ ಅಭಿಮಾನಿಯು, ಗರ್ವಿಷ್ಠಳು, ಕಠೋರಹೃದಯದವಳು, ಉದ್ಧಟಸ್ವಭಾವದವಳು ಎಂಬದನ್ನು ವಾಚ

ಕರು ಬಲ್ಲರು; ಆದರೆ ಪ್ರಣಯದ ಅಧೀನಳಾದ ಆ ಪ್ರಮದೆಯು, ಕೇವಲ ಮಾನವಂತೆಯೂ ಸಾಧ್ವಿಯಂತೆ ಜಿತೇಂದ್ರನ ತಿರಸ್ಕಾರದ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ತಲೆಬಾಗಿಸಿಕೊಂಡು ಆತನ ಎದುರಿಗೆ ವಿನಯದಿಂದ ನಿಂತುಕೊಂಡಳು. ಜಿತೇಂದ್ರನ ವಿಷಯವಾಗಿ ಆಕೆಯ ಹೃದಯದಲ್ಲಿ ವಾಸಿಸುತ್ತಿದ್ದಪ್ರೇಮವು ಅಣುಮಾತ್ರವೂ ಕಡಿಮೆಯಾಗಿದ್ದಿಲ್ಲ. ಪ್ರಮೀಲೆಗೆ ಜಿತೇಂದ್ರನ ಗುರುತು ಹತ್ತದಿದ್ದರೂ, ಜಿತೇಂದ್ರನಿಗೆ ಪ್ರಮೀಲೆಯೇ ತನ್ನ ಗುರುತುಮಾಡಿಕೊಟ್ಟಿದ್ದಳು. ಚಿಕ್ಕಂದಿನಲ್ಲಿ ಅವರಿಬ್ಬರು ಕೂಡಿ ಆಡಿದವರೆಂಬ ಮಾತನ್ನು ವಾಚಕರು ಮರತಿರಲಿಕ್ಕಿಲ್ಲ. ಜಿತೇಂದ್ರನೊಡನೆ ಆಗುವ ಆಕೆಯ ವಿವಾಹಕ್ಕೆ, ಮೃಗೇಂದ್ರನು ವಿಘ್ನವನ್ನುಂಟುಮಾಡಿದ್ದರಿಂದಲೇ, ಇಷ್ಟು ಅನರ್ಥವಾಯಿತೆಂಬದನ್ನಾದರೂ ವಾಚಕರಿಗೆ ಮತ್ತೆ ಹೇಳುವ ಕಾರಣವಿಲ್ಲ. ಮಾನಧನಳಾದ ಪ್ರಮೀಲೆಯ ಈ ಪತಿತಸ್ಥಿತಿಯನ್ನು ನೋಡಿ ಜಿತೇಂದ್ರನು ಮರುಗಿದನು. ಆತನು ಆ ಸತ್ವಹೀನಳನ್ನು ಕುರಿತು—

ಜಿತೇಂದ್ರ—ಪ್ರಮೀಲಾರಾಣಿಯೇ, ಹೋಗು, ಇನ್ನು ಆ ಅವಿಚಾರವನ್ನು ಬಿಟ್ಟುಬಿಡು. ಮನಸ್ಸನ್ನು ಚಂಚಲವಾಗಗೊಡಬೇಡ! ಕಲಿಂಗದ ರಾಣೀವಾಸಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೋ. ಭಾರತೀಯ ಸಾಧ್ವಿಯರ ಕೀರ್ತಿಗೆ ಕಲಂಕವನ್ನುಂಟುಮಾಡಬೇಡ ಹೋಗು, ಇಂದಿನ ಪ್ರಸಂಗವನ್ನು ಮರೆತು ಬಿಡು. ತಿರುಗಿ ಅದನ್ನು ನೆನಪಿಗೆ ತಂದುಕೊಳ್ಳಬೇಡ ಹೋಗು.

ಪ್ರಮೀಲೆ—ಪ್ರಿಯಕರನೇ, ಹೋಗುವೆನು; ಆದರೆ ನಿನ್ನ ಮೇಲೆ ಕುಳಿತಿದ್ದ ನನ್ನ ಪ್ರೇಮವು ಇನ್ನು ಚಲಿಸದು. ನೀನು ಬೇಕಾದರೆ ನನ್ನನ್ನು ಪ್ರೀತಿಸು, ಬೇಡಾದರೆ ಬಿಡು. ನನ್ನ ಮೇಲೆ ಸಿಟ್ಟು ಮಾತ್ರ ಆಗಬೇಡ. ಕಂಡೆಯಾ! ತರುಣ ಭಿಕ್ಷುವೇ, ಪ್ರೇಮಪ್ರವಾಹಕ್ಕೆ ಒಡ್ಡುಹಾಕಿ, ಅದನ್ನು ಮತ್ತೊಂದು ಕಡೆಗೆ ತಿರುಗಿಸಲಿಕ್ಕೆ ಅದಾವ ಸ್ತ್ರೀ-ಪುರುಷರು ಸಮರ್ಥರಾಗುವರು? ಕಡೆತನಕ ನಾನು ನಿನ್ನನ್ನು ಪತಿಯೆಂತಲೇ ಭಾವಿಸಿ, ನಿನ್ನ ಮೂರ್ತಿಯನ್ನು ಹೃದಯದಲ್ಲಿಟ್ಟುಕೊಳ್ಳುವೆನು; ಆದರೆ ತರುಣಭಿಕ್ಷೂ, ನಿನಗೆ ಅಂತಃಕರಣ ಹುಟ್ಟುವದಿಲ್ಲವೇ?

ಜಿತೇಂದ್ರ—ನಿರ್ಲಜ್ಜಸ್ತ್ರೀಯೇ, ಈ ಭಿಕ್ಷುವಿನ ದೃಢಮನಸ್ಸಿನ ಕಲ್ಪನೆಯು ಇನ್ನೂ ನಿನಗೆ ಆಗಲೊಲ್ಲದೆಯೆ? ನಿನ್ನಂಥ ಪಾಪಿಷ್ಠಸ್ತ್ರೀಯ ಮುಖಾವಲೋಕನ ಮಾಡಿದ್ದಕ್ಕಾಗಿ ನಾನು ಸಚೇಲಸ್ನಾನ ಮಾಡತಕ್ಕದ್ದು. ಹೋಗು, ಇಲ್ಲಿಂದ ಹೋಗು; ನೀನು ಹೋದದ್ದನ್ನು ನೋಡಿ ನಾನು ಸ್ನಾನಮಾಡಿ ಗುರುಧ್ಯಾನದಿಂದ ಶಾಂತಿಯನ್ನು ಪಡೆಯುವೆನು. ಈ ವರೆಗೂ ಕ್ಷುಬ್ಧವಾಗದೆ ಇದ್ದ ನನ್ನ ಚಿತ್ತವನ್ನು ಇನ್ನು ಕ್ಷುಬ್ಧಗೊಳಿಸಬೇಡ.

ಜಿತೇಂದ್ರನ ಈ ನಿರ್ಧಾರದ ಮಾತುಗಳನ್ನು ಕೇಳಿ, ಪ್ರಮೀಲೆಯು ಒಂದು ನಿಟ್ಟುಸಿರು ಬಿಟ್ಟು, ಅಲ್ಲಿಂದ ಹೋಗಲಾರದೆ ಜಿತೇಂದ್ರನನ್ನು ದೈನ್ಯದಿಂದ ನೋಡುತ್ತ, ಹೃದಯದಲ್ಲಿ ಆ ಮೂರ್ತಿಯು ಸ್ಥಿರವಾಗುವವರೆಗೆ ನಿಂತುಕೊಂಡು, ಜಿತೇಂದ್ರನನ್ನು ಕುರಿತು—ಒಳ್ಳೆಯದು, ಪ್ರಿಯಕರಾ, ಹೋಗುತ್ತೇನೆ. ಈ ನಿರ್ಧಾರದ ಪ್ರಮೀಲೆಯು ಇಷ್ಟರಿಂದ ಹತಾಶಳಾಗಲಾರಳು. ಜನ್ಮವಿರುವತನಕ ಆಕೆಯು ನಿನ್ನ ಪ್ರೇಮಸಂಪಾದನೆಗಾಗಿ ಯತ್ನಿಸುವಳು. ಆ ಯತ್ನದಲ್ಲಿ ಬರುವ ವಿಘ್ನಗಳನ್ನು ಆಕೆಯು ನಿವಾರಿಸದೆ ಬಿಡಳು, ಎಂದು ನುಡಿದವಳೇ ಕ್ಷಣದಲ್ಲಿ ಅಲ್ಲಿಂದ ಗುಪ್ತಳಾದಳು. ಆಕೆಯ ಸದ್ದು ಅಡಗುವವರೆಗೆ ತಲೆಬಾಗಿಸಿಕೊಂಡು ಕುಳಿತಿದ್ದ ಜಿತೇಂದ್ರನು ಆಕೆಯು ಹೋದದ್ದನ್ನು ನೋಡಿ ಸರೋವರದಲ್ಲಿ ದುಡುಮ್ಮನೆ ಹಾರಿದನು. ಆ ಉಲ್ಲಾಸವೃತ್ತಿಯ ತರುಣನು, ತಾನು ವಿಚಿತ್ರಮನೋನಿಗ್ರಹ ಮಾಡಿದೆನೆಂಬ ಆನಂದದಿಂದ ಸರೋವರದಲ್ಲಿ ಯಥೇಚ್ಛ ರಮಿಸತೊಡಗಿದನು!

---

# ೧೧ನೆಯ ಪ್ರಕರಣ--ಮಹಾತ್ಮರ ದರ್ಶನ.



ಪ್ರಮೀಲೆಯು ಹೋಗಿ ಬಹಳ ಹೊತ್ತು ಆಗಿದ್ದಿಲ್ಲ. ಅಷ್ಟರಲ್ಲಿ ಹತ್ತಿರದ ಗಿಡಗಳ ಗುಂಪಿನೊಳಗಿಂದ ಒಬ್ಬ ದೈದೀಪ್ಯಮಾನನಾದ ಪುರುಷನೊ

ಬ್ಬನು ಬರತೊಡಗಿದನು. ಜಲಾನಂದ-ಮಗ್ನನಾದ ಜಿತೇಂದ್ರನು ಆತನನ್ನು ನೋಡಿ ಸರೋವರದ ತೀರಕ್ಕೆ ಬಂದು, ತನ್ನ ತೊಟ್ಟ ಕಪನಿಯನ್ನು ಕಳೆದು ಹಿಂಡಿಕೊಳ್ಳಹತ್ತಿದನು. ಅಷ್ಟರಲ್ಲಿ ಆ ದಿವ್ಯಪುರುಷನು ತೀರ ಸಮೀಪಕ್ಕೆ ಬಂದನು. ಆತನ ಹೆಗಲಮೇಲೆ ಒಂದು ಹಳದಿಯ ಬಣ್ಣದ ಕಪನಿಯು ಜೋಲಾಡುತ್ತಿತ್ತು. ಜಿತೇಂದ್ರನು ಚಿದಾನಂದರ ಪಟ್ಟಶಿಷ್ಯನು, ಹಿಂದೂ ಧರ್ಮದ ಪೂರ್ಣಅಭಿಮಾನಿಯು; ಆದರೂ ಆತನ ಮನಸ್ಸಿನಲ್ಲಿ ಕೂಡ ಎದುರಿಗೆ ಬರುವ ಆ ಬೌದ್ಧ ಭಿಕ್ಷುವನ್ನು ನೋಡಿ ಭಕ್ತಿಯು ಉತ್ಪನ್ನವಾಯಿತು. ಸರ್ವಸಾಧರಣ ಭಿಕ್ಷುಗಳಲ್ಲಿಲ್ಲದ ಮಹತ್ವವೇನೋ ಈ ಪುರುಷನಲ್ಲಿರುತ್ತದೆಂಬ ಭಾವನೆಯು ಜಿತೇಂದ್ರನಿಗೆ ಹುಟ್ಟಿತು. ಚಿದಾನಂದರ ಬ್ರಹ್ಮತೇಜಸ್ಸೂ, ಶಾಂತಮುದ್ರೆಯೂ, ಪ್ರೇಮಲದೃಷ್ಟಿಪಾತವೂ, ಸುಹಾಸ್ಯವದನವೂ ಆ ದಿವ್ಯಪುರುಷನಲ್ಲಿ ತೋರಿದವು. ಬೌದ್ಧಧರ್ಮದಲ್ಲಿಯೂ ಅಧಿಕಾರಸಂಪನ್ನರಾದ ಯೋಗ್ಯ ಆಚಾರ್ಯರು ಇರುತ್ತಾರೆಂಬ ತನ್ನ ಗುರುವಿನ ಉದಾರಮತವು ಇಂದು ಜಿತೇಂದ್ರನಿಗೆ ನೆನಪಾಯಿತು. ಆತನು ಕೆಲಸದ ಪೂರತೆಗಾಗಿ ಸದ್ಯಕ್ಕೆ ಬೌದ್ಧಭಿಕ್ಷುವಿನ ವೇಷವನ್ನು ಹಾಕಿಕೊಂಡಿದ್ದರೂ, ತನ್ನ ಆಯುಷ್ಯದಲ್ಲಿ ಆತನುಬೌದ್ಧಭಿಕ್ಷುಗಳನ್ನು ನಮ್ರತಾಪೂರ್ವಕವಾಗಿ ಎಂದೂನಮಸ್ಕರಿಸಿದ್ದಿಲ್ಲ. ಅಂಥವನು ಇಂದು ತನ್ನೆದುರಿಗೆ ಬಂದು ನಿಂತ ಬೌದ್ಧಭಿಕ್ಷುವನ್ನು ಭಕ್ತಿಯಿಂದ ಸಾಷ್ಟಾಂಗವಾಗಿ ವಂದಿಸಿ, ಎದ್ದು ನಿಂತು ಆತನನ್ನು ಕುರಿತು—

ಜಿತೇಂದ್ರ—ಆಚಾರ್ಯ, ತಮ್ಮ ದರ್ಶನದಿಂದ ನನ್ನನ್ನು ಕೃತಕೃತ್ಯನಾಗಮಾಡಿದಿರಿ. ನಾನು ತಮ್ಮನ್ನು ಭಕ್ತಿಪೂರ್ವಕವಾಗಿ ವಂದಿಸುತ್ತೇನೆ.

ಭಿಕ್ಷು—ಸಚ್ಛೀಲ ತರುಣನೇ, ಏಳು. ನಿನ್ನಂಥ ಸದ್ಗುಣಿಯಾದ ತರುಣನ ಭೆಟ್ಟಿಯು ನನಗೆ ಅತ್ಯಂತ ಆಹ್ಲಾದಜನಕವಾಗಿರುತ್ತದೆ. ನಾನು ಇಲ್ಲಿಯೇ ಸಮೀಪದಲ್ಲಿ ಭಗವಾನ್ ಗೌತಮಬುದ್ಧನ ಸದ್ಗುಣಗಳ ಚಿಂತನ ಮಾಡುತ್ತ ಧ್ಯಾನಸ್ಥನಾಗಿ ಕುಳಿತಿದ್ದೆನು. ಅಷ್ಟರಲ್ಲಿ ನಿನಗೂ, ಮಹತ್ವಾಕಾಂಕ್ಷಿಯಾದ ಪ್ರಮೀಲೆಗೂ ಆದ ಸಂವಾದದ ಧ್ವನಿಯು ನನ್ನ ಕಿವಿಗೆ

ಬಿದ್ದು, ನನ್ನ ಧ್ಯಾನಕ್ಕೆ ವಿಘ್ನವೊದಗಿತು. ಇಂಥ ಶಾಂತಸಮಯದಲ್ಲಿ ಧ್ಯಾನಕ್ಕೆ ವಿಘ್ನವೊದಗಿದ್ದಕ್ಕಾಗಿ ನನಗೆ ಮೊದಲು ಅಸಮಾಧಾನವೂ ಆಯಿತು; ಆದರೆ ಪ್ರಮೀಲೆಯಮೇಲಿನ ಪ್ರೇಮಪ್ರವಾಹದ ಭಯಂಕರವಾದ ಮಹಾಪೂರದಿಂದ ನಿನ್ನ ಮನೋನಿಗ್ರಹದ ಒಡ್ಡು ಲೇಶವಾದರೂ ಕುಸಿಯದಿರುವದನ್ನು ನೋಡಿ ನನಗೆ ಪರಮಾನಂದವಾಯಿತು. ಧರ್ಮಧ್ಯಾನಕ್ಕೆ ಆದ ವ್ಯತ್ಯಯವನ್ನು ನಾನು ಪೂರಾ ಮರೆತುಬಿಟ್ಟೆನು. ಯೋಗಿಗಳಲ್ಲಿ ಕ್ವಚಿತ್ತಾಗಿ ತೋರಬಹುದಾದ ಮನೋನಿಗ್ರಹವು, ನಿನ್ನಂಥ ತರುಣ ರಾಜಪುತ್ರನಲ್ಲಿ ಪ್ರಕಟವಾದದ್ದನ್ನು ನೋಡಿ ನನ್ನ ಆನಂದೋದಧಿಯು ಉಕ್ಕೇರಿತು. ಸಚ್ಛೀಲನಾದ ತರುಣವೀರನೇ, ನೀನು ಇಂದಿನ ಯುದ್ಧದಲ್ಲಿ ಸಂಪಾದಿಸಿದ ಜಯವನ್ನು, ನೀನು ಪರಾಕ್ರಮದಿಂದ ಮಾಡಿದ ದಿಗ್ವಿಜಯವು ಲೇಶವಾದರೂ ಸರಿಗಟ್ಟಲಾರದು! ಈ ಉತ್ಕೃಷ್ಟ ಜಯಸಂಪಾದನೆಗಾಗಿ ನಿನ್ನನ್ನು ಅಭಿನಂದಿಸಬೇಕೆಂದು ರಾಜಪುತ್ರನೇ, ನಾನು ಇಲ್ಲಿಗೆ ಬಂದೆನು! ಹಿಡಿ, ಸಚ್ಛೀಲಸ್ನಾನದಿಂದ ತೊಯ್ದ ನಿನ್ನ ಕಪನಿಯನ್ನು ಬಿಟ್ಟು, ಈ ಒಣ ಕಪನಿಯನ್ನು ಹಾಕಿಕೋ!

ಜಿತೇಂದ್ರ — ( ಸದ್ಗದಿತ ಕಂಠನಾಗಿ )—ನನ್ನ ಮೇಲೆ ಆಚಾರ್ಯರ ಮಹದುಪಕಾರವಾಯಿತು! ಮಹಾತ್ಮರೆ, ನಾನು ರಾಜಪುತ್ರನೆಂಬದನ್ನು ತಾವು ಗೊತ್ತು ಹಿಡಿದೇ ಇರುತ್ತೀರಿ, ಆದರೆ ಈ ವೇಷವನ್ನು ನಾನು ಬೌದ್ಧ ಭಿಕ್ಷುಗಳ ಅಪಮಾನಮಾಡುವದಕ್ಕಾಗಿ ಹಾಕಿಕೊಂಡಿರುವದಿಲ್ಲ. ವಿಪತ್ತಿನಿಂದ ರಕ್ಷಣವಾಗಬೇಕೆಂದು ಹಾಕಿಕೊಂಡಿರುತ್ತೇನೆ. ಇದಕ್ಕಾಗಿ ನನ್ನನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುವೆನು.

ಭಿಕ್ಷು—ಕಲಿಂಗದೇಶದ ಯುವರಾಜನೇ,

ಜಿತೇಂದ್ರ —( ಆಚಾರ್ಯರನ್ನು ವೃದ್ಧಿಂಗತವಾದ ಆಶ್ಚರ್ಯದಿಂದ ನೋಡುತ್ತ ) ಮಹಾತ್ಮರಾದ ತಮ್ಮ ಅಗಾಧಜ್ಞಾನಕ್ಕೆ ಯಾವದು ತಾನೆ ಅಗೋಚರವು?

ಭಿಕ್ಷು—ನನಗೆ ಎಲ್ಲ ವೃತ್ತಾಂತವೂ ಗೊತ್ತಿರುತ್ತದೆ. ನಿನ್ನ ಈ ವೇಷಕ್ಕಾಗಿ ನಾನು ಎಷು ಮಾತ್ರವೂ ನಿನಗೆ ದೋಷವನ್ನು ಇಡಲಾರೆನು.

ಧರ್ಮದ ರಹಸ್ಯವನ್ನು ಬಲ್ಲವರು, ಧಾರ್ಮಿಕಪ್ರವೃತ್ತಿಯನ್ನು ನೋಡುವರಲ್ಲದೆ, ಧರ್ಮದ ಬಾಹ್ಯಚಿಹ್ನಗಳನ್ನು ನೋಡುವದಿಲ್ಲ. ಆತ್ಮಸಂಯಮನ, ಭೂತದಯೆ, ಪರೋಪಕಾರ ಮೊದಲಾದ ಸದ್ಗುಣಗಳಿಂದ ಶಾಂತರಾದವರನ್ನು ಬೌದ್ಧರೆಂತಲೇ ನಾನು ತಿಳಿಯುವೆನು. ಶ್ರೀಭಗವಾನ್ ಬುದ್ಧದೇವನ ಪವಿತ್ರ ಬೋಧದಂತೆ ನಡೆದು ತೋರಿಸುವವರೇ ನಿಜವಾದ ಬೌದ್ಧರು. ಅವರು ಯಾವ ವೇಷದಿಂದಿದ್ದರೇನು? ಯಾವಧರ್ಮದವರೆನಿಸಿಕೊಂಡರೇನು? ಬೌದ್ಧರೆನಿಸುವವರು ತಮ್ಮ ಧರ್ಮವನ್ನು ಹಬ್ಬಿಸುವದಕ್ಕಾಗಿ ಈವೊತ್ತಿನವರೆಗೆ ಮಾಡುತ್ತ ಬಂದಿರುವ ಅನಾಚಾರಗಳನ್ನು ನೋಡಿದರೆ, ನಿನ್ನಂಥ ರಾಜಪುತ್ರನು ಬೌದ್ಧಭಿಕ್ಷುಗಳ ವೇಷದಿಂದ ಅಡಗಿಕೊಂಡಿರುವದು ಆಶ್ಚರ್ಯವಲ್ಲ. ಈ ಪವಿತ್ರವಾದ ಭಿಕ್ಷುವಿನ ವೇಷವನ್ನು ಧಾರಣಮಾಡಿರುವವರೂ, ಧರ್ಮಗುರುವಿನ ದಂಡವನ್ನು ಕೈಯಲ್ಲಿ ಹಿಡಿದವರೂ, ತಾವು ಕೇವಲ ಬುದ್ಧನ ಹೃದಯಬಲ್ಲವರೆಂದು ಅಭಿಮಾನಪಡುವವರೂ ಆದ ಎಷ್ಟೋ ಭಿಕ್ಷುಗಳು, ದುರಾಚರಣೆಯಲ್ಲಿಯೂ, ದುರ್ವ್ಯಸನದಲ್ಲಿಯೂ, ಬೌದ್ಧ ಧರ್ಮದ ತತ್ವಗಗನ್ನು ಹಾಳುಮಾಡುವವರಲ್ಲಿಯೂ ಕಾಲಕ್ರಮಣಮಾಡಹತ್ತಿದ್ದಾರೆ. ಈವೊತ್ತಿಗೆ ಭಿಕ್ಷುಗಳ, ಹಾಗು ಭಿಕ್ಷುಣಿಗಳ ಸಮೂಹವು ಬೆಳೆದಿರುವದನ್ನು ವರ್ಣಿಸುವದು ಶಕ್ಯವಲ್ಲ; ಸ್ವಲ್ಪ ದಿವಸಗಳಲ್ಲಿ ಯಾವತ್ತು ಭರತಖಂಡವು ಭಿಕ್ಷು-ಭಿಕ್ಷುಣೀಮಯವಾಗುವಂತೆ ತೋರಹತ್ತಿದೆ. ಅವರಲ್ಲಿ ನಿಜವಾದ ಭಿಕ್ಷು-ಭಿಕ್ಷುಣಿಗಳು ಎಷ್ಟು ಜನರಿರುವರೋ ಭಗವಾನ್ ಬುದ್ಧದೇವನೇ ಬಲ್ಲನು. ಕೆಲವರು ಹೊಟ್ಟೆಯನ್ನು ತುಂಬಿಕೊಳ್ಳುವದಕ್ಕಾಗಿ, ಕೆಲವರು ವ್ಯಸನಮಗ್ನರಾಗುವದಕ್ಕಾಗಿ, ಕೆಲವರು ಆಲಸ್ಯದಲ್ಲಿ ಹೊರಳಾಡುವದಕ್ಕಾಗಿ, ಕೆಲವರು ಅಧಿಕಾರವನ್ನು ಸಂಪಾದಿಸುವದಕ್ಕಾಗಿ, ಕೆಲವರು ದ್ರವ್ಯವನ್ನು ಗಳಿಸುವದಕ್ಕಾಗಿ, ಕೆಲವರು ತಮ್ಮ ಕ್ರೂರತನವನ್ನು ಸಾಧಿಸುವದಕ್ಕಾಗಿ ಭಿಕ್ಷುಗಳ ವೇಷವನ್ನು ಧರಿಸಿ, ಭರತಖಂಡದತುಂಬ ಗೊಂದಲಹಾಕುತ್ತಿರುವರು. ಅವರಿಗೆ ಮೊನ್ನಿನತನಕ ಅಶೋಕನ ಜಯಶಾಲಿಯಾದ ಖಡ್ಗವು, ಅಜಿಂಕ್ಯ ಸೇನೆಯೊಡನೆ ಸಹಾಯ ಮಾಡುತ್ತಲಿತ್ತು! ಜಿತೇಂದ್ರಾ, ಇಂಥ ನಾಮಧಾರಿಗಳಾದ ಆ ಬೌದ್ಧ ಭಿಕ್ಷುಗಳಿಗೆ ನಿನ್ನನ್ನು ಹೋಲಿಸಿ ನೋಡಿದರೆ, ನೀನು

ರವರಿಗಿಂತ ಎಷ್ಟೋಪಟ್ಟು ಶ್ರೇಷ್ಠನಾಗಿರುತ್ತೀಯೆಂದು ನಿನ್ನವರೆಯೆಂದು ಗೆಹೇಳುವದು, ನಿನ್ನಯೋಗ್ಯತೆಗೆಕುಂದುತರುವಮಾತಾಗಿದೆ. ನಿನ್ನಂಥಸದ್ಗು ಣಿಯಾದ ತರುಣನು, ಬೌದ್ಧಧರ್ಮವನ್ನು ಸ್ವೀಕರಿಸಿದರೇನು. ಸ್ವೀಕರಿಸದಿದ್ದ ರೇನು? ಹಳದಿಯ ಬಣ್ಣದ ಕಪನಿಯನ್ನು ಕೊರಳಲ್ಲಿ ಸಿಗಹಾಕಿಕೊಂಡ ರೇನು, ಹಾಕಿಕೊಳ್ಳದಿದ್ದರೇನು? ಬೌದ್ಧಧರ್ಮವೇ ಏಕೆ, ಜಗತ್ತಿನೊಳಗಿನ ಯಾವತ್ತು ಧರ್ಮಗಳು,ತಮ್ಮ ನಿಜವಾದ ತತ್ವಗಳನ್ನು ಪಾಲಿಸುವವನೆಂದು ಕಂಠರವದಿಂದ ಆತನನ್ನು ಕರೆಯಬಹುದು! ಸದ್ಗುಣ, ಸಚ್ಛೀಲ, ವಿಮಲ ವರ್ತನ, ವಿನಯ, ಸ್ವಧರ್ಮತತ್ಪರತೆ ಎಂಬ ಈ ಗುಣಗಳು ಯಾವ ವ್ಯಕ್ತಿಯಲ್ಲಿ ಏಕೀಕೃತವಾಗಿರುವವೋ, ಆ ವ್ಯಕ್ತಿಯು ನಿಜವಾದ ಬೌದ್ಧರ ಮತದಿಂದ ಶ್ರೇಷ್ಠ ಭಿಕ್ಷುವಾಗಿರುವನು; ವೇದಧರ್ಮಿಗಳ ಮತದಂತೆ ಶ್ರೇಷ್ಠ ಸನ್ಯಾಸಿ ಯಾಗಿರುವನು; ಜೈನರ ಮತದಿಂದ ಉತ್ತಮ ಮುನಿಯಾಗಿರುವನು. ಬಹಳ ವೇಕೆ, ಜಗತ್ತಿನೊಳಗಿನ ಪ್ರತಿಯೊಂದು ಮತವೂ ಆತನಿಗೆ ತನ್ನೊಳಗಿನ ಶ್ರೇಷ್ಠಪದವನ್ನು ಕೊಡಬಹುದು! ನಿನ್ನಂಥ ನಿಷ್ಕಲಂಕಾಚರಣೆಯ ತರುಣ ರಾಜಪುತ್ರನು ಯಾವಧರ್ಮದಲ್ಲಿ ಉದಯವಾದರೂ, ಆ ಧರ್ಮದ ಪ್ರಸಾರ ವಾಗುವದು ಆಶ್ಚರ್ಯವಲ್ಲ. ಈವೊತ್ತಿನ ಬೌದ್ಧಧರ್ಮಪ್ರಸಾರವು, ಕೇವಲ ಅಲಂಕಾರಿಕವಾಗಿರುವದು! ಖಡ್ಗಗಳ ಖಣಿಖಟಲ್ಲೆಂಬ ಶಬ್ದದಕಡೆಗೆ ಜನರ ಲಕ್ಷವಿರುವದರಿಂದ, ಧರ್ಮವನ್ನು ಸ್ವೀಕರಿಸುವಾಗ ಧರ್ಮದೊಳಗಿನ ಉಜ್ವಲ ತತ್ವಗಳ ಪ್ರವೇಶವು ಬಹು ಸ್ವಲ್ಪ ಜನರ ಹೃದಯದಲ್ಲಿ ಆಗಿರು ವದು. ಖಡ್ಗಗಳ ಕಾಂತಿಯು ಕಣ್ಣೆದುರಿಗೆ ಹೊಳೆಯುತ್ತಿರುವವರೆಗೆ, ಧರ್ಮದ ಗುಣಾವಗುಣಗಳ ಪರೀಕ್ಷೆಗೆ ಅವಕಾಶವು ದೊರೆಯುವದಿಲ್ಲ; ಆದರೂ ಆ ಭಯಂಕರ ಕಾಲವು ಬದಲಾಗುತ್ತ ನಡೆದಿರುವದು. ಅಶೋಕನಿಗೆ ಚಕ್ರವ ರ್ತಿಯ ಪದವಿಯು ಪ್ರಾಪ್ತವಾದಂದಿನಿಂದ, ಆತನ ಸ್ವಭಾವದಲ್ಲಿ ಮಹದಂತರ ವಾಗುತ್ತ ನಡೆದಿದೆ. ಆತನ ಮನಸ್ಸಿನಮೇಲೆ ಸದ್ಧರ್ಮದ ಪ್ರಕಾಶವು ಬೀಳು ತ್ತಲಿದೆ. ಜಿತೇಂದ್ರಾ, ನೀನು ಪಾಟಲಿಪುತ್ರ ರಾಜಧಾನಿಗೆ ಹೊರಟೇ ಇರುತ್ತೀ. ಅಲ್ಲಿಗೆ ಹೋದಕೂಡಲೆ ಅಶೋಕರಾಜನನ್ನು ಕಾಣು. ಆತನಿಗೆ ಈ ತಾಡ ವಾಲಿಯ ಪತ್ರವನ್ನು ಕೊಡು.

ಈಮೇರೆಗೆ ಮಾತಾಡಿ, ಮಹಾತ್ಮನಾದ ಆ ಬೌದ್ಧಭಿಕ್ಷುವು ಜಿತೇಂದ್ರನ ಕೈಯಲ್ಲಿ ಒಂದು ತಾಡವಾಲಿಯ ಪತ್ರವನ್ನು ಕೊಟ್ಟನು. ಆಗ ಜಿತೇಂದ್ರನು—

ಜಿತೇಂದ್ರ—ಆಚಾರ್ಯ, ಪತ್ರಕೊಡುವ ಮಹಾತ್ಮನ ಹೆಸರನ್ನು ಅಶೋಕನಿಗೆ ನಾನು ಏನೆಂದು ಹೇಳಲಿ? ತಮ್ಮ ಹೆಸರು ನನಗೆ ಗೊತ್ತಾದರೆ, ದರ್ಶನದಿಂದ ನನ್ನನ್ನು ಧನ್ಯನಾಗಮಾಡಿದ್ದಕ್ಕಾಗಿ ನಾನು ಯಾವಾಗಲೂ ತಮ್ಮ ನಾಮಸ್ಮರಣದಿಂದ ಆನಂದಪಡುವೆನು.

ಭಿಕ್ಷು—ನನ್ನ ಹೆಸರು ನಿನಗೆ ಗೊತ್ತಾಗಬೇಕೆಂತಲೇ ನಾನು ಇಚ್ಛಿಸುತ್ತೇನೆ. ನನ್ನನ್ನು ಮೊಗ್ಗಲೀಪುತ್ರ ತಿಷ್ಯನೆಂದು ಕರೆಯುವರು.

ಜಿತೇಂದ್ರ—( ಭಕ್ತಿಭರದಿಂದ )— "ಭಗವನ್ ಮೊಗ್ಗಲೀಪುತ್ರ-ತಿಷ್ಯರವರಿಗೆ ಜಯವಿರಲಿ! !" ಭಗವಾನ್, ತಮ್ಮ ದರ್ಶನಲಾಭವು ಪ್ರಾಪ್ತವಾದಕ್ಕಾಗಿ ನಾನು ಧನ್ಯನಾದೆನು. ಚಿದಾನಂದ ಸ್ವಾಮಿಗಳವರು ಭಗವಾನರವರ ಯೋಗ್ಯತೆಯ ಗುರುತನ್ನು ನನಗೆ ಚನ್ನಾಗಿ ಮಾಡಿಕೊಟ್ಟಿರುವರು. ತಮ್ಮ ಧೂಲಿದರ್ಶನವಾಗಬೇಕೆಂದು ತಮ್ಮ ಎಷ್ಟೋ ಪ್ರೇಮಲ ಭಕ್ತರು ವರ್ಷಗಟ್ಟಲೆ ಪ್ರಯತ್ನಮಾಡುತ್ತಿರುವರು; ಆದರೆ ಅವರಿಗೆ ದರ್ಶನವಾಗುವದಿಲ್ಲ. ಅಂಥ ದುರ್ಲಭವಾದ ಚರಣದರ್ಶನವು ಇಂದು ಸುದೈವದಿಂದ ನನಗೆ ಅನಾಯಾಸವಾಗಿ ಆಯಿತು.

ತಿಷ್ಯ—ಜಿತೇಂದ್ರ, ನನ್ನನ್ನು ನಿನ್ನ ಸದ್ಗುಣಗಳು ಇಲ್ಲಿಗೆ ಎಳೆದು ತಂದಿರುತ್ತವೆ. ನಾನು ಬೈಲಿಗೆಬರುವ ಪ್ರಸಂಗವು ಇನ್ನೂ ಒದಗಿರುವದಿಲ್ಲ. ಸಂಪುಷ್ಟಾಚಾರ್ಯರಂಥ ಉಪದ್ವ್ಯಾಪಿಭಿಕ್ಷುವಿನ ಬೆನ್ನನ್ನು ಜನರು ಹತ್ತಿರುವರು; ಆದ್ದರಿಂದ ನಾನು ಅಜ್ಞಾತವಾಸದಲ್ಲಿ ನನ್ನ ಆತ್ಮದ ಕಲ್ಯಾಣವನ್ನು ಮಾಡುತ್ತ ಕಾಲಹರಣ ಮಾಡುತ್ತಿರುವೆನು. ತನ್ನ ಕಲ್ಯಾಣಕ್ಕಿಂತ ಜನರ ಕಲ್ಯಾಣವು ಅನಂತಪಟ್ಟಿನಿಂದ ಶ್ರೇಷ್ಠವಾದದ್ದೆಂಬದನ್ನು ನಾನು ಬಲ್ಲೆನು; ಆದರೆ ಇಷ್ಟು ದಿವಸ ವಿಷವನ್ನೇ ಅಮೃತವೆಂದು ಪ್ರಾಶನ ಮಾಡುವ ಕಾಲವಿತ್ತು. ವಿಷದಿಂದ ಮತ್ತವಾಗಿದ್ದ ಕಣ್ಣುಗಳಿಗೆ ಅಮೃತವು ವಿಷರೂಪವಾಗಿ ಕಾಣುತ್ತಿತ್ತು. ಈಗ ಮೆಲ್ಲಮೆಲ್ಲನೆ ಎಲ್ಲರ ಕಣ್ಣುಗಳ ವಿಷದ

ಅಂಶವು ಕಡಿಮೆಯಾಗಹತ್ತಿದೆ. ನಾನು ಬೇಗನೆ ಯಾವತ್ತು ಭರತಖಂಡದ ಸಮ್ಮುಖದಲ್ಲಿ ಬರುವ ಯೋಗವು ಒದಗುವದದೆ.

ಜಿತೇಂದ್ರ—ಭಗವನ್, ತಮ್ಮ ಈ ಮಹದುಪಕಾರಕ್ಕಾಗಿ ಯಾವತ್ತು ಭರತಖಂಡವು ಋಣಿಯಾಗುವದು.

ತಿಷ್ಯ—ಜಿತೇಂದ್ರ, ನಾನು ನನ್ನ ಹೆಸರನ್ನು ಬುದ್ಧಿಪೂರ್ವಕವಾಗಿ ನಿನಗೆ ತಿಳಿಸಿರುತ್ತೇನೆ. ಪ್ರಸಂಗಒದಗುವವರೆಗೆ ಅದನ್ನು ಹೊರಗೆ ಒಡೆಯು ಬೇಡ. ನೀನು ಬೌದ್ಧಧರ್ಮದ ಮೇಲಿನದೊಂದು ಮಹಾ ವಿಘ್ನವನ್ನು ದೂರಮಾಡಬೇಕಾಗಿರುತ್ತದೆ.

ಜಿತೇಂದ್ರ—ಏನು? ನಾನು ಬೌದ್ಧಧರ್ಮಕ್ಕೊದಗುವದೊಂದು ವಿಘ್ನವನ್ನು ದೂರಮಾಡುವೆನೆ? ಆಚಾರ್ಯ, ತಮ್ಮ ಮಾತಿನಲ್ಲಿ ಅವಿಶ್ವಾಸಪಡುವದು ಅಪ್ರಬುದ್ಧತನವು; ಆದರೆ ನಾನು ಎಂದಾದರೂ ಹಿಂದೂ ಧರ್ಮವನ್ನು ತ್ಯಜಿಸಿ ಬೌದ್ಧನಾದೇನೆಂದು ನನಗೆ ತೋರುವದಿಲ್ಲ.

ತಿಷ್ಯ—ಬೌದ್ಧಧರ್ಮದ ಮೇಲಿನ ಅಪಘಾತವನ್ನು ದೂರಮಾಡುವದಕ್ಕಾಗಿ ನೀನು ಬೌದ್ಧಧರ್ಮವನ್ನು ಸ್ವೀಕರಿಸಬೇಕಾಗುವದೆಂದು ನಾನು ಹೇಳುವದಿಲ್ಲ.

ಜಿತೇಂದ್ರ—ಇದು ಬಹು ವಿಲಕ್ಷಣವು!

ತಿಷ್ಯ—ಹೌದು, ಅಂಥ ವಿಲಕ್ಷಣ ಪ್ರಸಂಗವೊದಗುವ ಯೋಗವೇ ಇರುತ್ತದೆ.

ಜಿತೇಂದ್ರ—ಭಗವನ್, ಆಗಲಿ; ಇದರಂತೆ ಕಲಿಂಗದೇಶಕ್ಕೊದಗಿದ ಸಂಕಟವು ದೂರವಾಗುವದೋ? ವೈದಿಕಧರ್ಮವು ಬೌದ್ಧಧರ್ಮದ ಅಬ್ಬರದಲ್ಲಿ ಪಾರಾಗುವದೋ? ಚಿದಾನಂದ ಸ್ವಾಮಿಗಳು ಅಪವಾದದಿಂದ ಮುಕ್ತರಾಗುವರೋ?

ತಿಷ್ಯ—ರಾಜಪುತ್ರಾ, ಬೌದ್ಧಧರ್ಮಕ್ಕೊದಗಿದ ಅಪಘಾತವು ನಿನ್ನಿಂದ ದೂರವಾದಮೇಲೆ, ಸ್ವಲ್ಪ ದಿನಗಳಲ್ಲಿ ಕಲಿಂಗದೇಶವು ಪುನಃ ವೇದಧರ್ಮಿಗಳ ಕೇಂದ್ರಸ್ಥಾನವಾಗುವದು. ಕಲಿಂಗದದೇಶದ ಯುವರಾಜನಾದ ನಿನ್ನ ಪ್ರಯತ್ನದಿಂದ ವೇದಧರ್ಮವು ಜಗತ್ಪ್ರಳಯದವರೆಗೆ ಸ್ಥಿರವಾಗಿ ಉಳಿಯು

ವದು! ಸಚ್ಛೀಲತರುಣ ರಾಜಪುತ್ರಾ, ನಿನ್ನ ಗುರುಗಳಾದ ಚಿದಾನಂದ ಸ್ವಾಮಿಗಳು ಅಪವಾದಕ್ಕೆ ಗುರಿಯಾಗಬಹುದೆ? ಈಗೊದಗಿದ ಸುಳ್ಳು ಅಪವಾದದಿಂದ ಅವರು ಬೇಗನೆ ಮುಕ್ತರಾಗುವರು. ಕೇವಲ ಅವರ ಸಾಮರ್ಥ್ಯದಿಂದಲೇ ವೇದಧರ್ಮವು ಬೌದ್ಧಧರ್ಮಕ್ಕೆ ಎದೆಗೊಟ್ಟುನಿಂತು, ತನ್ನ ಗೌರವವನ್ನು ಕಾಯ್ದುಕೊಳ್ಳುವದು. ಜಿತೇಂದ್ರಾ, ಬೌದ್ಧಧರ್ಮವು ಕೆಲಕಾಲದವರೆಗೆ ಮಾತ್ರ ಭರತಭೂಮಿಯಲ್ಲಿರಬೇಕೆಂದು ಈಶ್ವರೀಸಂಕೇತವದೆ. ಸನಾತನವಾದ ವೈದಿಕ ಧರ್ಮದಲ್ಲಿ ಕಾಲನ ಹಿಮೆಯಿಂದ ಉಂಟಾಗಿರುವ ಕೊರತೆಯನ್ನು ಪೂರಯಿಸುವದಕ್ಕಾಗಿ, ಬೌದ್ಧಧರ್ಮದ ಅವತಾರವಾಗಿರುತ್ತದೆ. ವೈದಿಕಬೌದ್ಧಧರ್ಮಗಳಲ್ಲಿ ಅಂತರವಿಲ್ಲ. ಭರತಭೂಮಿಯು ಯಾವತ್ತು ಜಗತ್ತಿನ ಗುರುಭೂಮಿಯಾಗಿರಬೇಕೆಂದು ಈಶ್ವರೀಸಂಕೇತವಿರುವಂತೆ ತೋರುತ್ತದೆ. ಜಗತ್ತಿನ ಜನರೆಲ್ಲರು ಧರ್ಮದ ಉದಾತ್ತ-ತತ್ವಗಳನ್ನು ವೈದಿಕಧರ್ಮದಿಂದಲೇ ಸ್ವೀಕರಿಸಬೇಕೆಂದು ಈಶ್ವರನ ನಿಯಮವಿರುವದರಿಂದಲೇ, ವೈದಿಕಧರ್ಮದಲ್ಲಿ ಯಾವಪ್ರಕಾರದ ವೈಗುಣ್ಯವೂ ಉಂಟಾಗಬಾರದೆಂದು ಬಗವಾನ್ ಬುದ್ಧದೇವನು ಬೌದ್ಧಧರ್ಮದ ಯೋಜನೆಯನ್ನು ಕೆಲದಿನಗಳವುಟ್ಟಿಗೆ ಮಾಡಿದನು. ಅಹಿಂಸೆಯ ತತ್ವವು ಭಾರತೀಯರ ಹೃದಯದಲ್ಲಿ ನೆಲಿಯೂರಿದ ಕೂಡಲೆ, ಮತ್ತು ಬಂಧುಪ್ರೇಮ, ಸಮತೆಮೊದಲಾದ ಉಜ್ವಲತತ್ವಗಳು ಬೌದ್ಧಧರ್ಮದ ಯೋಗದಿಂದ ಉಜ್ವಲಿತವಾದ ಕೂಡಲೆ, ಇಂದಿಗೆ ಭರತಭೂಮಿಯ ತುಂಬ ವ್ಯಾಪಿಸಿರುವ ಬೌದ್ಧಧರ್ಮವು ನಷ್ಟವಾಗಿ, ಭಾರತೀಯತೇಜದಿಂದ ಉಜ್ವಲಿತವಾದ ವೈದಿಕಧರ್ಮವು ಮತ್ತೆ ಜಗತ್ತಿನಲ್ಲಿ ಪ್ರಕಾಶಿಸುವದು. ನಿಜವಾದ ಬೌದ್ಧಧರ್ಮವು ನಷ್ಟವಾದ ಮೇಲೆಯೂ ಆ ಧರ್ಮದ ಉದಾತ್ತತತ್ವಗಳ ಅವಹೇಲನ ಮಾಡುವದಕ್ಕಾಗಿಯೋ ಅನ್ನುವಂತೆ, ಕೆಲವು ಮ್ಲೇಂಛದೇಶಗಳು ಸ್ವತಃ ಬುದ್ಧಾನುಯಾಯಿಗಳೆಂದು ಹೇಳಿಕೊಳ್ಳಬಹುದು!

ಮೊಗ್ಗಲೀಪುತ್ರತಿಷ್ಯರವರ ಈ ಭವಿಷ್ಯವನ್ನು ಕೇಳಿ ಜಿತೇಂದ್ರನಿಗೆ ಅತ್ಯಾನಂದವಾಗಿ ಆತನ ಕಣ್ಣುಗಳು ಅಶ್ರುಪೂರ್ಣವಾದವು; ಆತನು ಮತ್ತೆ ತಿಷ್ಯರವರನ್ನು ಕುರಿತು—

ಜಿತೇಂದ್ರ—ಭಗವನ್, ತಾವು ಈಗ ಹೇಳಿದ ಭವಿಷ್ಯವು ಸತ್ಯವಾಗಬಹುದಲ್ಲವೆ?

ತಿಷ್ಯ—ಅದರ ಸತ್ಯತೆಯ ಅನುಭವವು ಬೇಗನೆ ನಿನಗೆ ಆಗುವದು. ಜಿತೇಂದ್ರಾ, ಇನ್ನೊಮ್ಮೆ ನನ್ನ ದರ್ಶನದ ಯೋಗವು ನಿನಗೆ ಇರುತ್ತದೆ. ಆಗ ನೀನು ಇದೇ ಸ್ಥಳಕ್ಕೆ ಬಂದು ಇದೇ ಹೊತ್ತಿನಲ್ಲಿ ನನ್ನನ್ನು ಕಾಣು. ಬೇರೆ ಕಡೆಯಲ್ಲಿ ಹುಡುಕಿದರೆ ನನ್ನ ಗೊತ್ತಾಹತ್ತದು.

ಜಿತೇಂದ್ರ—ಭಗವಾನರವರ ದರ್ಶನವು ಇದೇ ಜನ್ಮದಲ್ಲಿ ಇನ್ನೊಮ್ಮೆ ನನಗೆ ಆಗುವ ಸುಯೋಗವು ಇರುತ್ತದೋ? ನಾನು ಪರಮಧನ್ಯನು!!

ತಿಷ್ಯ—ನಿನ್ನ ಸದ್ಗುಣಗಳು ದೇವಾದಿಕರನ್ನು ಎಳಕೊಂಡು ಬರುತ್ತಿರಲು, ನಮ್ಮ ಪಾಡೇನು?

ಈಪರಿಗೆ ನುಡಿದು, ತಿಷ್ಯರವರು ಜಿತೇಂದ್ರನ ಬೆನ್ನಮೇಲೆ ಕೈಯಾಡಿಸುತ್ತ,

ತಿಷ್ಯ—ಕಂದಾ, ಕಲಿಂಗದೇಶದ ಗೌರವವನ್ನು ಕಾಯುವ ನಿನಗೆ ಜಿತೇಂದ್ರನೆಂಬ ಹೆಸರು ಒಪ್ಪುತ್ತದೆ; ಯಾಕಂದರೆ, ಇಂದ್ರನಿಗೂ ಅಸಾಧ್ಯವಾದ ಮನೋನಿಗ್ರಹದಿಂದ, ನೀನು ಇಂದು ನಿಶ್ಚಯವಾಗಿ ಇಂದ್ರನನ್ನು ಜಯಿಸಿರುತ್ತೀ. ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡದ್ದರಿಂದ, ಜಿತೇಂದ್ರಿಯನೆಂತಲೂ ನಿನ್ನನ್ನು ಕರೆಯಬಹುದು. ಸಚ್ಛೀಲನಾದ ತರುಣವೀರಾ, ನೀನು ಜಿತೇಂದ್ರನಾಗಿರುವೆಯಲ್ಲದೆ, ಜಿತೇಂದ್ರಿಯನೂ ಆಗಿರುತ್ತೀ.

ಈ ಪ್ರಸಂಗದಲ್ಲಿ ಜಿತೇಂದ್ರನ ಕಣ್ಣುಗಳೊಳಗಿಂದ ಆನಂದಬಾಷ್ಪಗಳು ಸುರಿಯುತ್ತಲಿದ್ದವು. ಕೆಲಕಾಲದ ಮೇಲೆ ಆತನು ಮುಖವನ್ನೆತ್ತಿ ನೋಡಲು, ಆಗ ಆಚಾರ್ಯ-ಮೊಗ್ಗಲೀಪುತ್ರ-ತಿಷ್ಯರು ಎಲ್ಲಿಯೂ ಕಣ್ಣಿಗೆ ಬೀಳಲಿಲ್ಲ. ಅವರು ಯಾವಾಗೋ ಅದೃಶ್ಯರಾಗಿ ಹೋಗಿದ್ದರು! ಜಿತೇಂದ್ರನು ಕ್ಷಣಮಾತ್ರ ಸರೋವರದ ತೀರದಲ್ಲಿ ಆಶ್ಚರ್ಯದಿಂದ ಯೋಚಿಸುತ್ತ ಕುಳಿತುಕೊಂಡು, ತನ್ನ ಮನೋನಿಗ್ರಹದಿಂದ ಇಂಥ ಉತ್ತಮ ಫಲಪ್ರಾಪ್ತಿಯಾದದ್ದಕ್ಕಾಗಿ ಮನಸ್ಸಿನಲ್ಲಿ, ಅಭಿಮಾನಪಡುತ್ತ, ಕಲಿಂಗದೇಶದ, ಹಾಗು ವೈದಿಕ

ಧರ್ಮದ ಉತ್ಕರ್ಷವಾಗುವ ಭವಿಷ್ಯವನ್ನು ಪುನಃ ಪುನಃ ಸ್ಮರಿಸಿ ಆನಂದ ಪಡುತ್ತ ಪ್ರಾತಃಸ್ನಾನಮಾಡಿ ಸಂಧ್ಯಾವಂದನವನ್ನು ತೀರಿಸಿ, ಉಲ್ಲಸಿತಚಿತ್ತನಾಗಿ, ತಾನು ಇಳಕೊಂಡಿದ್ದ ಧರ್ಮಶಾಲೆಗೆ ಹೊರಟುಹೋದನು.



## ೧೨ನೆಯ ಪ್ರಕರಣ--ಅದ್ಭುತಪ್ರಸಂಗ.



ಈ ಮೇರೆಗೆ ಮಹತ್ವಾಕಾಂಕ್ಷಿಯಾದ ಪ್ರಮೀಲೆಯು ಭಗ್ನಮನೋರಥಳಾಗಿ ಮರುದಿನ ಪಾಟಲೀಪುತ್ರದ ಕಡೆಗೆ ಸಾಗಿದಳು. ತನ್ನ ಮನಸ್ಸನ್ನು ಆಕರ್ಷಿಸಿಕೊಂಡಿದ್ದ ಬೌದ್ಧಭಿಕ್ಷುವು ಜಿತೇಂದ್ರನೆಂಬದು ಆಕೆಗೆ ಗೊತ್ತಾಗಲಿಲ್ಲ. ಆಕೆಯು ಪಾಟಲಿಪುತ್ರಕ್ಕೆ ಹೋದಬಳಿಕ ರಾಜಮಾತೆಯಾದ ಬುದ್ಧಿಮತಿಯನ್ನೂ, ಸಂಪುಷ್ಟಾಚಾರ್ಯರನ್ನೂ ಕಂಡಳು ಜಿತೇಂದ್ರರಾಜಕುಮಾರನು ಅಶೋಕನ ಬಳಿಗ ಬಂದದ್ದರಿಂದ, ತನಗೆ ಕಲಿಂಗದ ಸಿಂಹಾಸನವು ದೊರೆಯುವದಕ್ಕೆ ತೊಂದರೆಯಾಯಿತೆಂಬ ಸಂಗತಿಯು ಪ್ರಮೀಲೆಗೆ ಗೊತ್ತಾಯಿತು. ಜಿತೇಂದ್ರನು ಬೌದ್ಧಧರ್ಮವನ್ನು ಸ್ವೀಕರಿಸುವದಕ್ಕೆ ಒಡಂಬಟ್ಟರೆ ಕಲಿಂಗದ ಸಿಂಹಾಸನವು ತನ್ನ ಗಂಡನಾದ ವಿಶಾಖಾನಂದನಿಗೆ ದೊರೆಯದಂತಾಗಿ, ಕಲಿಂಗದ ರಾಣಿಯಾಗುವದಕ್ಕಾಗಿ ತಾನು ಮಾಡಿದ ಸಾಹಸವೆಲ್ಲ ವ್ಯರ್ಥವಾಗುವದೆಂದು ಆಕೆಯು ಚಿಂತಿಸಿದಳು. ಇತ್ತ ರಾಜಮಾತೆಯಾದ ಬುದ್ಧಿಮತಿಯು ತನ್ನ ಸವತಿಯ ಮಗನಾದ ಅಶೋಕನನ್ನು ಹೇಗಾದರೂ ಮಾಡಿ ನಾಶಗೊಳಿಸಿ, ತನ್ನ ಮಗನಾದ ವೀತಾಶೋಕನನ್ನು ಪಾಟಲಿಪುತ್ರದ ಸಿಂಹಾಸನದ ಮೇಲೆ ಕುಳ್ಳಿರಿಸಬೇಕೆಂದು ಹೊಂಚುಹಾಕಿದ್ದಳು. ಸಂಪುಷ್ಟಾಚಾರ್ಯನು ಬುದ್ಧಿಮತಿಯ ಪಕ್ಷದವನೆಂಬದನ್ನು ವಾಚಕರು ಬಲ್ಲರು. ಈ ಮೂವರು ದುಷ್ಟರು ಏಕಾಂತದಲ್ಲಿ ಕುಳಿತು, ತಮ್ಮ ದುರಾಲೋಚನೆಗಳು ಕೈಗೂಡುವದಕ್ಕಾಗಿ ಆಲೋಚಿಸತೊಡಗಿದರು. ಅಶೋಕನನ್ನು ನಾಶಗೊಳಿಸಿಬಿಟ್ಟರೆ, ತಮ್ಮ ಯಾವತ್ತು ಆಲೋಚನೆಗಳು ಕೈಗೂಡುವವೆಂದು

ಅವರು ನಿರ್ಧರಿಸಿದರು; ಆದರೆ ಲೋಕಪ್ರಿಯನಾದ ಅಶೋಕನಂಥ ಪ್ರತಾಪಿ ಯನ್ನು ನಾಶಗೊಳಿಸುವದು ಅವರಿಗೆ ಸುಸಾಧ್ಯವಿದ್ದಿಲ್ಲ; ಆದರೆ ಮತ್ಸರ ಸ್ವಭಾ ವದವರಿಗೆ ವಿಚಾರವೆಲ್ಲಿಂದ ಬರಬೇಕು?

ಇವರು ಹೀಗೆ ಆಲೋಚಿಸುತ್ತಿರಲು, ವೀತಾಶೋಕನು ಅಲ್ಲಿಗೆ ಬಂದು ತನ್ನ ತಾಯಿಯಾದ ಬುದ್ಧಿಮತಿಯನ್ನು ಕುರಿತು—ಅವ್ವಾ, ಈ ದಿನ ಭಗವಾನರವರು ಬೇಟೆಗೆ ಹೊರಡುವವರಿದ್ದಾರೆ. ರಾಜಧಾನಿಯಿಂದ ಎರಡು ಹಗದಾರಿಗಳಮೇಲೆ ಒಂದು ಭಯಂಕರವಾದ ಸಿಂಹವು ವನಪಾಲನ ಕಣ್ಣಿಗೆ ಬಿದ್ದಿತಂತೆ; ಮನುಷ್ಯರ ವಸತಿಗೆ ಇಷ್ಟು ಸಮೀಪದಲ್ಲಿ ಸಿಂಹವು ಇರ ಲಾಗದು. ಈಗ ಮೂರು ದಿನಗಳಿಂದ ಸಿಂಹವು ಕಣ್ಣಿಗೆ ಬಿದ್ದಿಲ್ಲವೆಂದು ಹೇಳಿದನು; ಆದ್ದರಿಂದ ನಾನು ನಾಳೆ ನನ್ನ ಕೆಲವು ಸೈನಿಕರನ್ನು ಕೂಡಿ ಕೊಂಡು ಬೇಟೆಗೆ ಹೊರಡುವೆನು. ಅಣ್ಣನಾದ ಭಗವಾನ್ ಅಶೋಕನೂ ಬರುವನು. ಆ ಸಿಂಹವು ಕಣ್ಣಿಗೆ ಬಿದ್ದ ಸ್ಥಳದಲ್ಲಿ ಕೆಲವು ಚೈತ್ಯಾಲಯಗಳೂ ಇರುತ್ತವೆ, ಅಲ್ಲಿ ಭಗವಾನ್ ಬುದ್ಧದೇವನು ಬಹುದಿವಸ ಧ್ಯಾನದಲ್ಲಿ ಹೊತ್ತು ಗಳೆದಿರುವದರಿಂದ, ಆ ಪವಿತ್ರ ಸ್ಥಳಗಳ ದರ್ಶನಕ್ಕಾಗಿ ಯಾರಾದರೂ ಬರು ತ್ತಿದ್ದರೆ, ಕೇಳೆಂದು ಅಣ್ಣನು ಹೇಳಿದನು. ನಾನು ಸುಭದ್ರಾಂಗಿ ಮಾತೆ ಯನ್ನೂ, ಇಂದಿರಾದೇವಿಯನ್ನೂ ಕೇಳಿದೆನು; ಅವರು ಮತ್ತೊಮ್ಮೆ ಯಾವಾಗಾದರೂ ಆ ಪವಿತ್ರ ಸ್ಥಳಗಳ ದರ್ಶನಕ್ಕೆ ಹೋಗೋಣ, ಇಂಥ ಬೇಟೆಯ ಪ್ರಸಂಗದಲ್ಲಿ ಬೇಡ, ಎಂದು ಹೇಳಿದರು. ಕಲಿಂಗದ ಯುವರಾಜ ನನ್ನು ಕರೆಯುವದಕ್ಕಾಗಿ ಅಣ್ಣನು ತುರಂಗ ದರ್ಬಾರಕ್ಕೆ ಹೋಗಿದ್ದಾನೆ. ನೀವು ಬರುತ್ತಿದ್ದರೆ, ಬರಬಹುದು. ಅನ್ನಲು, ಬುದ್ಧಿಮತಿಯು—ಕುಮಾರಾ, ಸುಭದ್ರಾಂಗಿಯೇ ಮೊದಲಾದವರು ಬಾರದಿದ್ದರೆ ನಾವೂ ಸದ್ಯಕ್ಕೆ ಬರುವದಿಲ್ಲ; ಮತ್ತೆ ಯಾವಾಗಾದರೂ ಹೋಗೋಣವಂತೆ ಎಂದು ಹೇಳಿದಳು.

ತಾಯಿಯ ಈ ಮಾತುಗಳನ್ನು ಕೇಳಿ ವೀತಾಶೋಕನು ಹಾಗೆಯೇ ಆಗಲೆಂದು ಹೊರಟುಹೋದನು. ಕುಮಾರನು ಅತ್ತಹೋಗಲು, ಇತ್ತ ಪ್ರಮೀಲೆಯು ಮನಸ್ಸಿನಲ್ಲಿ ಏನೋ ಯೋಚಿಸಿ, ಆನಂದದಿಂದ ಬುದ್ಧಿಮತಿಯನ್ನು ಕುರಿತು— ರಾಜಮಾತೆಯವರೇ, ಇಂದು ನೀವು ಬೇಟೆಗೆ ಬರುತ್ತೇನೆಂದು ಹೇಳಿರಿ.

ಇಂದಿನ ಬೇಟೆಯೇ ಅಶೋಕನ ನಾಶಕ್ಕೆ ಕಾರಣವಾಗುವಂತೆ ನಾನು ಯುಕ್ತಿಯನ್ನು ಯೋಚಿಸಿರುವೆನು. ಕರೆಯಿರಿ, ಕುಮಾರನನ್ನು ಕರೆದು ನಾವು ಬೇಟೆಗೆ ಬರುತ್ತೇವೆಂದು ಹೇಳಿರಿ. ನಾನೂ, ನೀವೂ, ಸಂಪುಷ್ಪಾಚಾರ್ಯರೂ ಚೈತ್ಯಾಲಯಗಳನ್ನು ನೋಡುವ ನೆವದಿಂದ ಬೇಟೆಗೆ ಹೋಗೋಣ, ಎಂದು ಹೇಳಿ, ತಾನೇ ವೀತಾಶೋಕನನ್ನು ಕರೆದು "ರಾಜಮಾತೆಯೂ ನಾವೂ ಚೈತ್ಯಾಲಯಗಳನ್ನು ನೋಡಲಿಕ್ಕೆ ಬರುವೆ"ವೆಂದು ಹೇಳಿದಳು. ಅದಕ್ಕೆ ವೀತಾಶೋಕನೂ ಸಂತೋಷದಿಂದ ಒಡಂಬಟ್ಟು ಹೊರಟುಹೋದನು. ಪ್ರಮೀಲೆಯ ಈ ಉತಾವಳಿಯನ್ನು ನೋಡಿ, ರಾಜಮಾತೆಯು—ಪ್ರಮೀಲೆ, ಅಶೋಕನ ನಾಶವನ್ನು ಕುರಿತು ನೀನು ಅಂಥ ಯುಕ್ತಿಯನ್ನೇನು ಯೋಚಿಸಿರುತ್ತೀ? ಬಹುದಿವಸಗಳಿಂದ ಹೊಂಚುಹಾಕಿದ್ದ ನಮಗೆ ಹೊಳೆಯದ ಯುಕ್ತಿಯು, ಒಮ್ಮೆಲೆ ನಿನ್ನ ಮನಸ್ಸಿಗೆ ಹೇಗೆ ಹೊಳೆಯಿತು? ಹೇಳು, ಮೊದಲು ನಮಗೆ ನಿನ್ನ ಯುಕ್ತಿಯನ್ನು ಹೇಳು, ಎಂದು ಆತುರಪಡಹತ್ತಿದಳು. ಅದಕ್ಕೆ ಪ್ರಮೀಲೆಯು—ಮಾತಾಜಿಯವರೇ, ಸಿಂಹದ ಬೇಟೆಯೆಂದಕೂಡಲೆ ನನಗೆ ಯುಕ್ತಿಯು ತೋಚಿತು. ಮೂರುದಿನ ಸಿಂಹವು ಎಲ್ಲಿಯೂ ಕಣ್ಣಿಗೆ ಬಿದ್ದಿಲ್ಲೆಂಬ ಸಂಗತಿಯನ್ನು ಕೇಳಿದ ಬಳಿಕಂತು, ಅಶೋಕನ ನಾಶದ ಉಪಾಯವನ್ನು ದೇವರೇ ಒದಗಿಸಿ ಕೊಟ್ಟನೆಂದು ನಾನು ತಿಳಿದೆನು. ನಾನು ಮೊನ್ನೆ ಪಾಟಲೀಪುತ್ರಕ್ಕೆ ಬರುವಾಗ ಆ ಚೈತ್ಯಾಲಯಗಳಲ್ಲಿ ವಿಶ್ರಾಂತಿಯನ್ನು ತಕ್ಕೊಳ್ಳುವದಕ್ಕಾಗಿ ಹೋಗಿದ್ದೆನು. ಚೈತ್ಯಾಲಯಗಳ ಬಳಿಯಲ್ಲಿ ಕೆಲವು ಗವಿಗಳಿರುತ್ತವೆ. ಅವನ್ನು ನೋಡುತ್ತ ನಾನು ಒಂದು ಗವಿಯಬಳಿಯಲ್ಲಿ ಹೋಗಿ, ಹಣಿಕಿ ನೋಡಲು, ಒಂದು ಭಯಂಕರವಾದ ಸಿಂಹವು ಮಲಗಿಕೊಂಡದ್ದು ನನ್ನ ಕಣ್ಣಿಗೆ ಬಿದ್ದಿತು. ಕೂಡಲೆ ನಾನು ಭಯದಿಂದ ಹಿಂದಕ್ಕೆ ಸರಿದು, ಗವಿಯ ಮೇಲುಗಡೆಯಿಂದ ಅದರ ಬಾಗಿಲವನ್ನು ಮುಚ್ಚಿದೆನು. ಸಿಂಹವು ಒಳಗೆ ಸಿಕ್ಕಿದ್ದರಿಂದ ಭಯಂಕರವಾಗಿ ಗರ್ಜಿಸತೊಡಗಿತು. ಏನು ಮಾಡಿದರೂ ಒಳಗಿನ ಸಿಂಹಕ್ಕೆ ಬಾಗಿಲು ತೆರೆಯಲಿಕ್ಕೆ ಬಗುವಹಾಗಿದ್ದಿಲ್ಲ. ಆ ಸಿಂಹವು ಈಗ ಮೂರು ದಿನ ಗವಿಯಲ್ಲಿ ಉಪವಾಸವಿರಬಹುದಾದ್ದರಿಂದ, ನೀವು ಗವಿಯನ್ನು ನೋಡುವ ನೆವಮಾಡಿ ಅಶೋಕನ ಕೈಯಿಂದ ಅದರ

ಬಾಗಿಲು ತೆರಸಿದರೆ, ಅನಾಯಾಸವಾಗಿ ಅಶೋಕನು ಆ ಹಸಿದ ಸಿಂಹದ ಬಾಯಿಗೆ ತುತ್ತಾಗುವನು. ಈ ಅಕಲ್ಪಿತ ಯೋಗವನ್ನು ನೋಡಿ ನನ್ನ ಮನಸ್ಸಿಗೆ ಬಹಳ ಸಂತೋಷವಾಗಿದೆ, ಎಂದು ಹೇಳಿದಳು.

ಪ್ರಮೀಲೆಯ ಈ ಮಾತುಗಳನ್ನು ಕೇಳಿ, ಬುದ್ಧಿಮತಿಗೂ, ಸಂಪುಷ್ಟಾಚಾರ್ಯನಿಗೂ ಬಹಳ ಸಂತೋಷವಾಯಿತು. ಮರುದಿನ ಬೆಳಗಾಯಿತು. ಸೂರ್ಯನು ತನ್ನ ಹೊಂಬಣ್ಣದ ಕರಗಳನ್ನು ಪಸರಿಸುತ್ತ ಮೇಲಕ್ಕೇರುವ ಹವಣಿಕೆಯಲ್ಲಿದ್ದನು. ಆಗ ಅಶೋಕನು ಪರಿಮಿತ ಪರಿವಾರದೊಡನೆ ಬೇಟೆಯಾಡಲಿಕ್ಕೆ ಹೊರಟು ಗಂಗಾತೀರದ ವನಶೋಭೆಯನ್ನು ಅವಲೋಕಿಸುತ್ತ ಸಾಗಿದ್ದನು. ಒಮ್ಮೆ ಆತನು ವೀತಾಶೋಕನ ಸಂಗಡಲೂ, ಮತ್ತೊಮ್ಮೆ ಕಲಿಂಗದ ಯುವರಾಜನೆನಿಸುವ ಪ್ರಣಯಿನಿಯ ಸಂಗಡಲೂ ಮಾತಾಡುತ್ತ, ಆನೆಯನ್ನು ಹತ್ತಿ ಉಲ್ಲಾಸದಿಂದ ನಡೆದಿದ್ದನು ಈ ಮೂವರೂ ಹತ್ತಿದ್ದ ಬಿಳಿಯ ಆನೆಯು ಬಹುಗಾಂಭೀರ್ಯದಿಂದ ಹೆಜ್ಜೆಗಳನ್ನಿಡುತ್ತಲಿತ್ತು. ಅದರ ಹಿಂದೆ ಬುದ್ಧಿಮತಿ, ಸಂಪುಷ್ಟಾಚಾರ್ಯ, ಪ್ರಮೀಲೆ ಈ ಮೂವರು ಆನೆಯನ್ನೇರಿ ತೀರ್ಥದರ್ಶನಕ್ಕಾಗಿ ಹೊರಟಿದ್ದರು. ವೀತಾಶೋಕನ ಪರಿವಾರದವರು ತಮಗೆ ಬೇಕಾದ ಶಸ್ತ್ರಾಸ್ತ್ರಗಳನ್ನು ತಕ್ಕೊಂಡು ಕುದುರೆಗಳನ್ನು ಮುಂದಕ್ಕೆ ನೂಕುತ್ತಲಿದ್ದರು. ಎಲ್ಲ ಪರಿವಾರವು ಸಿಂಹವಿರುವ ವನವನ್ನು ಸೇರಿತು. ತೀರ್ಥದರ್ಶನಕ್ಕಾಗಿ ಬಂದವರು ಚೈತ್ಯಾಲಯಗಳ ಕಡೆಗೆ ಸಾಗಿದರು. ಪ್ರಮೀಲೆಯು ಚೈತ್ಯಾಲಯಗಳನ್ನು ಮುಟ್ಟಿದ ಕೂಡಲೆ ಮೊದಲು ತನ್ನ ಗವಿಯನ್ನು ನೋಡಿದಳು. ಅದರಬಾಯಿಯು ಮುಚ್ಚಿದ್ದುಮುಚ್ಚಿದಹಾಗೆಯೇ ಇದ್ದದ್ದನ್ನು ನೋಡಿ, ಆಕೆಯು ಸಂತೋಷಪಟ್ಟು, ಆ ವರ್ತಮಾನವನ್ನು ರಾಜಮಾತೆಗೆ ತಿಳಿಸಿದಳು. ಇತ್ತ ಬೇಟಗಾರರು ಸಿಂಹವನ್ನು ಹುಡುಕಹತ್ತಿದರು.

ಬರಬರುತ್ತ ಎರಡು ಪ್ರಹರ ಹೊತ್ತು ಏರಿತು; ಆದರೂ ಸಿಂಹದ ಗೊತ್ತು ಹತ್ತಲೊಲ್ಲದು. ಅದು ಇಂಥ ಸ್ಥಳದಲ್ಲಿ ಇರಬಹುದೆಂಬ ತರ್ಕವೂ ಆಗಲೊಲ್ಲದು; ಆದ್ದರಿಂದ ಕೆಲವು ಹೊತ್ತು ಬೇಟೆಯಾಡುವದನ್ನು ನಿಲ್ಲಿಸಿ, ಅಶೋಕನೂ, ವೀತಾಶೋಕನೂ, ಪ್ರಣಯಿನಿಯೂ ಚೈತ್ಯಾಲಯಗಳ ಕಡೆಗೆ ಬರತೊಡಗಿದರು. ರಾಜಮಾತೆಯಾದ ಬುದ್ಧಿಮತಿಯು ಅಶೋಕನ

ಮರಣವು ಯಾವಾಗ ಒದಗುವದೆಂಬವನ್ನು ಎದುರುನೋಡುತ್ತಲಿದ್ದಳು. ಕುಮಾರವೀತಾಶೋಕನು ಅವಸರದಿಂದ ಊಟಮಾಡಿ ತನ್ನ ಜನರೊಡನೆ ಬೇಟಗೆ ಹೊರಟು, ಸಿಂಹವನ್ನು ಹುಡುಕುತ್ತಿದ್ದನು. ರಾಜಮಾತೆಯೂ, ಪ್ರಣಯಿನಿಯೂ ಅಶೋಕನೊಡನೆ ಮಾತಾಡುತ್ತ ಕುಳಿತದ್ದರಿಂದ, ಅಶೋಕನ ಅಂಗರಕ್ಷಕರು ಸ್ವಲ್ಪದೂರ ಒಂದು ಮರದಬುಡದಲ್ಲಿ ಹರಟೆಕೊಚ್ಚುತ್ತ ಕುಳಿತುಕೊಂಡಿದ್ದರು. ಪುರುಷವೇಷಧಾರಿಯಾದ ಪ್ರಣಯಿನಿಯನ್ನು ನೋಡಿದಕೂಡಲೆ ಪ್ರಮೀಲೆಗೆ, ತಾನು ಸರೋವರದಲ್ಲಿ ನೋಡಿದ್ದ ಭಿಕ್ಷುವಿನ ಸ್ಮರಣವಾಯಿತು. ತನ್ನ ಪ್ರಿಯಭಿಕ್ಷುವಿನ ರೂಪವನ್ನು ಪ್ರಣಯಿನಿಯ ರೂಪವು ಅಚ್ಚಳಿಯದೆ ಹೋಲುತ್ತಿರುವದನ್ನು ನೋಡಿ, ಆ ದುಷ್ಟ ಪ್ರಮೀಲೆಯು ಆಶ್ಚರ್ಯಪಡುತ್ತಿದ್ದಳು. ಆಕೆಯು ಪ್ರಣಯಿನಿಯನ್ನು ಎವೆಯಿಕ್ಕದೆ ನೋಡಹತ್ತಿದಳು. ತನ್ನ ಬಾಲಮಿತ್ರಳಾದ ಪ್ರಮೀಲೆಯು ಈರೀತಿಯಾಗಿ ತನ್ನನ್ನು ನೋಡುತ್ತಿರುವವರ ನಿಜವಾದ ಕಾರಣವು ಪ್ರಣಯಿನಿಗೆ ಗೊತ್ತಾಗಲಿಲ್ಲ. ಪ್ರಮೀಲೆಯ ಗೊತ್ತು ಪ್ರಣಯಿನಿಗೆ ಹತ್ತಿತು; ಆದರೆ ಪ್ರಣಯಿನಿಯ ಗುರುತು ಪ್ರಮೀಲೆಗೆ ಹತ್ತಲಿಲ್ಲ. ಕಲಿಂಗದೇಶದ ರಾಜಪುತ್ರಿಯು ಅಶೋಕನಬಳಿಗೆ ಪುರುಷವೇಷದಿಂದ ಬರುವದು ಪ್ರಮೀಲೆಗೆ ಸಂಭವವಾಗಿ ತೋರುವಂತೆಇದ್ದಿಲ್ಲ. ಪ್ರಮೀಲೆಯು ತನ್ನನ್ನು ಹೀಗೆ ದಿಟ್ಟಿಸಿ ನೋಡಿ,ತನ್ನ ಗುರುತು ಎಲ್ಲಿ ಹಿಡಿಯುವಳೋ ಎಂದು ಪ್ರಣಯಿನಿಯು ಮನಸ್ಸಿನಲ್ಲಿಹೆದರಿದ್ದಳು; ಆದರೆ ಸುದೈವದಿಂದ ಅಂಥ ಪ್ರಸಂಗವೇನೂ ಒದಗಲಿಲ್ಲ.

ರಾಜಮಾತೆಯು ಅಶೋಕನ ಸಂಗಡ ಮಾತಾಡುತ್ತ ತಕ್ಕ ಕಾಲವನ್ನು ನಿರೀಕ್ಷಿಸಹತ್ತಿದಳು. ಬಳಿಯಲ್ಲಿ ಅಶೋಕನ ಹಿತಚಿಂತಕರು ಯಾರೂ ಇಲ್ಲದ್ದನ್ನು ನೋಡಿ, ಆಕೆಯು ಅಶೋಕನನ್ನು ಚೈತ್ಯಾಲಯ ನೋಡಲಿಕ್ಕೆಂದು ಎಬ್ಬಿಸಿಕೊಂಡು ಹೊರಟಳು. ಅಂಥ ಕಠೋರಹೃದಯದ ಬುದ್ಧಿಮತಿಗಾದರೂ ಸದ್ಗುಣಮಂಡಿತನಾದ ಅಶೋಕನನ್ನು ಗುಹೆಯಕಡೆಗೆ ಕರೆದೊಯ್ಯುವಾಗ ಅಸಮಾಧಾನವಾಯಿತು; ಆದರೆ ಧರ್ಮಗುರುವೆನಿಸುವ ಸಂಪುಷ್ಟಾಚಾರ್ಯನ ಕಠೋರ ಹೃದಯಕ್ಕೆ ಮಾತ್ರ ದ್ರವವೊಡೆಯದೆ, ಆ ದುಷ್ಟನು ರಾಜಮಾತೆಯ ಕಾರ್ಯಕ್ಕೆ ಹಾಸ್ಯಮುಖದಿಂದ ಉತ್ತೇಜನ ಕೊಡಹತ್ತಿದನು.

ಆಗ ಆಕೆಯು ಅಶೋಕನನ್ನು ಕುರಿತು—ಭಗವನ್, ಈ ಚೈತ್ಯಾಲಯದ ಬಳಿಯಲ್ಲಿ ಬೇರೆ ಕೆಲವು ಚೈತ್ಯಾಲಯಗಳಿರುತ್ತವೆಂದು ಕೇಳಿದ್ದೇನೆ. ಅವನ್ನು ನೋಡುವ ಇಚ್ಛೆಯು ನನಗಾಗಿದೆ, ಅನ್ನಲು, ಆಜ್ಞಾಧಾರಕ ನಮ್ರಪುತ್ರನಾದ ಅಶೋಕನು, ಕಲಿಂಗದ ಯುವರಾಜನಿಗೆ ಸ್ವಲ್ಪ ವಿಶ್ರಮಿಸುವದಕೆ ಹೇಳಿ, ತಾನು ಚೈತ್ಯಾಲಯಗಳನ್ನು ತೋರಿಸಲಿಕ್ಕೆ ತಾಯಿಯ ಸಂಗಡ ಹೊರಟನು. ಪುತ್ರವಧಕ್ಕಾಗಿ ಉದ್ಯುಕ್ತಳಾಗಿದ್ದ ಬುದ್ಧಿಮತಿಯು ಚೈತ್ಯಾಲಯಗಳನ್ನು ನೋಡುತ್ತ ನೋಡುತ್ತ ಪಶ್ಚಿಮದಿಕ್ಕಿನ ಚೈತ್ಯಾಲಯದ ಕಡೆಗೆ ಹೊರಳಿದಳು. ಆಗ ಆಕೆಯು ಗವಿಯ ಬಾಗಿಲಿಗೆ ಮುಚ್ಚಿದ್ದ ಕಲ್ಲಿನ ಕಡೆಗೆ ಬೆರಳುಮಾಡಿ ಅಶೋಕನನ್ನು ಕುರಿತು--

ಬುದ್ಧಿಮತಿ—ಭಗವನ್, ಇದೇನು?

ಅಶೋಕ—ಇದು ಒಂದು ಗವಿಯಿರಬಹುದಾಗಿ ತೋರುತ್ತದೆ; ಈ ಕಲ್ಲು ಗವಿಯನ್ನು ಮುಚ್ಚಲಿಕ್ಕೆ ಬಾಗಿಲಿನಂತೆ ಉಪಯೋಗಿಸಲ್ಪಟ್ಟಿರುವದು.

ಬುದ್ಧಿಮತಿ—ಈ ಗವಿಯನ್ನು ಹೊಕ್ಕು ನೋಡಬೇಕೆಂದು ನನ್ನ ಮನಸ್ಸು ಹರಿಯುತ್ತದೆ. ಶ್ರೀಬುದ್ಧನು ಇಲ್ಲಿಯೂ ಧರ್ಮಧ್ಯಾನದಲ್ಲಿ ಕಾಲವನ್ನು ಕಳೆದಿರಬಹುದು.

ಅಶೋಕ—ಕಳೆದಿರಬಹುದು, ಆದರೆ ಈ ಗವಿಯಲ್ಲಿ ನೆನಪಿನಲ್ಲಿಡತಕ್ಕಂತಹದೇನಿರುವದು?

ಬುದ್ಧಿಮತಿ—ಎರಡನೆಯದೇನಿರಬೇಕು? ಆ ಸ್ಥಳದ ಪವಿತ್ರತೆಯು! ಭಗವನ್, ನಿನ್ನಂಥ ಬಲಿಷ್ಠನಿಗೆ ಈ ಕಲ್ಲನ್ನು ತೆಗೆಯುವದು ಅಸಾಧ್ಯವಲ್ಲ.

ಅಶೋಕ—ಮಾತೃಶ್ರೀ, ಈ ಗವಿಯನ್ನು ನೋಡುವ ಇಚ್ಛೆಯು ನಿನಗಿದ್ದರೆ, ನಾನು ಕಲ್ಲನ್ನು ತೆಗೆಯುತ್ತೇನೆ. ಸಂತೋಷದಿಂದ ನೋಡಬೇಕು.

ಈಮೇರೆಗೆ ನುಡಿದು, ಅಶೋಕನು ಆ ಕಲ್ಲನ್ನು ತೆಗೆಯುವದಕ್ಕಾಗಿ, ಕೆಳಗೆ ಬಗ್ಗಿದನು; ಈ ಸಂಧಿಯನ್ನು ಸಾಧಿಸಿ ರಾಜಮಾತೆಯು, ತನ್ನ ಜೀವ

ವನ್ನು ಉಳಿಸಿಕೊಳ್ಳುವದಕ್ಕಾಗಿ ಅಲ್ಲಿಂದ ಕಾಲ್ತೆಗೆದಳು. ಆಕೆಯು ಚೈತ್ಯಾಲಯದ ಬಾಗಿಲವನ್ನು ದಾಟಿ ಹೋಗುವಷ್ಟರಲ್ಲ, ಗವಿಯ ಬಾಗಿಲನ್ನು ತೆರೆದದ್ದರಿಂದ ಆ ಭಯಂಕರವಾದ ಸಿಂಹವು ಗರ್ಜಿಸುತ್ತ, ಅಶೋಕನ ಮೈಮೇಲೆ ಹಾರುವದಕ್ಕಾಗಿ ಜಪ್ಪುಹಾಕಿತು. ಇದನ್ನು ನೋಡಿ ಬುದ್ಧಿಮತಿಯು ಸಂತೋಷದಿಂದ ಉಬ್ಬುತ್ತ, ಪ್ರಮೀಲೆ ಹಾಗು ಸಂಪುಷ್ಟಾಚಾರ್ಯರೊಡನೆ ದೂರಓಡಿಹೋಗಿ ನೋಡುತ್ತ ನಿಂತುಕೊಂಡಳು. ಅಶೋಕನು ಬಾರದೆ ರಾಜಮಾತೆಯೊಬ್ಬಳೇ ಓಡಿಬಂದದ್ದನ್ನು ನೋಡಿ, ಪುರುಷವೇಷಧಾರಿಯಾದ ಪ್ರಣಯಿನಿಯು ಗಾಬರಿಯಾಗಿ, ಇದು ಏನೋ ಘಾತಕಪ್ರಸಂಗ ಕಾಣುತ್ತದೆಂದು ಅಶೋಕನ ಬಳಿಗೆ ಓಡುತ್ತ ಬಂದಳು. ಚೈತ್ಯಾಲಯದ ಬಾಗಿಲಿಗೆ ಹೋಗುವದರೊಳಗಾಗಿ, ಒಂದು ಭಯಂಕರ ನೋಟವು ಆಕೆಯ ಕಣ್ಣಿಗೆ ಬಿದ್ದಿತು. ಅಶೋಕನು ಅಂಗಾತ ಬಿದ್ದಿದ್ದು, ಒಂದು ಭಯಂಕರವಾದ ಸಿಂಹವು ಆತನ ಎದೆಯಮೇಲೆ ಒಂದು ಕಾಲನ್ನು ಇಟ್ಟು, ಮತ್ತೊಂದು ಕಾಲಿನಿಂದ ಅಶೋಕನ ಹೃದಯವನ್ನು ಸೀಳುವದಕ್ಕಾಗಿ ಹವಣಿಸಿ, ಅತ್ಯಂತ ಕ್ರುದ್ಧವಾದ ದೃಷ್ಟಿಯಿಂದ ಅಶೋಕನನ್ನು ನೋಡುತ್ತಲಿತ್ತು. ಮೃಗರಾಜನೆನಿಸುವ ಸಿಂಹವು, ಇಷ್ಟುಹೊತ್ತಿಗೆ ಅಶೋಕನನ್ನು ಸಂಹರಿಸಿ, ತನ್ನ ಕ್ಷುಧಾಶಾಂತಿಯನ್ನು ಮಾಡಿಕೊಳ್ಳಬಹುದಾಗಿತ್ತು, ಆದರೆ ಅಂಥ ಕ್ರೂರಪ್ರಾಣಿಯು ಕೂಡ, ಅಶೋಕನ ಪುಣ್ಯಪ್ರತಾಪದಿಂದಲೇ ಸ್ವಲ್ಪ ತಡೆದಿತ್ತು. ಅದು ಇನ್ನು ಮೇಲೆ ತನ್ನ ನಖಪಂಜರದಿಂದ ಅಶೋಕನ ವಕ್ಷಸ್ಥಳವನ್ನು ಸೀಳತಕ್ಕದ್ದು; ಅಷ್ಟರಲ್ಲಿ ಪ್ರಣಯಿನಿಯು— “ಹಾಯ್ ಹಾಯ್! ಭಗವನ್, ಇದೇನು ಅನರ್ಥವು?” ಎಂದು ಕೂಗುತ್ತ ಸಿಂಹದ ಬಳಿಗೆ ಬಂದಳು. ಆಗ ಅಶೋಕನು ಪ್ರಣಯಿನಿಯನ್ನು ಕುರಿತು—

ಅಶೋಕ—ನಿಲ್ಲು, ಯುವರಾಜಾನಿಲ್ಲು! ಹೀಗೆ ಜೀವದ ಹಂಗು ದೊರೆದು ಮುಂದಕ್ಕೆ ಬರಬೇಡ; ನೀನು ಒಂದು ಹೆಜ್ಜೆಯನ್ನು ಸಹ ಮುಂದಕ್ಕೆ ಇಡಲಾಗದು! ಹೋಗು, ಹಿಂದಿರುಗು; ನನ್ನ ಮೇಲೆ ನಿನ್ನ ನಿಸ್ಸೀಮ ಭಕ್ತಿಯಿರುವದೆಂಬದನ್ನು ನಾನು ಬಲ್ಲೆನು. ಸುಮ್ಮನೆ ಮುಂದಕ್ಕೆ ಬಂದು ಜೀವವನ್ನು ಕಳಕೊಳ್ಳಬೇಡ. ಯಾವ ಉಪಾಯದಿಂದಲೂ ನಾನು ಪಾರಾ

ಗುವಂತೆ ಇಲ್ಲ. ಸರಿ ಹಿಂದಕ್ಕೆ, ನಿನ್ನಂಥ ಸುಕುಮಾರ ರಾಜಪುತ್ರನು ಶಸ್ತ್ರಹೀನನಾಗಿ ಬಂದು ಮಾಡುವದೇನು?

ಪ್ರಣಯಿನಿ—ಭಗವನ್, ತನ್ನ ಶತ್ರುವನ್ನು ಮಿತ್ರನಂತೆ ನಡೆಸಿಕೊಳ್ಳುವ ಉದಾರಚಕ್ರವರ್ತಿಯ ವಿಪತ್ತನ್ನು ಕಣ್ಣಿನಿಂದ ನೋಡುತ್ತ ನಿಂತುಕೊಳ್ಳುವದು ಕಲಿಂಗರಾಜಪುತ್ರರ ಶೀಲವಲ್ಲ. ವಿಪನ್ನಿವಾರಣವು ಅವರ ಕುಲಪರಂಪರಾಗತ ಸಾಂಪ್ರದಾಯವಾಗಿರುತ್ತದೆ. ನಾನು ಶಸ್ತ್ರಹೀನನಾಗಿದ್ದರೆ, ಕೇಸರಿಗೆ ಮೊದಲಿನ ತುತ್ತಾಗುವದಕ್ಕಾಗಿ ನನ್ನ ದೇಹವನ್ನು ಅದರ ಬಾಯಿಗೆ ಒಡ್ಡುತ್ತೇನೆ! ಅಷ್ಟರಲ್ಲಿ ಯಾರಾದರೂ ಬಂದು ತಮ್ಮನ್ನು ಬಿಡಿಸಿಕೊಳ್ಳಲಿ!

ಈಮೇರೆಗೆ ನುಡಿದು, ಪ್ರಣಯಿನಿಯು ಅಶೋಕನ ಮೈಮೇಲೆ ಬಿದ್ದು, ಸಿಂಹವನ್ನು ಕುರಿತು—ವನರಾಜಾ, ನೀನು ಕ್ಷುಧೆಯನ್ನು ಶಾಂತಮಾಡಿಕೊಳ್ಳಬೇಕಾಗಿದ್ದರೆ, ನಿನ್ನ ನಖಪಂಜರದ ಆಘಾತವನ್ನು ನನ್ನ ಮೇಲೆ ಮಾಡು. ಈಹೊತ್ತಿಗೆ ಭರತಖಂಡಕ್ಕೆಲ್ಲ ದೇವರಂತೆ ಪೂಜ್ಯನಾಗಿರುವ ಭಗವಾನ್ ಅಶೋಕಚಕ್ರವರ್ತಿಯಿಂದ ಲೋಕಹಿತದ ಹಲವು ಕಾರ್ಯಗಳು ಆಗಬೇಕಾಗಿವೆ. ಆತನನ್ನು ಸಂಕಟದಿಂದ ಮುಕ್ತನಾಗ ಮಾಡು. (ಅಶೋಕನನ್ನುದ್ದೇಶಿಸಿ,) ಭಗವನ್, ಈ ವನರಾಜನು ಮೊದಲ ತುತ್ತಿಗೆ ನನ್ನನ್ನು ತಿನ್ನುವನು. ಅಷ್ಟರಲ್ಲಿ ಯಾರಾದರೂ ಬಂದು ನಿಮ್ಮನ್ನು ಬಿಡಿಸಿದರೆ, ನಿಮ್ಮ ಈ ಮಿತ್ರನ ಈ ಜನ್ಮವು ಸಾರ್ಥಕವಾಗುವದು. ಭಗವಾನರವರಿಗೆ ಈ ಮಿತ್ರನ ಸ್ಮರಣವಿರಲಿ; ಕಲಿಂಗದೇಶದ ಪುರಾತನನಾದ ಅರಸುಮನೆತನದ ಮೇಲೆ ಚಕ್ರವರ್ತಿಯು ನ್ಯಾಯದ ದೃಷ್ಟಿಯಿರಲಿ, ಇದೇ ನನ್ನ ಕಡೆಯ ಪ್ರಾರ್ಥನೆಯು!!

ಈಮೇರೆಗೆ ನುಡಿದು, ಪ್ರಣಯಿನಿಯು ಅಶೋಕನ ಮೈಮೇಲೆ ಬಿದ್ದುಕೊಳ್ಳಲು, ಸಿಂಹದ ಸಿಟ್ಟು ಕಡಿಮೆಯಾಗಹತ್ತಿತು. ಅದರ ಮುಖಮುದ್ರೆಯು ಸೌಮ್ಯವಾಗಹತ್ತಿತು. ಅದು ತನ್ನ ನಖಪಂಜರವನ್ನು ಹಿಂದಕ್ಕೆ ಜಗ್ಗಿಕೊಂಡು ಅಶೋಕನನ್ನೂ, ಪ್ರಣಯಿನಿಯನ್ನೂ ಬಿಟ್ಟು ಹಿಂದಕ್ಕೆ ಸರಿದು ಕಣ್ಣೀರು ಸುರಿಸಹತ್ತಿತು. ಸಿಂಹವು ತನ್ನ ಜಾತಿಸ್ವಭಾವವನ್ನು

ಮರೆತು ಆಕಳಂತೆ ಸೌಮ್ಯಮುದ್ರೆಯನ್ನು ತಾಳಿ, ಕಣ್ಣೀರು ಸುರಿಸುವದನ್ನು ನೋಡಿ ಅಶೋಕನು ಆಶ್ಚರ್ಯಪಟ್ಟನು. ಆತನು ಸಿಂಹದ ಕುತ್ತಿಗೆಯನ್ನು ಆಲಿಂಗಿಸಿ, ತನ್ನ ಉತ್ತರೀಯದಿಂದ ಸಿಂಹದ ಕಣ್ಣುಗಳನ್ನು ಒರಿಸಹತ್ತಿದನು. ಪ್ರಣಯಿನಿಯು ಸಿಂಹದ ಬೆನ್ನಮೇಲೆ ಕೈಯಾಡಿಸುತ್ತ ಅದನ್ನು ರಮಿಸಹತ್ತಿದಳು. ಇದನ್ನು ನೋಡುವವರಿಗೆಲ್ಲ ಪರಮಾಶ್ಚರ್ಯವಾಯಿತು. ಎಲ್ಲರ ಕಣ್ಣುಗಳೊಳಗಿಂದ ಆನಂದಾಶ್ರುಗಳು ಸುರಿಯಹತ್ತಿದವು ರಾಜಮಾತೆಯೂ, ಸಂಪುಷ್ಟಾಚಾರ್ಯನೂ, ಪ್ರಮೀಲೆಯೂ ತಮ್ಮ ದುರಾಲೋಚನೆಯು ಕೈಗೂಡಲಿಲ್ಲೆಂಬ ದುಃಖದಿಂದ ಕಣ್ಣೀರುಸುರಿಸಹತ್ತಿದರು. ಒಬ್ಬೊಬ್ಬರೇ ಜನರು ಕೂಡಹತ್ತಿದರು ಜನಸಮೂಹವನ್ನು ನೋಡಿ, ಅಶೋಕನು ಎಚ್ಚತ್ತು ಅವರೆಲ್ಲರನ್ನು ಕುರಿತು—ನಮ್ಮನ್ನು ಕೊಲ್ಲಬೇಕೆಂದುಮಾಡಿದ ದುಷ್ಕರ ಯೋಚನೆಯು ಕೈಗೂಡಲಿಲ್ಲ. ಆದುಷ್ಕರ ಶಾಸನಮಾಡಲಿಕ್ಕೆ ಈಗ ವಿಲಂಬವೂ ಆಗುವಹಾಗಿಲ್ಲ. ಆದರೆ ಹಿಂಸ್ರಪಶುವಾದ ಈಸಿಂಹವು ಕೂಡ ಕ್ಷಮಿಸಿ ನನಗೆ ಪ್ರಾಣದಾನಮಾಡಿರುತ್ತದೆ. ಈ ವನರಾಜನ ಔದಾರ್ಯವನ್ನು ನೋಡಿ ನಾನಾದರೂ ಈಗ ಅಪರಾಧಿಗಳನ್ನು ಕ್ಷಮಿಸುತ್ತೇನೆ. ಅವರು ಪಶ್ಚಾತ್ತಾಪಪಟ್ಟು ತಮ್ಮ ದುಷ್ಟಸ್ವಭಾವವನ್ನು ಬಿಡತಕ್ಕದ್ದು, ಎಂದು ಬುದ್ಧಿಮತಿಯನ್ನೂ, ಸಂಪುಷ್ಟಾಚಾರ್ಯನನ್ನೂ, ಪ್ರಮೀಲೆಯನ್ನೂ ಭೇದಕದೃಷ್ಟಿಯಿಂದ ನೋಡಿದನು.

ಬಳಿಕ ಆ ಬೌದ್ಧಚಕ್ರವರ್ತಿಯು ಮಿಕ್ಕಜನರನ್ನು ಕುರಿತು—ಬಂಧುಗಳೇ, ಈ ಸಿಂಹವು ವ್ಯಕ್ತಮಾಡಿದ ಕ್ಷಮಾಗುಣವನ್ನೂ, ಅಹಿಂಸೆಯ ಉಂತಿಮ ತತ್ವವನ್ನೂ ಮುಂದಿಟ್ಟುಕೊಂಡು, ನಮ್ಮ ಪ್ರಜಾಜನರು ನಡೆಯುವಂತೆ ಬೇಗನೆ ವ್ಯವಸ್ಥೆ ಮಾಡುವೆನು. ಕ್ರೂರಮೃಗವೇ ಮನುಷ್ಯರನ್ನು ಕ್ಷಮಿಸುತ್ತಿರಲು, ಜ್ಞಾನಿಗಳೆನಿಸಿಕೊಳ್ಳುವ ಮನುಷ್ಯರು ಮೃಗಗಳ ಬೇಟೆಯಾಡುವದು ಅನ್ಯಾಯವಲ್ಲವೆ? ಇಂದಿನಿಂದ ಬೇಟೆಯಾಡುವದನ್ನು ನಿಲ್ಲಿಸಿಬಿಡುವೆನು. ನನ್ನ ರಾಜ್ಯದಲ್ಲಾಗಲಿ, ನನ್ನ ಮಾಂಡಲಿಕರ ರಾಜ್ಯದಲ್ಲಾಗಲಿ, ಯಾರಾದರೂ ಬೇಟೆಯಾಡಿದರೆ, ಮನುಷ್ಯವಧೆಮಾಡಿದ ಶಿಕ್ಷೆಗೆ ಪಾತ್ರರಾಗುವರೆಂದು ಪ್ರಸಿದ್ಧಗೊಳಿಸುವೆನು. ವನರಾಜಾ, ಇಂದು ನೀನು ನನಗೆ

ಗುರುವಾದೆ! ಎಂದು ನುಡಿದು, ಪ್ರಣಯಿನಿಯನ್ನು ಕುರಿತು—ಜಿತೇಂದ್ರ ರಾಜಪುತ್ರಾ, ನೀನು ಅದ್ವಿತೀಯ ಪುರುಷನಿರುತ್ತೀ. ನಿನ್ನನ್ನು ನೋಡಿದ್ದರಿಂದಲೇ ಈ ಸಿಂಹವು ನನಗೆ ಜೀವದಾನ ಮಾಡಿತು. ಇಂಥ ಮಹದುಪಕಾರ ಮಾಡಿಸಿಕೊಳ್ಳಲಿಕ್ಕೆ, ಈ ಅಶೋಕನು ಪಾತ್ರನಲ್ಲದಿರಲು ನೀನು ಔದಾರ್ಯದಿಂದ ನನಗೆ ಪ್ರಾಣದಾನಮಾಡಿ, ನನ್ನನ್ನು ಕೃತಜ್ಞನಾಗಮಾಡಿದೆ! ನನ್ನಿಂದ ಕಲಿಂಗದೇಶದ ಸರ್ವಸ್ವವು ನಾಶವಾಗಿರಲು, ಹಾಗು ನಾನು ಕಲಿಂಗದೇಶದ ಎಷ್ಟೋ ಪ್ರಜೆಗಳನ್ನು ಜುಲುಮೆಯಿಂದ ಬೌದ್ಧರನ್ನಾಗಮಾಡಿರಲು, ವೈದಿಕಧರ್ಮದ ಜಿತೇಂದ್ರನು ನೀನು ನನ್ನ ಪ್ರಾಣಕ್ಕೆ ಪ್ರತಿಯಾಗಿ, ನಿನ್ನ ಪ್ರಾಣವನ್ನು ಕೊಟ್ಟು, ನನ್ನನ್ನು ಬದುಕಿಸಿದೆಯಲ್ಲ! ಶಾಬಾಸ!! ಇಂಥ ಉದಾತ್ತಭಾವನೆಯನ್ನು ಉಂಟುಮಾಡುವ ಧರ್ಮವು ಶ್ರೇಷ್ಠವಾದದ್ದು; ಅಂಥ ಧರ್ಮಗುರುಗಳು ಶ್ರೇಷ್ಠರಾದವರು! ಎಲೈ ಚಿದಾನಂದಾಶ್ರಮಸ್ಥ-ಬ್ರಹ್ಮಚಾರಿಯೇ, ಈಗ ನಾನು ನಿನಗೆ ಏನು ಉಪಕಾರ ಮಾಡಲಿ ಹೇಳು!

ಅಶೋಕನ ಈ ಮಾತುಗಳನ್ನು ಕೇಳಿ, ದುಷ್ಟಪ್ರಮೀಲೆಯು ತನ್ನ ಕಲಿಂಗದ ರಾಜ್ಯವು ಕೈಬಿಟ್ಟಿತೆಂದು ಚಿಂತಿಸತೊಡಗಿದಳು. ಅಷ್ಟರಲ್ಲಿ ಪ್ರಣಯಿನಿಯು ಅಶೋಕನನ್ನು ಕುರಿತು—ಭಗವನ್, ನನ್ನಿಂದಾದ ಅಂಥ ಉಪಕೃತಿಯೇನು? ಮಿತ್ರಧರ್ಮಕ್ಕನುಸರಿಸಿ ನಾನು ಮಾಡತಕ್ಕದ್ದನ್ನೇ ಮಾಡಿರುವೆನು. ಉಪಕಾರ ಮಾಡಿದ್ದರೆ, ಈ ವನರಾಜನು ಮಾತ್ರ ನಮ್ಮಿಬ್ಬರಮೇಲೆಯೂ ಉಪಕಾರ ಮಾಡಿದ್ದಾನೆ. ಉದಾರ ಚಕ್ರವರ್ತಿಯೇ, ಏನು ಉಪಕಾರ ಮಾಡಲೆಂದು ನನ್ನನ್ನು ನೀನು ಕೇಳುವೆಯಷ್ಟೇ; ಉಪಕಾರ ಮಾಡುವದೇ ನಿನ್ನ ಮನಸ್ಸಿನಲ್ಲಿ ಇದ್ದರೆ, ನನ್ನ ವಿಷಯದ ಮೈತ್ರೀಭಾವವು ನಿನ್ನ ಹೃದಯದಲ್ಲಿ ಸ್ಥಿರವಾಗಿರಲಿ! ಸಿಂಹದ ಕೃಪೆಯಿಂದ ಬದುಕಿ ಉಳಿದ ನಾವಿಬ್ಬರೂ ಮರಣಪರ್ಯಂತವಾಗಿ ಮಿತ್ರರಾಗಿ ಇರೋಣ. ಸಖಿತ್ವಕ್ಕಿಂತ ಉನ್ನತವಾದದ್ದು ಜಗತ್ತಿನಲ್ಲಿ ಮತ್ತೊಂದಿಲ್ಲೆಂದು ದೊಡ್ಡವರು ಹೇಳುತ್ತಿರುವರು. ನೀನು ನಿನ್ನ ಪ್ರಜೆಗಳಲ್ಲಿ ಕ್ಷಮೆ, ಅಹಿಂಸೆ, ಬಂಧುಪ್ರೇಮ ಮೊದಲಾದ ಸದ್ಗುಣಗಳನ್ನು ಬೆಳಿಸಿದರೆ,

ನನಗೆ ಅನಂತ ವರಪ್ರದಾನ ಮಾಡಿದಹಾಗಾಯಿತೆಂದು ತಿಳಿಯುವೆನು. ಉದಾರಾಂತಃಕರಣದ ಚಕ್ರವರ್ತಿಯೇ, ನಿನ್ನ ಉದಾರ ಚರಿತ್ರವನ್ನು ನೋಡಿ, ಕಲಿಂಗದ ಯುವರಾಜನು ಧನ್ಯನಾಗಿರಲು, ಮಿತ್ರತ್ವದ ಅಭಿವೃದ್ಧಿಯ ಹೊರತು ಆತನು ಬೇರೆ ಯಾವದನ್ನು ಯಾಚಿಸುವನು? ಎಂದು ನುಡಿಯಲು, ಕಂಠಬಿಗಿದು ಕಣ್ಣೀರು ಸುರಿಸುತ್ತ ನಿಂತುಕೊಂಡಿದ್ದ ಕೋಮಲಾಂತಃಕರಣದ ಅಶೋಕನು, ಮಾತಾಡಲಾರದೆ ಪ್ರಣಯಿನಿಯನ್ನು ದೃಢವಾಗಿ ಆಲಿಂಗಿಸಿದನು. ಅಕಲ್ಪಿತವಾಗಿ ಒದಗಿದ್ದ ಈ ಆಲಿಂಗನವು ಪ್ರಣಯಿನಿಗೆ ಬೇಡವಾಗಿದ್ದರೂ, ಇದು ಕೇವಲ ಮಿತ್ರತ್ವದ ಭಾವನೆಯಿಂದಾದ ಆಲಿಂಗನವೆಂದು ಆಕೆಯು ಸಮಾಧಾನಮಾಡಿಕೊಂಡು ಸುಮ್ಮನಿರಬೇಕಾಯಿತು ಅಷ್ಟರಲ್ಲಿ ವೀತಾಶೋಕನು ಅಣ್ಣನ ಗಂಡಾಂತರದ ಸುದ್ದಿಯನ್ನು ಕೇಳಿ, ಓಡುತ್ತ ಬರಲು, ಅಶೋಕನು ಪ್ರಣಯಿನಿಯನ್ನು ಬಿಟ್ಟು ಬಂಧುಪ್ರೇಮದಿಂದ ವೀತಾಶೋಕನನ್ನು ಆಲಿಂಗಿಸಿದನು. ವೀತಾಶೋಕನಿಗೆ ಪ್ರಣಯಿನಿಯು ದೇವರಂತೆ ಕಂಡಳು. ತನ್ನ ಪ್ರಿಯಬಂಧುವು ಪ್ರಾಣಸಂಕಟದಿಂದ ಪಾರಾದದ್ದನ್ನು ನೋಡಿ, ಸಾತ್ವಿಕಸ್ವಭಾವದ ಪ್ರೇಮಲಮೂರ್ತಿಯಾದ ವೀತಾಶೋಕನಿಗೆ ಪರಮಾನಂದವಾಯಿತು.

ಈಮೇರೆಗೆ ಉದಾರಚರಿತ್ರದ ವ್ಯಕ್ತಿಗಳ ಔದಾರ್ಯದಿಂದ ಆ ಬೌದ್ಧ ಚೈತ್ಯಾಲಯದ ಪ್ರದೇಶದಲ್ಲಿ ಕೆಳಗೆ-ಮೇಲೆ-ಹೊರಗೆ-ಒಳಗೆ ಎಲ್ಲ ಕಡೆಯಲ್ಲಿ ಆನಂದವು ತುಂಬಿ ತುಳುಕುತ್ತಿರಲು, ಚಕ್ರವರ್ತಿಯು ಪರಿವಾರದೊಡನೆ ರಾಜಧಾನಿಗೆ ತಿರುಗಿದನು ಸಿಂಹವು ಪ್ರಣಯಿನಿಯನ್ನು ಹಿಂಬಾಲಿಸಿ ಹೊರಟಿತು. ಸಿಂಹದ ಈ ಸ್ಥಿತಿಯನ್ನು ನೋಡಿ ವಾಚಕರು ಆಶ್ಚರ್ಯಪಡುತ್ತಿರಬಹುದು; ಆದರೆ ಅವರನ್ನು ಬಹಳ ಹೊತ್ತು ಆಶ್ಚರ್ಯಮಗ್ನಮಾಡುವದು ಯೋಗ್ಯವಲ್ಲ. ಹರಿದ್ವಾರದಲ್ಲಿ ಜಿತೇಂದ್ರನಿಗೆ ಒಲಿದ ಒಂದು ಸಿಂಹವಿದ್ದದ್ದನ್ನು ವಾಚಕರು ಬಲ್ಲರಷ್ಟೇ? ಅಶೋಕನ ತಂಗಿಯಾದ ಇಂದಿರೆಯ ಚಿಗರೆಯನ್ನು ಆ ಸಿಂಹವು ಬೆನ್ನಹತ್ತಿದಾಗ ನಡೆದ ವೃತ್ತಾಂತವನ್ನಾದರೂ ವಾಚಕರು ಮರೆತಿರಲಿಕ್ಕಿಲ್ಲ. ಆ ಸಿಂಹವು ಜಿತೇಂದ್ರನನ್ನು ಬಿಟ್ಟು ಇರುತ್ತಿದ್ದಿಲ್ಲ. ಜಿತೇಂದ್ರನು ಅದನ್ನು ಬಿಟ್ಟು ಪಾಟಲಿಪುತ್ರಕ್ಕೆ

ಹೊರಟಾಗ, ಅದು ಆತನನ್ನು ಹುಡುಕುತ್ತ ತಾನೂ ಪಾಟಲಿಪುತ್ರಕ್ಕೆ ಬಂದಿತ್ತು; ಆವರೆ ಅದಕ್ಕೆ ಜಿತೇಂದ್ರನ ಭೆಟ್ಟಿಯಾಗದ್ದರಿಂದ ಅದು ರಾಜಧಾನಿಯ ಸಮೀಪದ ಅರಣ್ಯದಲ್ಲಿ ಸಂಚರಿಸುತ್ತಿತ್ತು. ಅದು ಒಂದು ದಿನ ಗವಿಯಲ್ಲಿ ಮಲಗಿರಲು, ಪ್ರಮೀಲೆಯು ಅದನ್ನು ಆಕಸ್ಮಿಕವಾಗಿ ಹಿಂದೆ ಹೇಳಿದಂತೆ ಸೆರೆಯಲ್ಲಿರಿಸಿದಳು ಮುಂದೆ ಅದು ಅಶೋಕನ ಮೇಲೆ ಸಿಟ್ಟಿನಿಂದ ದುಮುಕಿದಾಗ ಪ್ರಣಯಿನಿಯು ಅಡ್ಡಬಂದದ್ದರಿಂದ ಪುರುಷವೇಷ ಧಾರಿಯಾದ ಆ ಕಲಿಂಗರಾಜಪುತ್ರಿಯನ್ನು ಜಿತೇಂದ್ರನೆಂಬ ಭ್ರಾಂತಿಯಿಂದ ತನ್ನ ಕ್ರೂರತನವನ್ನು ಬಿಟ್ಟು, ಆ ಸಿಂಹವು ಕಣ್ಣೀರು ಸುರಿಸಹತ್ತಿತು. ಈಗಲಾದರೂ ಅದು ಪ್ರಣಯಿನಿಯನ್ನು ಜಿತೇಂದ್ರನೆಂತಲೇ ತಿಳಿದು ಆತನನ್ನು ಹಿಂಬಾಲಿಸಹತ್ತಿತ್ತು. ಇದನ್ನರಿಯದೆ ಪ್ರಣಯಿನಿಯು ರಾಜಧಾನಿಯ ಜನರಿಗೆ ಉಪದ್ರವವಾದೀತೆಂದು ತಿಳಿದು, ತಿರುಗಿ ಹೋಗಲು ಸಿಂಹಕ್ಕೆ ಸನ್ನೆ ಮಾಡುತ್ತ ದುಂಬಾಲಬಿದ್ದಳು. ಆಗ ಆ ಸಿಂಹವು ಅಸಮಾಧಾನದಿಂದ ಅರಣ್ಯಕ್ಕೆ ತಿರುಗಿ ಹೋಯಿತು. ಅಶೋಕನಂತೂ ಅದರ ಗೊಡವಿಗೆ ಯಾರೂ ಹೋಗಲಾಗದೆಂದು ಆಜ್ಞಾಪಿಸಿದನು. ಆಶ್ರಮಸ್ಥ ಆ ಸಾತ್ವಿಕ ಸಿಂಹವು ನಿಷ್ಕಾರಣವಾಗಿ ಯಾರಿಗೂ ಉಪದ್ರವ ಕೊಡುತ್ತಿದ್ದಿಲ್ಲ. ಸಿಂಹವು ಇತ್ತ ಅರಣ್ಯಕ್ಕೆ ಹೋಗಲು, ಅತ್ತ ಅಶೋಕನು ಪ್ರಣಯಿನಿಯೊಡನೆ ರಾಜಧಾನಿಯನ್ನು ಪ್ರವೇಶಿಸಿದನು. ಆತನು ಇನ್ನು ತುರಂಗದರ್ಬಾರದಲ್ಲಿರದೆ ಸ್ವತಂತ್ರವಾದ ರಾಜಮಂದಿರದಲ್ಲಿ ಇರಬೇಕೆಂದು ಯುವರಾಜನಿಗೆ ಎಷ್ಟು ಆಗ್ರಹ ಮಾಡಿದರೂ, ಆ ವೇಷಧಾರಿಯಾದ ಪ್ರಣಯಿನಿಯು ಒಪ್ಪದೆ, ಚಕ್ರವರ್ತಿಗೆ ವಿನಯದಿಂದ ಹೇಳಿಕೊಂಡು ತುರಂಗದರ್ಬಾರಕ್ಕೇ ಹೋದಳು ಈ ಅದ್ಭುತಪ್ರಸಂಗವನ್ನು ಕುರಿತು ಹಲವು ಚರ್ಚೆಗಳು ಪಾಟಲಿಪುತ್ರದ ಪ್ರಜೆಗಳಲ್ಲಿ ನಡೆದದ್ದು ಆಶ್ಚರ್ಯವಲ್ಲ

# ೧೩ ನೆಯ ಪ್ರಕರಣ, ಸದ್ವೃತ್ತಿಪ್ರಭಾವ.



ಹಾವಿಗೆ ಹಾಲೆರೆವರೆ ಅದು ತನ್ನ ವಿಷವನ್ನು ಬಿಡಬಹುದೇ? ಅದರಂತೆ ದುಷ್ಟರೂ ದುರಭಿಮಾನಿಗಳೂ ಆದವರನ್ನು. ಸುಷ್ಟರನ್ನೂ ಸದಭಿಮಾನಿಗಳನ್ನೂ ಮಾಡಬೇಕೆಂದು ಸಜ್ಜನರು ಸೌಮ್ಯವಾದ ಉಪಾಯಗಳನ್ನು ಎಷ್ಟು ಕೈಕೊಂಡರೂ ವ್ಯರ್ಥವಾಗುವದೇ ಸರಿ. ಆ ಅಧಮರು ಸಜ್ಜನರ ಸೌಜನ್ಯವನ್ನು ಜರಿದಾಡಿ, ತಮ್ಮ ನೀಚಗುಣಗಳನ್ನು ಅಭಿವೃದ್ಧಿ ಮಾಡಿಕೊಳ್ಳುವರು. ಅಶೋಕನು ಸೌಜನ್ಯದಿಂದ ಅಪರಾಧಿಗಳ ಅಪರಾಧವನ್ನು ಕ್ಷಮಿಸಿದ್ದು, ಬುದ್ಧಿಮತಿಯೇ ಮೊದಲಾದವರ ದುರಾಲೋಚನೆಯ ಅಭಿವೃದ್ಧಿಗೆ ಕಾರಣವಾಯಿತು. ಆ ಮೂವರೂ ಒಟ್ಟುಗೂಡಿ, ಅಶೋಕನ ನಾಶದ ಉಪಾಯವನ್ನು ಕುರಿತು ಮತ್ತೆ ಆಲೋಚಿಸತೊಡಗಿದರು. ದುಷ್ಟರಾದ ಆ ಮೂವರ ಕಣ್ಣೊಳಗೆ ಕ್ರಮವಾಗಿ ಮೂವರು ಒತ್ತುತ್ತಿದ್ದರು. ಬುದ್ಧಿಮತಿಯ ಕಣ್ಣೊಳಗೆ ಆಕೆಯ ಸವತಿಯ ಮಗನಾದ ಅಶೋಕನೂ, ಸಂಪುಷ್ಟಾಚಾರ್ಯನ ಕಣ್ಣೊಳಗೆ ಅಶೋಕನ ವೃದ್ಧಮಂತ್ರಿಯಾದ ರಾಧಾಗುಪ್ತನೂ, ಪ್ರಮೀಲೆಯ ಕಣ್ಣೊಳಗೆ ಕಲಿಂಗದ ಯುವರಾಜನಾದ ಜಿತೇಂದ್ರನೂ ವಿಶೇಷವಾಗಿ ಒತ್ತುತ್ತಿದ್ದರು. ಬೇಟೆಯ ನೆವದಿಂದ ಅಶೋಕನ ಪ್ರಾಣಹರಣಮಾಡುವ ಉಪಾಯವು ವ್ಯರ್ಥವಾದದ್ದರಿಂದ ಆ ಮೂವರೂ ನಿರಾಶೆಪಟ್ಟಿದ್ದರು. ಅವರು ಬಹಳ ಹೊತ್ತು ಏಕಾಂತದಲ್ಲಿ ಆಲೋಚಿಸಿದ ಮೇಲೆ ಪ್ರಮೀಲೆಯು ರಾಜಮಾತೆಯನ್ನು ಕುರಿತು—

"ಮಾತಾಜಿಯವರೇ, ಕೈಕೊಂಡಕಾರ್ಯದಲ್ಲಿ ಎಷ್ಟು ವಿಘ್ನಗಳೊದಗಿದರೂ, ಹತಾಶರಾಗಬಾರದು. ನಮ್ಮ ಪ್ರಯತ್ನವು ಒಮ್ಮೆ ವ್ಯರ್ಥವಾದರೇನಾಯಿತು? ಒಂದೇ ಕಲ್ಲಿಗೆ ಕಾಯಿಬೀಳಬೇಕೆಂಬ ನಿಯಮವಿರುವದೋ? ನಮ್ಮ ಕಾರ್ಯಕ್ಕೆ ಪ್ರಬಲವಾದ ಮೂರು ವಿಘ್ನಗಳಿರುತ್ತವೆ. ಅವುಗಳಲ್ಲಿ ಪ್ರಧಾನ ವಿಘ್ನವಾದ ಅಶೋಕನನ್ನು ರಾಜಮಾತೆಯವರೇ,

ನೀವು ನಾಶಪಡಿಸತಕ್ಕದ್ದು; ರಾಧಾಗುಪ್ತಮಂತ್ರಿಯನ್ನು ಸಂಪುಷ್ಪಾಚಾರ್ಯರು ನಾಶಮಾಡಲಿ; ನಾನು ಜಿತೇಂದ್ರನನ್ನು ನಾಶಗೊಳಿಸುತ್ತೇನೆ. ಈ ಕಾರ್ಯದಲ್ಲಿ ವಿಲಂಬವು ಕೆಲಸದ್ದಲ್ಲ. ಕಾರ್ಯವನ್ನು ಸಾಧಿಸುವದಕ್ಕಾಗಿ, ನಾನೇ ಮೊದಲು ಮುಂದುವರಿಯುತ್ತೇನೆ. ಇನ್ನು ಎಂಟುದಿನಗಳೊಳಗಾಗಿ ಜಿತೇಂದ್ರನ ಪ್ರಾಣಹರಣ ಮಾಡುವೆನು. ಅಶೋಕನ ನಾಶಕ್ಕೆ ವಿಘ್ನವು ಯುವರಾಜನಿಂದಲೇ ಒದಗಿರುವದರಿಂದ, ಮೊದಲು ಅವನ ಜೀವವನ್ನು ಹಿಂಡಬೇಕಾಗಿದೆ. ಸದ್ಯಕ್ಕಂತೂ ಕಲಿಂಗದ ಭಾಂಡಾರವೇ ನನ್ನ ಕೈಯಲ್ಲಿರುವದರಿಂದ ದುಡ್ಡಿನ ಕೊರತೆಯಿಲ್ಲ. ಏನಾದಬಾರದ್ದನ್ನು ಮಾಡಿ ನಾನು ಜಿತೇಂದ್ರನ ನಾಶವನ್ನು ಮಾಡುವೆನು. ರಾಜಮಾತೆಯೇ, ಸಂಪುಷ್ಪಾಚಾರ್ಯರೇ, ಹತಾಶರಾಗಬೇಡಿರಿ. ನಿಮ್ಮ ನಿಮ್ಮ ಪಾಲಿಗೆ ಬಂದವರ ಪ್ರಾಣನಾಶಕ್ಕಾಗಿ, ಉಪಾಯಗಳನ್ನು ಯೋಚಿಸಿರಿ." ಈಮೇರೆಗೆ ನುಡಿದ ಬಳಿಕ ಆ ಮೂವರು ತಮ್ಮ ತಮ್ಮ ಪಾಲಿಗೆ ಬಂದವರ ನಾಶಮಾಡುವದನ್ನು ನಿಶ್ಚಯಿಸಿ, ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು.

ಮುಂದೆ ನಾಲ್ಕು ದಿನಗಳು ಕಳೆದು ಹೋದವು. ಐದನೆಯ ದಿವಸ ಸೂರ್ಯೋದಯವಾಗುವ ಸಂಧಿಯಲ್ಲಿ ವೇಷಧಾರಿಯಾದ ಜಿತೇಂದ್ರನು ರಥದಲ್ಲಿ ಕುಳಿತು, ತುರಂಗದರ್ಬಾರದಿಂದ ಹೊರಟಿದ್ದನು. ರಥವು ದಕ್ಷಿಣ ದಿಕ್ಕಿಗೆ ವೇಗದಿಂದ ಸಾಗಿತ್ತು. ರಥವನ್ನು ಒತ್ತರದಿಂದ ನಡಿಸುವದಕ್ಕಾಗಿ ಯುವರಾಜನು ಸಾರಥಿಯನ್ನು ಆಜ್ಞಾಪಿಸುತ್ತಿದ್ದನು; ಆದರೆ ಸಾರಥಿಯು ಬರಬರುತ್ತ ಯುವರಾಜನ ಅಪ್ಪಣೆಯನ್ನು ದುರ್ಲಕ್ಷಿಸಿ, ತನ್ನ ಮನಸ್ಸಿಗೆ ಬಂದಂತೆ ರಥವನ್ನು ನಡೆಸಹತ್ತಿದನು. ಬರಬರುತ್ತ ಸಾರಥಿಯ ಉದ್ಧಟತನವು ಹೆಚ್ಚಾಯಿತು. ಆತನು ಕಡೆಗೆ ಯುವರಾಜನ ಅಪ್ಪಣೆಯನ್ನು ಲಕ್ಷಿಸದೆ, ನಡುವೆ ರಥವನ್ನು ನಿಲ್ಲಿಸಿಬಿಟ್ಟನು. ಅಷ್ಟರಲ್ಲಿ ಒಬ್ಬ ತರುಣ ಸ್ತ್ರೀಯು ಉದ್ಧಟತನದಿಂದ ಓಡುತ್ತ ಅಲ್ಲಿಗೆ ಬಂದು, ಸಾರಥಿಯ ಸಂಗಡ ಏನೋ ಒಟಗುಟ್ಟಿ, ಒಂದು ತಾಡವಾಲಿಯ ತುಣುಕನ್ನು ಆತನ ಕೈಯಲ್ಲಿ ಕೊಟ್ಟು, ಪ್ರಣಯಿನಿಯನ್ನು ಸಂತಾಪದಿಂದ ನೋಡುತ್ತ

ಹೊರಟು ಹೋದಳು. ಮೊದಲಿಗೆ ಆ ಸ್ತ್ರೀಯ ಗುರುತು ಯುವರಾಜನಿಗೆ ಹತ್ತದಿದ್ದರೂ, ಕಡೆಗೆ ಆಕೆಯನ್ನು ಪ್ರಮೀಲೆಯೆಂದು ಆತನು ಗುರುತು ಹಿಡಿದನು. ಪ್ರಮೀಲೆಯು ಸಾರಥಿಯ ಸಂಗಡ ಏನು ಮಾತಾಡಿರಬಹುದು? ತಾಡವಾಲಿಯ ತುಣುಕನ್ನು ಯಾಕೆ ಕೊಟ್ಟಿರಬಹುದು? ಎಂಬ ವಿಚಾರವು ಯುವರಾಜನ ಮನಸ್ಸಿನಲ್ಲಿ ಉತ್ಪನ್ನನಾದವು; ಆದರೆ ಚಕ್ರವರ್ತಿಯ ಬಳಿಗೆ ಹೋಗುವ ಉಬ್ಬಿನಲ್ಲಿ ಅವು ಬಹಳ ಹೊತ್ತು ಆತನ ಮನಸ್ಸಿನಲ್ಲಿ ಉಳಿಯಲಿಲ್ಲ. ಆತನು ಸಾರಥಿಯನ್ನು ಕುರಿತು—

ಯುವರಾಜ—ಸೂತಾ, ಚಕ್ರವರ್ತಿಯು ನನ್ನ ಹಾದಿಯನ್ನು ನೋಡುತ್ತ ಕುಳಿತಿರಲು, ನೀನು ಸಾವಕಾಶವಾಗಿ ರಥವನ್ನು ನಡೆಸುವೆಯಲ್ಲ! ಈ ಉದ್ಧಟತನಕ್ಕಾಗಿ ನಿನಗೆಯೋಗ್ಯ ಶಾಸನವನ್ನ ಮಾಡಿಸುವೆನು.

ಪ್ರಣಯಿನಿಯ ಮಾತುಗಳಿಗೆ ಉತ್ತರಕೊಡದೆ, ಸಾರಥಿಯು ಗಟ್ಟಿಯಾಗಿ ನಕ್ಕನು! ಅಷ್ಟರಲ್ಲಿ ಮುಂದುಗಡೆ ಒಂದು ಮನೋಹರವಾದ ಉದ್ಯಾನವು ಕಾಣಹತ್ತಿ, ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ರಥವು ಆ ಉದ್ಯಾನದ ಆವಾರ ಗೋಡೆಯಬಳಿಗೆ ಬಂದಿತು. ಸಾರಥಿಯು ರಥವನ್ನು ಉದ್ಯಾನದ ಬಾಗಿಲಲ್ಲಿ ನಿಲ್ಲಿಸಲು, ಪ್ರಣಯಿನಿಯು ಅವಸರದಿಂದ ರಥವನ್ನು ಇಳಿದು ಉದ್ಯಾನವನ್ನು ಪ್ರವೇಶಿಸಹೋದಳು. ಆಗ ಸಾರಥಿಯು ಆಕೆಯನ್ನು ತಡೆದು—

ಸಾರಥಿ—ನಿಲ್ಲಿರಿ, ಇಷ್ಟು ಅವಸರದಿಂದ ತೋಟದೊಳಗೆ ಹೋಗಲಾಗದು. ಮೊದಲು ನೀವು ಬಂದಿರುವಿರೆಂದು ಹೇಳಿ ಬರದಿದ್ದರೆ, ನಿಮ್ಮ ಆದರ ಸತ್ಕಾರಗಳು ನೆಟ್ಟಗೆ ಆಗಲಿಕ್ಕಿಲ್ಲ.

ಯುವರಾಜ—ಛೀ, ಹೇಳುವ ಕಾರಣವಿಲ್ಲ. ಈ ಕಲಿಂಗದೇಶದ ಯುವರಾಜನಿಗೆ ಚಕ್ರವರ್ತಿಯ ಬಳಿಗೆ ಹೋಗಲಿಕ್ಕೆ ಎಲ್ಲಿಯೂ ಪ್ರತಿಬಂಧವಾಗುವಂತೆ ಇಲ್ಲ.

ಸಾರಥಿ—ನೀವು ಕಲಿಂಗದೇಶದ ಯುವರಾಜರಿರಲಿ; ವಂಗದೇಶದ ರಾಜರಿರಲಿ. ಈ ಸ್ಥಳದಲ್ಲಿ ಭೇದಭಾವವಿಲ್ಲ. ಅರಸರಿಂದ ಭಿಕ್ಷುಕರವರೆಗೆ,

ಹುಡುಗರಿಂದ ದೊಡ್ಡವರವರೆಗೆ, ದಡ್ಡರಿಂದ ಪಂಡಿತರವರೆಗೆ, ಅಂಜುಬುರುಕರಿಂದ ಶೂರರವರೆಗೆ, ಎಲ್ಲರಿಗೂ ಸರಿಯಾಗಿಯೇ ಇಲ್ಲಿ ಸತ್ಕಾರವಾಗುವದು. ನೀವು ಇಷ್ಟು ಚಿಕ್ಕವಯಸ್ಸಿನಲ್ಲಿ ಈ ಸ್ಥಾನದಲ್ಲಿಯ ಸತ್ಕಾರಕ್ಕೆ ಪಾತ್ರರಾದದ್ದನ್ನು ನೋಡಿ, ನನಗೆ ಬಹಳ ಸಂತೋಷವಾಗುತ್ತದೆ.

ಈಮೇರೆಗೆ ನುಡಿದು, ಸಾರಥಿಯು ಉದ್ಯಾನದ ಬಾಗಿಲಬಳಿಗೆಹೋಗಿ, ದ್ವಾರಪಾಲಕನ ಕೈಯಲ್ಲಿ ತಾಡಪತ್ರದ ಒಂದು ತುಣುಕನ್ನು ಕೊಟ್ಟನು. ಆಗ ದ್ವಾರಪಾಲಕನು ರಥಿಕನನ್ನೂ, ಸಾರಥಿಯನ್ನೂ ಆಶ್ಚರ್ಯದಿಂದ ನೋಡುತ್ತಿರಲು, ಸಾರಥಿಯು ರಥವನ್ನು ತಿರುಗಿಸಿಕೊಂಡು ಹೊರಟುಹೋದನು. ಯುವರಾಜನು ಅಶೋಕನನ್ನು ಕಾಣುವ ಆತುರದಿಂದ ಉದ್ಯಾನವನ್ನು ಪ್ರವೇಶಿಸಿದನು ಉದ್ಯಾನದ ಅನುಪಮೇಯವಾದ ಶೋಭೆಯನ್ನು ನೋಡಿ, ಯುವರಾಜನಿಗೆ ಪರಮಾಶ್ಚರ್ಯವಾಯಿತು. ಅಲ್ಲಿರುವ ಕಾರಂಜಿಗಳು, ಸ್ವಚ್ಛೋದಕಗಳ ಪುಷ್ಕರಣಿಗಳು, ಲತಾಮಂಟಪಗಳು ಇವೇ ಮೊದಲಾದ ವಿಶ್ರಾಂತಿಯ ಸಾಧನಗಳು ಯುವರಾಜನ ಮನಸ್ಸನ್ನು ಎಳೆಕೊಂಡವು. ಅಂಥ ವಿಸ್ತಾರವಾದ ಕಲಿಂಗದೇಶದ ರಾಜಪುತ್ರನಿಗೆ ಸಹ ಆ ಉದ್ಯಾನವು ಅತ್ಯಂತ ಮನೋಹರವಾಗಿ ತೋರಿತೆಂದಬಳಿಕ, ಆ ಉದ್ಯಾನದ ಗೌರವವನ್ನೇನು ವರ್ಣಿಸಬೇಕು? ಆ ಮನೋರಮ ಸ್ಥಾನದಲ್ಲಿ ಯುವರಾಜನಿಗೆ ವಿಶ್ರಮಿಸುವ ಮನಸ್ಸಾಯಿತು. ಆತನು ಒಂದು ಲತಾಮಂಟಪದ ಬಳಿಯ ಆಸನದಮೇಲೆ ಕುಳಿತುಕೊಂಡು ದ್ವಾರಪಾಲಕನನ್ನು ಕುರಿತು—

ಯುವರಾಜ—ಈ ರಮ್ಯಸ್ಥಾನದ ಹೆಸರೇನು?

ದ್ವಾರಪಾಲಕ—ಇದಕ್ಕೆ ನರಕೋದ್ಯಾನವೆನ್ನುವರು.

ಯುವರಾಜ—ಏನಂದಿ? ಇದರ ಹೆಸರು ನರಕೋದ್ಯಾನವೆ? ಎಂಥ ಕೆಟ್ಟ ಹೆಸರಿದು? ಈ ವನಕ್ಕೆ ನಂದನವನವೆಂಬ ಹೆಸರು ಇಟ್ಟಿದ್ದರೆ, ಬಹಳ ಒಪ್ಪುತ್ತಿತ್ತು. ಇರಲಿ, ಇದರ ಹೆಸರು ತಕ್ಕೊಂಡು ಮಾಡುವದೇನು? ಸ್ಥಳ ಮಾತ್ರ ಬಹಳ ರಮಣೀಯವಾಗಿದೆ! ಈವೊತ್ತಿನವರೆಗೆ ಚಕ್ರವರ್ತಿಯು ನನ್ನನ್ನು ಈ ವನಕ್ಕೆ ಕರಕೊಂಡು ಬಾರದೆಯಿದ್ದದ್ದು ಪರಮಾಶ್ಚರ್ಯವು! ಎಲ್ಲಿರುವರು ಚಕ್ರವರ್ತಿಗಳು? ಇಷ್ಟು ಅವಸರದಿಂದ ಕರೆಸುವಷ್ಟು ಮನೋರ

ಮತ್ತೆಯು ಈ ಉದ್ಯಾನದಲ್ಲಿ ಇರುತ್ತವೆಂದು ನಿರ್ವಿವಾದವಾಗಿ ಹೇಳಬಹುದು.

ದ್ವಾರಪಾಲಕ—ಈ ಉದ್ಯಾನವನ್ನು ನರಕಕ್ಕೆ ಜೋಡಿಸುವದಕ್ಕಿಂತ ಮೊದಲು ಇದು ಚಕ್ರವರ್ತಿಗಳಿಗೆ ಬಹು ಪ್ರಿಯವಾಗಿತ್ತು; ಇದರೆ ಇದನ್ನು ನರಕಕ್ಕೆ ಜೋಡಿಸಿದಬಳಿಕ ಅವರು ಇದರಕಡೆಗೆ ಸುಳಿದಿರುವದಿಲ್ಲ. ಮುಂದೆ ಯಾದರೂ ಅವರು ಇಲ್ಲಿಗೆ ಬರುವಸಂಭವವಿರುವದಿಲ್ಲ.

ಯುವರಾಜ—ಏನಂದಿ? ಚಕ್ರವರ್ತಿಯು ಎಂದೂ ಇಲ್ಲಿಗೆ ಬರುವ ದಿಲ್ಲವೊ? ಈಗ ಆತನು ಇಲ್ಲಿಗೆ ಬಂದಿರುವದಿಲ್ಲವೋ? ಸಾರಥಿಯು ಎಲ್ಲಿಗೆ ರಥವನ್ನು ತಂದುಬಿಟ್ಟನಲ್ಲ! ನಾನು ಚಕ್ರವರ್ತಿಯ ಬಳಿಗೆ ಬೇಗನೆ ಹೋಗ ಬೇಕಾಗಿತ್ತು. ದರ್ಬಾರತುರಂಗವನ್ನು ಬಿಟ್ಟಬಳಿಕ ಸಾರಥಿಯು ನನ್ನ ಮಾತನ್ನು ಕೇಳದೆ, ಉದ್ಧಟತನದಿಂದ ನಡೆಯುತ್ತ ಬಂದು, ಕಡೆಗೆ ಕೆಲಸ ಕೆಡಿಸಿಬಿಟ್ಟನು. ದ್ವಾರಪಾಲಕಾ, ನಾನು ಚಕ್ರವರ್ತಿಯ ಬಳಿಗೆ ಹೋಗು ವೆನು. ಮತ್ತೆ ಎಂದಾದರೂ ಚಕ್ರವರ್ತಿಯೊಡನೆ ಈ ಉದ್ಯಾನವನ್ನು ನೋಡಲಿಕ್ಕೆ ಬರುವೆನು.

ದ್ವಾರಪಾಲಕ—ನೀವು ನರಕೋದ್ಯಾನವನ್ನು ಬಿಟ್ಟು ಹೋಗಲಾ ಗದು ನೀವು ಅಪರಾಧಿಗಳಾದುದರಿಂದ ಚಕ್ರವರ್ತಿಗಳೇ ಶಿಕ್ಷೆಯನ್ನು ಭೋಗಿಸುವದಕ್ಕಾಗಿ ನಿಮ್ಮನ್ನು ಇಲ್ಲಿಗೆ ಕಳಿಸಿದ್ದಾರೆ.

ಯುವರಾಜ—ಏನು? ಚಕ್ರವರ್ತಿಗಳು ನನ್ನನ್ನು ಇಲ್ಲಿಗೆ ಕಳಿಸಿದ್ದಾ ರೆಯೇ? ಈ ಮಾತು ಒಪ್ಪಿಕೊಳ್ಳತಕ್ಕದಲ್ಲ, ಅಸಂಭವವಾದದ್ದು. ನಾನಂತು ಈ ಉದ್ಯಾನವನ್ನು ಬಿಟ್ಟು ಹೊರಗೆ ಹೋಗುತ್ತೇನೆ, ಪ್ರತಿಬಂಧಮಾಡುವ ವನು ಮುಂದಕ್ಕೆ ಬರಲಿ.

ಈಮೇರೆಗೆ ನುಡಿದು, ಯುವರಾಜನು ಹೊರಗೆ ಹೋಗಬೇಕೆಂದು ಆವೇಶದಿಂದ ಹೆಜ್ಜೆಗಳನ್ನು ಇಡಹತ್ತಿದನು. ಆತನು ನಾಲ್ಕು ಹೆಜ್ಜೆಗಳನ್ನು ಹೋಗಿರಬಹುದು; ಅಷ್ಟರಲ್ಲಿ—“ ನಿಲ್ಲು, ಒಂದು ಹೆಜ್ಜೆಯನ್ನು ಕೂಡ ಮುಂದಕ್ಕೆ ಇಡಬೇಡ. ನಿನ್ನ ದುರ್ಬಲ ಪ್ರಯತ್ನವು ಎಂದಿಗೂ ಸಫಲವಾ ಗಲಿಕ್ಕಿಲ್ಲ. ಈ ನರಕಾಧಿಪತಿಯ ಕೈಯಲ್ಲಿ ಸಿಕ್ಕ ಮನುಷ್ಯನು ಜೀವದ ಆಶೆ ಯನ್ನು ಬಿಡಲೇಬೇಕಾಗುವದು. ಈ ನರಕದ ಅವಾರದಲ್ಲಿ ಬಂದ ಮನು

ಷ್ಯನು, ಮೃತ್ಯುಲೋಕದ ಸಂಬಂಧದ ವಿಚಾರಗಳನ್ನು ಮರೆತುಬಿಟ್ಟು, ಪರಲೋಕದ ಕಾಲ್ಪನಿಕಸುಖವನ್ನು ಕಣ್ಣಿಗೆ ಕಟ್ಟಿಕೊಳ್ಳಬೇಕಾಗುವದು. ದೇವಲೋಕದೊಳಗಿನ ನರಕಾಧಿಪತಿಯಾದ ಯಮನು, ಒಂದು ಪ್ರಸಂಗದಲ್ಲಿ ಕರ್ತವ್ಯಭ್ರಷ್ಟನಾಗಿ ಅಪರಾಧಿಗಳನ್ನು ದುರ್ಲಕ್ಷಿಸಿ ಬಿಡಬಹುದು; ಆದರೆ ಮೃತ್ಯುಲೋಕದ ಯಮನಾದ ನಾನು ಎಂದಿಗೂ ಕರ್ತವ್ಯಭ್ರಷ್ಟನಾಗಲಿಕ್ಕಿಲ್ಲ. ದ್ವಾರಪಾಲಕಾ, ಹೋಗು ನಿನ್ನ ಸ್ಥಳಕ್ಕೆ; ನಿನ್ನ ಕೆಲಸವಾಯಿತು. ನನ್ನ ದೂತರು ಅಲ್ಲಲ್ಲಿ ಗುಪ್ತರೀತಿಯಿಂದ ವಾಸಮಾಡಿರುವರು. ಅವರು ಇವನ ಡೌಲು ನಡೆಯಗೊಡಲಾರರು. ಎಲೈ ಅಪರಾಧಿಯೇ, ಕೇಳು; ನೀನು ಯಾವದೋ ಘೋರವಾದ ಅಪರಾಧ ಮಾಡಿದ್ದರಿಂದ, ಭಗವಾನ್ ಚಕ್ರವರ್ತಿಯು ಶಿಕ್ಷೆಯನ್ನು ಭೋಗಿಸುವದಕ್ಕಾಗಿ ನಿನ್ನನ್ನು ನನ್ನ ಕಡೆಗೆ ಕಳಿಸಿದ್ದಾನೆ. ಕಾದಎಣ್ಣೆಯ ಕೊಪ್ಪರಿಗೆಯಲ್ಲಿ ನಿನ್ನನ್ನು ಒಗದು, ಕರಿದು ಕೊಲ್ಲಬೇಕೆಂದು ಚಕ್ರವರ್ತಿಯು ಆಜ್ಞಾಪಿಸಿರುತ್ತಾನೆ. ಇನ್ನು ನಾಲ್ಕು ಗಳಿಗೆಯಮೇಲೆ ಆ ಶಿಕ್ಷೆಯನ್ನು ನೀನು ಭೋಗಿಸಬೇಕಾಗುವದು. ಅಲ್ಲಯವರೆಗೆ ಈ ರಮ್ಯವಾದ ಉಪವನದಲ್ಲ ಸಂಚರಿಸಲಿಕ್ಕೆ ನಿನಗೆ ಪ್ರತಿಬಂಧವಿಲ್ಲ. ಅಲ್ಲಿಯವರಗೆ ಈಶ್ವರ ಧ್ಯಾನಮಾಡು. ನಾಲ್ಕು ಗಳಿಗೆಯಾದ ಕೂಡಲೆ ನನ್ನ ದೂತರು ನಿನ್ನನ್ನು ನರಕಸ್ಥಾನಕ್ಕೆ ಎಳೆದೊಯ್ದು, ಕಾದಎಣ್ಣೆಯ ಕೊಪ್ಪರಿಗೆಯಲ್ಲಿ ನಿನ್ನನ್ನು ಕೆಡವುವರು.

ನರಕಾಧಿಪತಿಯ ಉಗ್ರರೂಪವನ್ನು ನೋಡಿ, ಭಯಗ್ರಸ್ತನಾಗಿದ್ದ ವೇಷಧಾರಿಯಾದ ಯುವರಾಜನು, ಆ ಅಧಿಕಾರಿಯ ಮಾತುಗಳನ್ನು ಕೇಳಿ ಮತ್ತಿಷ್ಟು ಕೈಕಾಲುಗೆಟ್ಟನು. ಆ ಸುಕುಮಾರನ ಮೈಯಲ್ಲ ನಿಂತುಕೊಳ್ಳುವ ಸಾಮರ್ಥ್ಯವು ಉಳಿಯದ್ದರಿಂದ, ಆತನು ಅಲ್ಲಿಯೇ ಒಂದು ಕಡೆಗಿದ್ದ ಪೀಠದ ಮೇಲೆಕುಳಿತುಕೊಂಡು, ಮೃತ್ಯುಲೋಕದ ಯಮನ ಕಠೋರವಚನಗಳನ್ನು ಕೇಳುತ್ತಲಿದ್ದನು. ಕಡೆಗೆ ನರಕಾಧಿಪತಿಯ ಮಾತು ಮುಗಿಯಲು, ಯುವರಾಜನು ಆತನನ್ನು ಕುರಿತು—

ಯುವರಾಜ—ಏನು? ನಾನು ಭಗವಾನರವರ ಅಪ್ಪಣೆಯಂತೆ ತಪ್ತತೈಲದ ಕಟಾಹದಲ್ಲಿ ಕೆಡವಲ್ಪಡುವೆನೋ? ಎಲಿ ಯದೆ ಆ ಚಕ್ರವರ್ತಿಯ

ಅಪ್ಪಣೆಯು?

ನರಕಾಧಿಪತಿ—ಇದುನೋಡು ಅಪ್ಪಣೆಯನ್ನು; ಈ ತಾಡವಾಲಿಯ ತುಣುಕನ್ನು ಓದಿಕೋ, ಅಂದರೆ ಚಕ್ರವರ್ತಿಯು ಆಜ್ಞಾಪಿಸಿರುವನೋ ಇಲ್ಲವೋ ಎಂಬದು ನಿನಗೆ ತಿಳಿಯುವದು.

ಯುವರಾಜ—ಇದರಲ್ಲಿ ನನ್ನ ಹೆಸರು ಇಲ್ಲ, ಶಿಕ್ಷೆಯನ್ನು ಅನುಭೋಗಿಸುವವನ ಸ್ವರೂಪವನ್ನು ಇದರಲ್ಲಿ ವರ್ಣಿಸಿರುವದಿಲ್ಲ, ಅಂದಬಳಿಕ ನನಗೆ ಶಿಕ್ಷೆಯನ್ನು ವಿಧಿಸುವದು ಹೇಗೆ?

ನರಕಾಧಿಪತಿ—ಇಂಥ ಸಣ್ಣಪುಟ್ಟ ಸಂಶಯಗಳನ್ನು ಮುಂದೆಮಾಡಿ ನೀನು ಪಾರಾಗಲಾರೆ ಆಜ್ಞಾಪತ್ರವು ಸರಿಯಾಗಿ ಬರೆಯಲ್ಪಟ್ಟಿದೆಯೋ ಇಲ್ಲವೋ ಎಂಬದನ್ನು ನೋಡುವ ಕೆಲಸವು ನನ್ನದಲ್ಲ. ಶಿಕ್ಷೆಗೆ ಪಾತ್ರನಾದ ಮನುಷ್ಯನಸಂಗಡ ಚಕ್ರವರ್ತಿಯ ರುಜುವಿದ್ದ ಒಂದು ಚೀಟಿಯಿದ್ದರಾಯಿತು. ಎಂಥ ಶಿಕ್ಷೆ ಕೊಡತಕ್ಕದ್ದೆಂಬದನ್ನು ಮಾತ್ರ ಅದರಲ್ಲಿ ಸ್ಪಷ್ಟವಾಗಿ ಬರೆದಿರಲಿಕ್ಕೆ ಬೇಕು. ಈಗ ಶಿಕ್ಷೆಗೆ ಪಾತ್ರನಾದ ನಿನ್ನ ಸಂಗಡ ಚಕ್ರವರ್ತಿಯ ರುಜುವಿದ್ದ ಒಂದು ಚೀಟಿಯು ಬಂದಿರುತ್ತದೆ, ಅದರಲ್ಲಿ ಇಂಥ ಶಿಕ್ಷೆಯನ್ನೇ ಕೊಡಬೇಕೆಂದು ಸ್ಪಷ್ಟವಾಗಿ ಬರೆದಿರುತ್ತದೆ; ಅಂದ ಬಳಿಕ ಇದಕ್ಕೂ ಹೆಚ್ಚಿಗೆ ಮತ್ತೇನು ಬೇಕಾಗಿರುವದು?

ಪುರುಷವೇಷಧಾರಿಯಾದ ಪ್ರಣಯಿನಿಯು, ಅಕಸ್ಮಾತ್ತಾಗಿ ಒದಗಿದ ಈ ಸಂಕಟದಿಂದ ಬಹಳ ಹೈರಾಣಾದಳು. ಆಕೆಯು ಏನೂ ತಿಳಿಯದೆ ಮೂಢಳಾಗಿ, ಕಣ್ಣುಮುಚ್ಚಿಕೊಂಡು ಸುಮ್ಮನೆ ಬಿದ್ದುಕೊಂಡುಬಿಟ್ಟಳು. ಆಕೆಯ ಕೋಮಲವಾದ ಶರೀರವು ಬಾಡಿಹೋಗಿತ್ತು. ಅದಕ್ಕೆ ಉಲುಕಾಡುವ ಸಾಮರ್ಥ್ಯವಿದ್ದಿಲ್ಲ. ಆಕೆಯ ಪ್ರಫುಲ್ಲಿತ ಮನಸ್ಸು ಮ್ಲಾನವಾದದ್ದರಿಂದ, ಅದರಲ್ಲಿಯ ವಿಚಾರಶಕ್ತಿಯು ನಷ್ಟವಾಗಿತ್ತು. ನರಕಾಧಿಪತಿಯು ಹೋದ ಎರಡು ಗಳಿಗೆಯಮೇಲೆ, ಸಮೀಪದ ಒಂದು ಲತಾಮಂಟಪದೊಳಗಿಂದ ಒಬ್ಬ ಪುರುಷನು ಹೊರಬಿದ್ದನು. ಆತನು ಸುತ್ತುಮುತ್ತು ನೋಡುತ್ತ, ಅಡಗುತ್ತ, ನೆಲಕ್ಕೆ ರಾವುತ್ತ, ಪ್ರಣಯಿನಿಯು ಬಿದ್ದುಕೊಂಡಿದ್ದ ಆಸನದ ಬಳಿಗೆ ಬಂದನು. ಪ್ರಣಯಿನಿಯ ಶೋಚನೀಯ ಸ್ಥಿತಿ

ಯನ್ನು ನೋಡಿ, ಆ ಪುರುಷನ ಕಣ್ಣೊಳಗಿಂದ ಅಶ್ರುಗಳು ಧಾರೆಯಿಟ್ಟು ಸುರಿಯಹತ್ತಿದ್ದವು. ಅವುಗಳಲ್ಲಿ ಒಂದು ಅಶ್ರುಬಿಂದುವು ಪ್ರಣಯಿನಿಯ ಗಲ್ಲದಮೇಲೆ ಬೀಳಲು, ಆಕೆಯು ಮೆಟ್ಟಿಬಿದ್ದು, ಯಮದೂತರೇ ಬಂದರೆಂಬ ಭಯದಿಂದ ಆ ಪುರುಷನನ್ನು ಕಣ್ದೆರೆದು ನೋಡಿದಳು, ಆಗ ಆಕೆಯು ಸಖೇದಾಶ್ಚರ್ಯದಿಂದ ಆ ಪುರುಷನನ್ನು ಕುರಿತು—

ಯುವರಾಜ—ಉಪಗುಪ್ತಶ್ರೇಷ್ಠಿಯೇ, ಮರಣದ ತೆಕ್ಕೆಯಲ್ಲಿ ನೀನು ಹೇಗೆಸಿಕ್ಕೆ?

ಉಪಗುಪ್ತ—ನಾನು ಬೇಕೆಂತಲೇ ದ್ವಾರಪಾಲಕನ ಕಣ್ಣುತಪ್ಪಿಸಿ, ಇಲ್ಲಿಗೆ ಬಂದೆನು.

ಯುವರಾಜ—ಈ ಮನೋಹರವಾದ ಉದ್ಯಾನದ ಶೋಭೆಗೆ ಮರುಳಾಗಿ ಬಂದೆಯೆಂಬಂತೆ ಕಾಣುತ್ತದೆ; ಇಲ್ಲದಿದ್ದರೆ ಈ ಆವಾರದಲ್ಲಿ ಕಾಲಿಡುವ ಧೈರ್ಯವು ಯಾರಿಗೂ ಆಗುವಹಾಗಿಲ್ಲ.

ಉಪಗುಪ್ತ—ಯುವರಾಜನೇ, ಇದರ ಅಂತರಂಗವು ಎಷ್ಟು ಭಯಂಕರವಿರುತ್ತದೆಂಬವನ್ನು ನಾನು ಪೂರ್ಣವಾಗಿ ಅರಿತಿರುವೆನು; ಆದರೆ ನಿನ್ನಂಥ ಸುಕುಮಾರ ರಾಜಪುತ್ರನನ್ನು ಹತ್ತುಸಾವಿರ ಹೊನ್ನಿಗೆಮಾರಿ, ಅದರೊಳಗಿನ ಸ್ವಲ್ಪ ಹಣದಿಂದ ನನ್ನನ್ನು ಬಂಧಮುಕ್ತಮಾಡಿದ ಬಕುಲೆಯ ಮಹಾಪಾತಕವನ್ನು ತೊಳಕೊಳ್ಳುವದಕ್ಕಾಗಿ ಇಲ್ಲಿಗೆ ನಾನು ಬಂದಿದ್ದೇನೆ. ಮೃತ್ಯುವಿನ ದವಡೆಯೊಳಗಿಂದ ನಿನ್ನನ್ನು ಬಿಡಿಸಿದಹೊರತು, ಆ ಮಹಾ ಪಾತಕದ ಕ್ಷಾಲನವಾಗುವಂತೆಯಿಲ್ಲ. ನಿನ್ನ ಬಂಧವಿಮೋಚನಕ್ಕಾಗಿ ಈಗ ಬಹು ದಿವಸಗಳಿಂದ ಯತ್ನಿಸುತ್ತಿದ್ದ ನನಗೆ, ಇಂದು ಆ ಸುಯೋಗವು ಒದಗಿರುತ್ತದೆ. ನಾನು ಇಂದು ನಿನ್ನನ್ನು ನರಕಯಾತನೆಯಿಂದ ಮುಕ್ತನಾಗಮಾಡಿ, ನನ್ನ ಹೆಂಡತಿಯಿಂದಾದ ಅಪರಾಧವನ್ನು ತಿದ್ದಿಕೊಳ್ಳುತ್ತೇನೆ.

ಯುವರಾಜ—(ಶ್ರೇಷ್ಠಿಯನ್ನು ನಿಷ್ಠೆಯಿಂದ ನೋಡುತ್ತ)—ಉಪಗುಪ್ತಶ್ರೇಷ್ಠೀ, ಈ ಸ್ಥಳದಿಂದ ನನ್ನನ್ನು ನೀವು ಹೇಗೆ ಬಿಡಿಸುವಿರಿ?

ಉಪಗುಪ್ತ—ಸದ್ಗುಣಿಯಾದ ಯುವರಾಜನೇ, ನನ್ನ ದೇಹವನ್ನು ನರಕಭೋಗಕ್ಕಾಗಿ ಒಪ್ಪಿಸಿ ನಿನ್ನ ಬಿಡುಗಡೆ ಮಾಡುವೆನು. ನೀನು ಈ

ಸಮೀಪದ ಲತಾಮಂಟಪದಲ್ಲಿ ಸಂಜೆಯವರೆಗೆ ಅಡಗಿಕೊಂಡು ಕುಳಿತುಕೋ; ನಾನು ನಿನ್ನ ಆಸನದಮೇಲೆ ಕುಳಿತುಕೊಳ್ಳುವೆನು. ನರಕಾಧಿಪತಿಯು ನಿನ್ನನ್ನು ಒಯ್ಯುವದಕ್ಕಾಗಿ ಬಂದರೆ, ನಾನೇ ಅವನ ಸಂಗಡ ಹೋಗುತ್ತೇನೆ. ನರಕದಲ್ಲಿ ಬಂದವರನ್ನೆಲ್ಲ ಶಿಕ್ಷೆಗೆ ಗುರಿಮಾಡಿದ ಲೆಖ್ಖವು ಸಾಯಂ ಕಾಲಕ್ಕೆ ಹೋದಬಳಿಕ, ಯಮದೂತರು ನಿನ್ನನ್ನು ಹುಡುಕಲಾರರು. ರಾತ್ರಿಯಾದಮೇಲೆ ಆ ಆಮ್ರವೃಕ್ಷದ ಆಶ್ರಯದಿಂದ ಕೋಟೆಯ ಗೋಡೆಯ ಮೇಲೆ ಇಳಿ; ನಿನಗೆ ಈಸಲಿಕ್ಕೆ ಬರುತ್ತಿದ್ದರೆ, ಅಲ್ಲಿಂದ ಗಂಗಾಪ್ರವಾಹದ ಮಡುವಿನೊಳಗೆ ಹಾರಿಕೊಂಡು ಈಸಿ ಪಾರಾಗು; ಈಸಲಿಕ್ಕೆ ಬರದಿದ್ದರೆ, ಹಾಗೇ ಗೋಡೆಯಮೇಲಿಂದ ಉದ್ಯಾನದ ಬಾಗಿಲತನಕ ಹೋಗಿ ಇಳಿದು ಪಾರಾಗಿಹೋಗು. ರಾತ್ರಿ ಕಾವಲುಗಾರರು ನರಕಸ್ಥಾನವನ್ನು ಅಷ್ಟು ದಕ್ಷತೆಯಿಂದ ಕಾಯುವದಿಲ್ಲ. ನೀನು ಈ ಸಂಕಟದಿಂದ ಸುರಕ್ಷಿತ ಪಾರಾಗುತ್ತೀಯೆಂದು ನನ್ನ ಮನೋದೇವತೆಯು ಹೇಳುತ್ತದೆ.

ಯುವರಾಜ—ಉಪಗುಪ್ತಶ್ರೇಷ್ಠೀ, ನನ್ನನ್ನು ನೀವು ಇಷ್ಟು ನೀಚನೆಂದು ಭಾವಿಸುವಿರೋ? ನಿಮ್ಮಂಥ ಸತ್ಪುರುಷರನ್ನು ಮರಣಕ್ಕೆ ಗುರಿಮಾಡಿ ಬದುಕುವಂಥ ಹೀನಸ್ಥಿತಿಯ ಮನುಷ್ಯನು ನಾನಿರುವದಿಲ್ಲ. ನನ್ನನ್ನು ರಕ್ಷಿಸುವ ವಿಚಾರದಿಂದ ನಿಮ್ಮ ಜೀವವನ್ನು ವ್ಯರ್ಥವಾಗಿ ಸಂಕಟದಲ್ಲಿ ಕೆಡವಿಕೊಂಡಿರಿ!

ಉಪಗುಪ್ತ—ರಾಜಪುತ್ರಾ, ನೀನು ಹೀಗೆ ಹಟಮಾರಿಯಾಗುವದು ಯೋಗ್ಯವಲ್ಲ. ನನ್ನ ಹೆಂಡತಿಯು ನಿನ್ನನ್ನು ಆಪತ್ತಿಗೆ ಗುರಿಮಾಡಿದ್ದರಿಂದ ನನ್ನ ಮನಸ್ಸಿಗಾಗಿರುವ ಅಸಮಾಧಾನವು, ಹೀಗೆ ನಾನು ಸ್ವಾರ್ಥತ್ಯಾಗ ಮಾಡಿದಹೊರತು ಎಂದಿಗೂ ಕಡಿಮೆಯಾಗಲಾರದು. ನಾನು ಧರ್ಮಧ್ಯಾನದಲ್ಲಿ ಕಾಲವನ್ನು ಕಳೆಯುತ್ತಿದ್ದರೂ, ನಿನಗೊದಗಿದ ಆಪತ್ತಿನ ಸ್ಮರಣದಿಂದ ನನಗೆ ಶಾಂತಿಯು ದೊರೆಯಲೊಲ್ಲದು; ಆದ್ದರಿಂದ ಸದ್ಗುಣಿಯಾದ ರಾಜಪುತ್ರನೇ, ನನ್ನ ಮೇಲೆ ಇಷ್ಟು ಅನುಗ್ರಹಮಾಡು.

ಯುವರಾಜ—ಉಪಗುಪ್ತಶ್ರೇಷ್ಠೀ, ನಿಮ್ಮ ಆಗ್ರಹವು ವ್ಯರ್ಥವಾದದ್ದು. ಬಕುಲಾದೇವಿಯ ಮಾಂಗಲ್ಯವನ್ನು ಮಣ್ಣುಗೂಡಿಸಿ ನನ್ನ ಜೀವವನ್ನು

ಉಳಿಸಿಕೊಳ್ಳುವದೆಂದರೆ, ಅಮಾನುಷವಾದ ಸ್ವಾರ್ಥಬುದ್ಧಿಯನ್ನು ವ್ಯಕ್ತ ಮಾಡುವದಾಗಿರುತ್ತದೆ. ಆಗದು, ನನ್ನಿಂದ ಆ ಕೆಲಸವು ಸರ್ವಧಾ ಆಗದು!

ಉಪಗುಪ್ತ—ಯುವರಾಜಾ, ಬಕುಲಾದೇವಿಯ ಚಿಂತೆಯನ್ನು ಬಿಡು. ನಮ್ಮಿಬ್ಬರಲ್ಲಿ ಈಗ ಪತಿ–ಪತ್ನೀಭಾವವು ಉಳಿದಿರುವದಿಲ್ಲ. ಬಕುಲೆಯು ನನ್ನನ್ನು ಈಗ ಧರ್ಮಗುರುವೆಂದು ಭಾವಿಸುವಳು, ಪತಿಯೆಂದು ಭಾವಿಸುವದಿಲ್ಲ. ಆಕೆಯು ಸಂಸಾರವನ್ನು ಕಾಲಿನಿಂದ ಒದ್ದು, ಆತ್ಮೋದ್ಧಾರವನ್ನು ಮಾಡಿಕೊಳ್ಳುತ್ತ, ಎಲ್ಲಿಯಾದರೂ ಆನಂದದಿಂದ ಇರಬಹುದು. ನನ್ನ ಮರಣದಿಂದ ಆಕೆಗೆ ಲೇಶವಾದರೂ ದುಃಖವಾಗಲಾರದು. ಆಕೆಯ ಮನಸ್ಸಿನ ಸ್ಥಿತಿಯು, ಸಾಂಸಾರಿಕ ದುಃಖಗಳಿಂದ ದುಃಖಿತವಾಗುವಷ್ಟು ದುರ್ಬಲವಾಗಿರುವದಿಲ್ಲ. ಯುವರಾಜನೇ, ವ್ಯರ್ಥ ಕಾಲಹರಣಮಾಡಬೇಡ. ಇನ್ನು ಒಂದು ಗಳಿಗೆಯೊಳಗಾಗಿ ದೂತರು ಇಲ್ಲಿಗೆ ಬರುವರು. ಅಷ್ಟು ಹೊತ್ತನ್ನಾದರೂ ಶಾಂತತೆಯಿಂದ ಕಳೆಯುವ ಸಂಧಿಯನ್ನು ನನಗೆ ಒದಗಿಸಿಕೊಡು. ನೀನು ಎಷ್ಟು ಹಟಮಾಡಿದರೂ ನನ್ನ ನಿಶ್ಚಯವು ಶಿಥಿಲವಾಗದು.

ಯುವರಾಜ—ನಿಮ್ಮ ಜೀವವನ್ನು ನನ್ನ ಸಲುವಾಗಿ ಬಲಿಕೊಡಲಿಕ್ಕಿಲ್ಲೆಂದು ನಾನು ನಿಶ್ಚಯಿಸಿರುವೆನು. ಉಪಗುಪ್ತಶ್ರೇಷ್ಠಿಯೇ, ಕ್ಷತ್ರಿಯರ ನಿಶ್ಚಯದ ದೃಢತ್ವವನ್ನು ನೀನು ಬಲ್ಲೆಯಷ್ಟೆ?

ಉಪಗುಪ್ತ—ಯುವರಾಜಾ, ನಿನ್ನ ದೃಢನಿಶ್ಚಯಕ್ಕಾಗಿ ನಾನು ನಿನ್ನನ್ನು ಪೂಜ್ಯನೆಂದು ಭಾವಿಸುತ್ತೇನೆ; ಆದರೆ ನನ್ನ ಪ್ರಾಣಹಾನಿಯಾಗದೆ, ನಿನ್ನ ಪ್ರಾಣರಕ್ಷಣವಾದರೆ ನನ್ನ ಮಾತನ್ನು ಕೇಳುವೆಯಷ್ಟೆ?

ಯುವರಾಜ—ಅವಶ್ಯವಾಗಿ ಕೇಳುವೆನು; ಆದರೆ ನಿನ್ನ ಮಾತಿನ ನಂಬಿಗೆಯು ನನಗೆ ಹೇಗಾಗಬೇಕು?

ಉಪಗುಪ್ತ—ಯುವರಾಜಾ, ನನ್ನ ಮಾತಿನ ಹೊರತು ಹೆಚ್ಚಿನ ನಂಬಿಗೆಯ ಆಶೆಯನ್ನು ನೀನು ಯಾಕೆ ಮಾಡುತ್ತೀ? ಉಪಗುಪ್ತನ ಮುಖದಿಂದ ಅಸತ್ಯವಾಣಿಯು ಎಂದಿಗೂ ಹೊರಡದು. ತಪ್ತತೈಲದಿಂದ ನನಗೆ ಸರ್ವಥಾ ವ್ಯಥೆಯಾಗಲಾರದೆಂಬ ನನ್ನ ಮಾತನ್ನು ನಂಬು. ಆತ್ಮವನ್ನು ಪರಮಾತ್ಮನಲ್ಲಿ ತಲ್ಲೀನಗೊಳಿಸುವವನಮೇಲೆ, ಪೃಥಿವ್ಯಾಧಿ ಪಂಚ

ಮಹಾಭೂತಗಳ ಆಟವು ನಡೆಯದು. ಭಗವದ್ಭಕ್ತನಾದ ಸುಧನ್ವನ ಕಥೆಯನ್ನು ನೀನು ಕೇಳಿರುವದಿಲ್ಲವೇ? ನೀನು ನನ್ನ ಚಿಂತೆಯನ್ನು ಬಿಡು. ಒಂದು ಪ್ರಸಂಗದಲ್ಲಿ ನಾನು ದೇಹವನ್ನು ತ್ಯಜಿಸಲೇಬೇಕಾದರೆ, ಪರಲೋಕದ ಎಲ್ಲ ಸಿದ್ಧತೆಯನ್ನು ಮಾಡಿಕೊಂಡು ಗಂಟುಕಟ್ಟಿ ಕುಳಿತವನಂತೆ, ಸಿದ್ಧನಾಗಿ ಕುಳಿತಿರುವ ನನ್ನ ಸಲುವಾಗಿ ನಿನ್ನಂಥ ಸುವಿಚಾರಿಯು ಅಸಮಾಧಾನಪಡಲಾಗದು; ನಿನ್ನಿಂದ ಜಗತ್ತಿನ ಕಲ್ಯಾಣವಾಗಬೇಕಾಗಿರುವದರಿಂದ, ನಿನ್ನ ಜೀವವನ್ನು ತುಚ್ಛವೆಂದು ಎಣಿಸಬೇಡ. ನೀನು ಚಕ್ರವರ್ತಿಯ ಪ್ರೇಮವನ್ನು ಸಂಪಾದಿಸಿ, ಆತನ ವಿಮಲಕೀರ್ತಿಗೆ ಕಲಂಕಪ್ರಾಯವಾಗಿರುವ ಈ ನರಕವನ್ನು ಸಮೂಲವಾಗಿ ನಾಶಗೊಳಿಸಿಬಿಡು. ಪರೋಪಕಾರಕ್ಕಾಗಿ ದೇಹವನ್ನು ತ್ಯಜಿಸಿ, ಕೀರ್ತಿಶಾಲಿಗಳಾದವರ ಚರಿತ್ರವನ್ನು ನೀನು ಅರಿಯೆಯಾ? ರಾಜಪುತ್ರಾ, ನೀನು ಒಪ್ಪಿಕೊಳ್ಳದ ಪಕ್ಷದಲ್ಲಿ ನನ್ನ ಈ ಜಡದೇಹವನ್ನು ಯೋಗಸಾಮರ್ಥ್ಯದಿಂದ ನಿನ್ನ ಎದುರಿಗೆ ಈ ಕ್ಷಣದಲ್ಲಿ ತ್ಯಜಿಸಿ, ನಿನ್ನ ಋಣಮುಕ್ತತೆಗಾಗಿ ಪುನರ್ಜನ್ಮದ ಆಯಾಸವನ್ನು ಹೊಂದುವೆನು; ಹೇಳು, ಏನನ್ನುವೆ?

ಯುವರಾಜ—(ಅತ್ಯಂತ ಭಕ್ತಿಯಿಂದ)—ಮಹಾತ್ಮನೇ, ಕ್ಷುದ್ರಜೀವಿಯಾದ ನಾನು ನಿನ್ನ ಅಪ್ಪಣೆಯನ್ನು ಮೀರಲು ಸಮರ್ಥನಲ್ಲ. ಹೋಗುವೆನು, ನಿನ್ನ ಅಪ್ಪಣೆಯಂತೆ ಲತಾಮಂಟಪದ ಮರೆಗೆ ಹೋಗುವೆನು.

ಈಮೇರೆಗೆ ನುಡಿದು, ಯುವರಾಜನು ಲತಾಮಂಟಪವನ್ನು ಪ್ರವೇಶಿಸಿ, ನೋಡುತ್ತ ಮರೆಗೆ ಕುಳಿತುಕೊಳ್ಳಲು, ಉಪಗುಪ್ತನು ಆತನ ಸ್ಥಳದಲ್ಲಿ ಕುಳಿತುಕೊಂಡನು. ಈಶ್ವರಧ್ಯಾನಕ್ಕಾಗಿ ಕೊಟ್ಟಿದ್ದ ನಾಲ್ಕುಗಳಿಗೆಗಳ ಅವಕಾಶವು ತೀರಿದ ಕೂಡಲೆ, ನರಕಾಧಿಪತಿಯ ದೂತರು ಯುವರಾಜನನ್ನು ಹುಡುಕುತ್ತ ಉಪಗುಪ್ತನು ಧರ್ಮಧ್ಯಾನಮಗ್ನನಾಗಿ ಕುಳಿತಿರುವಲ್ಲಿಗೆ ಬಂದರು. ಅವರು ಇವನೇ ಅಪರಾಧಿಯೆಂದು ತಿಳಿದು ಉಪಗುಪ್ತನನ್ನು ಬಂಧಿಸಿ, ನರಕಕ್ಕೆ ಎಳೆದುಕೊಂಡು ಹೋದರು. ನರಕದ ಬಾಹ್ಯಾಂಗವು ಮನೋವೇಧಕವಿದ್ದಷ್ಟೇ, ಅದರ ಅಂತರಂಗವು ಭಯಪ್ರ

ಧವಾಗಿತ್ತು. ಅಂತರಂಗದ ರಚನೆಯನ್ನು ತೀರ ಶಾಸ್ತ್ರೋಕ್ತವಾಗಿ ಮಾಡಿದ್ದರು. ಅಲ್ಲಿ ಘೋರಯಾತನೆಯ ಎಲ್ಲ ಸಾಧನಗಳು, ಅಂದರೆ, ಶಸ್ತ್ರಗಳು—ಚಕ್ರಗಳು—ಕಾದ ಎಣ್ಣೆಯ ಕೊಪ್ಪರಿಗೆಗಳು, ಲೋಹಶೂಲಗಳು ಇವೇ ಮೊದಲಾದ ಪದಾರ್ಥಗಳು ಸಿದ್ಧವಾಗಿದ್ದವು. ಉಪಗುಪ್ತನನ್ನು ನರಕದ ಮುಖ್ಯದ್ವಾರದೊಳಗೆ ದೂತರು ಕರಕೊಂಡು ಹೋದಾಗ, ಅಲ್ಲಿ ನರಕಾಧಿಪತಿಯು ಒಬ್ಬ ಅಪರಾಧಿಯ ತಲೆಯನ್ನು ಚಕ್ರದ ಬಾಯಲ್ಲಿ ಕೊಟ್ಟು, ಹಿಚಕಿಸುವ ಕೆಲಸವನ್ನು ದೂತರ ಕೈಯಿಂದ ಮಾಡಿಸುತ್ತಿದ್ದನು! ಚಕ್ರವು ತಿರುಗಹತ್ತಿದ ಕೂಡಲೆ ಅಪರಾಧಿಯ ತಲೆಯಿಂದ ರಕ್ತವು ಚಿಲ್ಲೆಂದು ನಾಲ್ಕೂ ಕಡೆಗೆ ಚಿಮ್ಮಹತ್ತಿತು, ಅಪರಾಧಿಯು ಮರಣಕಾಲವಲ್ಲಿ ಕೆಟ್ಟದನಿಯಿಂದ ಕೂಗಿದನು. ಇದನ್ನೆಲ್ಲ ನೋಡಿ ಉಪಗುಪ್ತನ ಅಂತಃಕರಣವು ವ್ಯಥಿತವಾಯಿತು. ಈವೊತ್ತಿನವರೆಗೆ ಆತನ ಹೃತ್ಪಟಲದಲ್ಲ ಮಾನವೀಜೀವಿತದ ಕ್ಷಣಭಂಗುರತೆಯೂ, ಜಡದೇಹದ ನಶ್ವರತ್ವವೂ ಚೆನ್ನಾಗಿ ಬಿಂಬಿಸಿದ್ದವು; ಆದರೆ ಪ್ರಕೃತಕ್ಕೊದಗಿದ ಅತ್ಯಂತ ಹೃದಯದ್ರಾವಕ ಪ್ರಸಂಗದಿಂದ ಆತನ ಮನಸ್ಸಿನಮೇಲೆ ಉಜ್ವಲ ಪರಿಣಾಮವಾಗಿ, ಮುಮುಕ್ಷುವಾದ ಆ ಉಪಗುಪ್ತನು, ಒಮ್ಮೆಲೆ "ಅರ್ಹತ್" ಎಂಬ ಶ್ರೇಷ್ಠಪದವಿಗೇರಿದನು. ಆತನ ಮುಖದಿಂದ "ನಮೋ ಬುಧ್ಧಾಯ" ಎಂಬ ಮಂತ್ರದ ಘೋಷವು ಒಂದೇ ಸವನೆ ನಡೆದಿತ್ತು; ಆತನ ಆತ್ಮವು ಪರಮಾತ್ಮನಲ್ಲಿ ಲೀನವಾಗಿತ್ತು; ಆತನ ಕಣ್ಣುಗಳೊಳಗಿಂದ ಅಶ್ರುರೂಪವಾಗಿ ಶುಧ್ಧಪ್ರೇಮೌಘವು ಹರಿಯಹತ್ತಿತು; ಆತನ ಇಹಲೋಕದ, ಹಾಗು ಶರೀರದ ಭಾವನೆಯು ನಷ್ಟವಾಯಿತು. ಇಂಥ ಸ್ಥಿತಿಯಲ್ಲಿ ನರಕಾಧಿಪತಿಯ ಅಪ್ಪಣೆಯಿಂದ ದೂತರು ಮಹಾತ್ಮನಾದ ಉಪಗುಪ್ತನನ್ನು ತಪ್ತತೈಲಕಟಾಹದಲ್ಲಿ ಕೆಡವಿದರು. ಆ ಪ್ರಸಂಗವಲ್ಲಿ ಉಪಗುಪ್ತನ ಆನಂದಕ್ಕೆ ನೆಲೆಯಿಲ್ಲದಾಯಿತು. ತಾನು ಬಕುಲೆಯ ವಿಮಲಚರಿತ್ರಕ್ಕೆ ಉಂಟಾಗಿದ್ದ ಕಲಂಕವನ್ನು ದೂರ ಮಾಡಿದ ಕಲ್ಪನೆಯಿಂದ, ಆತನ ಮುಖದಲ್ಲಿ ಮೃದುಹಾಸವು ಉತ್ಪನ್ನವಾಯಿತು. ಕೃತ್ರಿಮ ನರಕಸ್ಥಾನದ ತಪ್ತತೈಲಕಟಾಹದಿಂದ ಉಪಗುಪ್ತನಂಥ ಪರಿಶುದ್ಧ ವಸ್ತುವಿಗೆ ಏನು ವ್ಯಥೆಯಾಗ

ಬೇಕು? ಉಪಗುಪ್ತನಿಗೆ ತಪ್ತತೈಲವು ಶೀತಲ ಜಲವಾಯಿತು! ಇದನ್ನು ನೋಡಿ ನರಕಾಧಿಪತಿಯು ಆಶ್ಚರ್ಯಪಟ್ಟು, ಕೊಪ್ಪರಿಗೆಯ ಬುಡದಲ್ಲಿ ಮತ್ತಿಷ್ಟು ಉರಿಯನ್ನು ಹಚ್ಚಿಸಿದನು; ಆದರೆ ಅದರಿಂದ ಉಪಗುಪ್ತನ ಕೂದಲು ಕೂಡ ಕೊಂಕಲಿಲ್ಲ! ಇದನ್ನು ನೋಡಿದ ಕೂಡಲೆ ನರಕಾಧಿಪತಿಯು ರಾಜಮಂದಿರಕ್ಕೆ ಹೋಗಿ ಈ ಅದ್ಭುತವರ್ತಮಾನವನ್ನು ಅಶೋಕ-ಚಕ್ರವರ್ತಿಯ ಮುಂದೆ ಹೇಳಿದನು.

———[o]———

## ೧೪ನೆಯ ಪ್ರಕರಣ--ವಿಚಿತ್ರ ಗೂಢ.



ನರಕಾಧಿಪತಿಯ ಮಾತು ಚಕ್ರವರ್ತಿಗೆ ವಿಶ್ವಸನೀಯವಾಗಿ ತೋರಲಿಲ್ಲ. ಆತನು ನರಕಸ್ಥಾನಕ್ಕೆ ಬಂದು, ತಪ್ತತೈಲಕಟಾಹದಲ್ಲಿ ಉಪಗುಪ್ತನು ಆನಂದದಿಂದಿರುವದನ್ನು ನೋಡಿ ಪರಮಾಶ್ಚರ್ಯಪಟ್ಟನು. ಈ ಅದ್ಭುತಕೃತಿಯ ದರ್ಶನದಿಂದ ಚಕ್ರವರ್ತಿಯ ಹೃದಯದಲ್ಲಿ ಭಕ್ತಿರಸವು ಉತ್ಪನ್ನವಾಗಿ, ಅದು ಆನಂದಾಶ್ರುರೂಪವನ್ನು ಹೊಂದಿ ಕಣ್ಣುಗಳಿಂದ ಹೊರಬೀಳಹತ್ತಿತು. ಚಕ್ರವರ್ತಿಯು ಉಪಗುಪ್ತನನ್ನು ಹೊರಗೆ ತೆಗಿಸಿ ನರಕಾಧಿಪತಿಯನ್ನು ನೋಡಿ— ಈ ಮಹಾತ್ಮನನ್ನು ಯಾರ ಅಪ್ಪಣೆಯಿಂದ ಈ ತಪ್ತತೈಲಕಟಾಹದಲ್ಲಿ ಕೆಡವಿಸಿದೆ? ಎಂದು ಕೇಳಲು, ನರಕಾಧಿಪತಿಯು ಒಂದು ತಾಡವಾಲೆಯ ತುಣುಕನ್ನು ಚಕ್ರವರ್ತಿಯ ಕೈಯಲ್ಲಿ ಕೊಟ್ಟನು. ಆ ಚೀಟಿಯೊಳಗೆ "ಈ ಅಪರಾಧಿಯನ್ನು ತಪ್ತತೈಲಕಟಾಹದಲ್ಲಿ ಕೆಡವಿ ನಾಶಗೊಳಿಸಬೇಕು." ಎಂಬದೊಂದೇ ವಾಕ್ಯವನ್ನು ಬರೆದಿತ್ತು. ಅಪರಾಧದ ವಿವರಣವಿಲ್ಲದ, ಹಾಗು ಅಪರಾಧಿಯ ನಾಮನಿರ್ದೇಶವಿಲ್ಲದ ಇಂಥ ಆಜ್ಞಾಪತ್ರವನ್ನು ತಾನು ಎಂದೂ ಬರೆಕೊಟ್ಟಿಲ್ಲೆಂಬ ವಿಚಾರವು ಚಕ್ರವರ್ತಿಯ ಮನಸ್ಸಿನಲ್ಲಿ ಉತ್ಪನ್ನವಾಯಿತು. ಆತನು ಸ್ವಲ್ಪ ಹೊತ್ತು ತನ್ನೊಳಗೆ ವಿಚಾರಮಾಡಿ ನರಕಾಧಿಪತಿಗೆ—

ಮೂರ್ಖ, ಇಂಥ ಆಜ್ಞಾಪತ್ರದ ಮೇಲೆ ವಿಶ್ವಾಸವಿಟ್ಟು, ವಿಚಾರವಿಲ್ಲದೆ ಇಂಥ ಘೋರಶಿಕ್ಷೆಯನ್ನು ಈ ಮಹಾತ್ಮನಿಗೆ ನೀನು ಕೊಡಬಹುದೇ? ಇದು ನನ್ನ ಆಜ್ಞಾಪತ್ರವಲ್ಲ; ಯಾವ ಪ್ರಸಂಗದಲ್ಲಿಯೋ ನಾನು ಅಪರಾಧಿಗಳ ಶಾಸನಕ್ಕಾಗಿ ಬರಕೊಟ್ಟಿದ್ದ ಆಜ್ಞಾಪತ್ರದ ಕಟ್ಟಕಡೆಯದೊಂದು ವಾಕ್ಯವಿರುತ್ತದೆ. ಯಾವ ದುಷ್ಟರೋ ಇದನ್ನು ಉಪಯೋಗಿಸಿ, ಇಂಥ ಮಹಾತ್ಮನ ಪ್ರಾಣಹರಣ ಮಾಡಿದ ಮಹಾ ಪಾತಕಕ್ಕೆ, ನನ್ನನ್ನು ಗುರಿಮಾಡಬೇಕೆಂದು ಮಾಡಿದ್ದರು! ಎಂದು ನುಡಿದು ಉಪಗುಪ್ತನನ್ನು ಸಾಷ್ಟಾಂಗವಾಗಿ ವಂದಿಸಿ—ಮಹಾತ್ಮರೇ, ಈ ಚಾಂಡಾಲನ ಅಪರಾಧವನ್ನು ಕ್ಷಮಿಸಬೇಕು. ತಮ್ಮಂಥ ಸತ್ಪುರುಷರ ಮುಖಾವಲೋಕನ ಮಾಡಿದ ಕೂಡಲೆ, ಭಕ್ತಿಯು ಉತ್ಪನ್ನವಾಗಬಹುದಾಗಿರಲು, ಈ ದುಷ್ಟನರಕಾಧಿಪತಿಯು ಯಾವ ವಿಚಾರವನ್ನೂ ಮಾಡದೆ, ತಮ್ಮನ್ನು ಘೋರಯಾತನೆಗೆ ಗುರಿಮಾಡಿದ್ದನ್ನು ನೋಡಿದರೆ, ನನ್ನ ವಿನಾಶಕಾಲವು ಸಮೀಪಿಸಿರುವಂತೆ ತೋರುತ್ತದೆ! ಪೂಜ್ಯರೇ, ತಮ್ಮನ್ನು ಈ ನರಕಸ್ಥಾನಕ್ಕೆ ತಂದು ಒಪ್ಪಿಸಿದವರು ಯಾರು? ಯಾವದುಷ್ಟರ ದುರಾಲೋಚನೆಯಿಂದ ತಮಗೆ ಇಂಥ ಪ್ರಸಂಗವು ಒದಗಿತು? ಇವನ್ನು ಹೇಳಿದರೆ, ಅಪರಾಧಿಗಳಿಗೆ ಯೋಗ್ಯಶಾಸನ ಮಾಡುವೆನು; ಆ ಮೇಲೆ ತಾವು ಮಹಾಪರಾಧಿಯಾದ ನನ್ನ ಅಪರಾಧವನ್ನು ಕ್ಷಮಿಸಿ, ನನ್ನನ್ನು ಸನ್ಮಾರ್ಗಕ್ಕೆ ಹಚ್ಚಬಹುದು; ಇಲ್ಲವೆ ನನಗೆ ಯೋಗ್ಯಶಾಸನ ಮಾಡಿ ನನ್ನನ್ನು ಪವಿತ್ರನಾಗಮಾಡಬಹುದು.

ಚಕ್ರವರ್ತಿಯ ಈ ಮಾತುಗಳನ್ನು ಕೇಳಿ, ಉಪಗುಪ್ತನು—ಭಗವನ್, ನಿನ್ನ ಆಜ್ಞಾಪತ್ರಕ್ಕೂ ನನಗಾದ ಶಿಕ್ಷೆಗೂ ಏನೂ ಸಂಬಂಧವಿಲ್ಲ. ಕಲಿಂಗದೇಶದ ಯುವರಾಜನನ್ನು ದುಷ್ಟರು ಈ ಶಿಕ್ಷೆಗೆ ಗುರಿಮಾಡಿದ ಸುದ್ದಿಯು ನನಗೆ ಗೊತ್ತಾಗಲು, ಆ ಸುಕುಮಾರ ರಾಜಪುತ್ರನನ್ನು ಈ ಭಯಂಕರ ಶಿಕ್ಷೆಯಿಂದ ಮುಕ್ತಮಾಡುವದಕ್ಕಾಗಿ, ನಾನಾಗಿಯೇ ನರಕಸ್ಥಾನಕ್ಕೆ ಬಂದು ಯುವರಾಜನನ್ನು ಮುಕ್ತಮಾಡಿ, ನಾನು ಈ ಶಿಕ್ಷೆಯನ್ನು ಅನುಭವಿಸತೊಡಗಿದೆನು; ಆದರೆ ಭಗವಾನ್ ಶ್ರೀಬುದ್ಧದೇ

ವನ ಕೃಪೆಯಿಂದಲೂ, ನಿನ್ನ ಪುಣ್ಯವಿಶೇಷದಿಂದಲೂ ತಪ್ತತೈಲವು ನನಗೆ ಶೀತಲಜಲವಾಗಿ. ನಾನು ಮರಣ ಹೊಂದದೆ ಉಳಿದಿರುತ್ತೇನೆ. ಚಕ್ರವರ್ತಿಯೇ, ನಡೆ, ನಿನಗೆ ಯುವರಾಜನ ಭೆಟ್ಟಿಯನ್ನು ಮಾಡಿಸುತ್ತೇನೆ, ಎಂದು ಅಶೋಕನನ್ನು ಲತಾಮಂಟಪದ ಬಳಿಗೆ ಕರಕೊಂಡು ಹೋದನು. ಅಲ್ಲಿ ಯುವರಾಜ–ವೇಷಧಾರಿಯಾದ ಪ್ರಣಯಿನಿಯು, ತಾನು ಒಬ್ಬ ಸತ್ಪುರುಷನನ್ನು ಭಯಂಕರವಾದ ಮರಣಶಿಕ್ಷೆಗೆ ಗುರಿಮಾಡಿ, ತನ್ನ ಪ್ರಾಣವನ್ನು ಉಳಿಸಿಕೊಂಡೆನೆಂಬ ಪಶ್ಚಾತ್ತಾಪದಿಂದ ಕಣ್ಣೀರು ಹಾಕಿ ಹಾಕಿ, ನಿರ್ವಿಣ್ಣಳಾಗಿ ನೆಲದಮೇಲೆ ಬಿದ್ದುಕೊಂಡಿದ್ದಳು ಅಶೋಕನು ಈ ವಿಚಿತ್ರ ಸಂಗತಿಯನ್ನು ಕೇಳಿ, ಮೂಢನಾಗಿ ಯಾವ ಮಾತನ್ನೂ ಆಡದೆ, ಉಪಗುಪ್ತನ ಒಳಿಯಲ್ಲಿ ನಿಂತುಕೊಂಡಿದ್ದನು. ಆಗ ಉಪಗುಪ್ತನು ಪ್ರಣಯಿನಿಯನ್ನು ಕುರಿತು–ಯುವರಾಜಾ, ಹೀಗೆ ನೀನು ಶೋಕಕ್ಕೆ ಅನುವು ಕೊಡುವದು ಸರಿಯಲ್ಲ. ಇತ್ತನೋಡು, ಭಗವಾನ್ ಚಕ್ರವರ್ತಿಗಳವರು ನಿನ್ನ ಯೋಗಕ್ಷೇಮಕ್ಕಾಗಿ ಬಂದಿದ್ದಾರೆ. ಎಂದು ಹೇಳಲು, ಯುವರಾಜನು ಮೇಲಕ್ಕೆದ್ದು ತನಗೆ ಪ್ರಾಣದಾನ ಮಾಡಿದ ಉಪಗುಪ್ತನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ, ಅಶೋಕನನ್ನು ವಿನಯದಿಂದ ವಂದಿಸಿದನು. ಆಗ ಅಶೋಕನು, ಸಿಂಹನ ಬಾಯೊಳಗಿಂದ ತನ್ನನ್ನು ಬಿಡಿಸಿದ ಕಲಿಂಗದೇಶದ ಯುವರಾಜನಿಗೊದಗಿದ ಭಯಂಕರ ಪ್ರಸಂಗವನ್ನು ಸ್ಮರಿಸಿ, ಅತ್ಯಂತ ದುಃಖದಿಂದ ಉಪಗುಪ್ತಶ್ರೇಷ್ಠಿಯನ್ನು ಕುರಿತು—ಉಪಗುಪ್ತಾಚಾರ್ಯರೇ, ನೀವು ನನ್ನ ಪ್ರಾಣದಾತೃವನ್ನು ನನಗೆ ತಿರುಗಿ ಕೊಟ್ಟಿರಿ; ನನ್ನ ಪ್ರಾಣದಾತೃವಿಗೆ ನಿಮ್ಮ ಯೋಗದಿಂದ ಪುನರ್ಜನ್ಮವಾಯಿತು! ಈ ನರಕದ ದುಷ್ಕೃತನವು ನನ್ನ ಮನಸ್ಸಿಗೆ ಬಹಳವಾಗಿ ಹತ್ತಿರುತ್ತದೆ. ಮಹಾತ್ಮರೇ, ನೀವು ಘೋರವಾದ ಪಾತಕದಿಂದ ನನ್ನನ್ನು ಉದ್ಧಾರಮಾಡಿದಿರಿ. ನನ್ನ ಚರಿತ್ರಕ್ಕೆ ತಗಲುವ ಕಲಂಕವನ್ನು ದೂರಮಾಡಿದಿರಿ. ನೀವೇ ನನ್ನ ಆಚಾರ್ಯರು! ನೀವೇ ನನ್ನ ಗುರುಗಳು! ಈ ಶಿಷ್ಯನು ಪ್ರಥಮತಃ ಮಾಡುವ ನಮಸ್ಕಾರವನ್ನು ಸ್ವೀಕರಿಸಬೇಕು. ಇಂದಿನವರೆಗೆ ನಾನು ಅಂಧಶ್ರದ್ಧೆಯಿಂದ

ಬೌದ್ಧನಾಗಿದ್ದೆನು; ದುರಭಿಮಾನದ ನೀಚ ಭಿಕ್ಷುಗಳು ನನ್ನ ಗುರುಗಳಾಗಿದ್ದರು; ಆದರೆ ಈಗಾಗಿರುವ ಸತ್ವಮೂರ್ತಿಯ ದರ್ಶನದಿಂದ ಇನ್ನು ಮೇಲೆ ನಿಜವಾದ ಧರ್ಮಜ್ಞಾನವಾಗುವದೆಂಬ ಆಶೆಯು ನನ್ನಲ್ಲಿ ಮೊಳೆದೋರಿರುತ್ತದೆ. ಮಹಾತ್ಮರೇ, ಇಂದೇ ಈ ನರಕವನ್ನು ಸಹಮೂಲ ನಾಶಗೊಳಿಸುವೆನು. ಎಂದು ಹೇಳಿ, ಉಪಗುಪ್ತಾಚಾರ್ಯರನ್ನೂ, ಯುವರಾಜನನ್ನೂ ಕರೆದುಕೊಂಡು ರಾಜಮಂದಿರವನ್ನು ಪ್ರವೇಶಿಸಿದನು. ಆದಿನ ಸಂಜೆಯ ಒಳಗಾಗಿ ನರಕವು ಸಮೂಲ ನಾಶವಾಯಿತು. ಉಪಗುಪ್ತನಂಥ ಯೋಗ್ಯಗುರುವು ಚಕ್ರವರ್ತಿಗೆ ದೊರೆತದ್ದರಿಂದ ಆದ ಈ ಪ್ರಥಮ ಫಲವು ಸಾಮಾನ್ಯವಾದದ್ದಲ್ಲ!

ಯುವರಾಜನನ್ನು ನಾಶಗೊಳಿಸುವದಕ್ಕಾಗಿ ತಾನು ಮಾಡಿದ ಸಾಹಸವು ವ್ಯರ್ಥವಾದದ್ದನ್ನು ಕೇಳಿ, ಪ್ರಮೀಲೆಗೆ ಬಹಳ ಅಸಮಾಧಾನವಾಯಿತು. ಅಶೋಕನು ತರ್ಕಿಸಿದಂತೆ ಆಕೆಯು ಒಂದು ಆಜ್ಞಾಪತ್ರದ ಕಟ್ಟಕಡೆಯ ಭಾಗವನ್ನು ಬಹುಪ್ರಯಾಸದಿಂದ ಸಂಪಾದಿಸಿದ್ದಳು; ಅದರಂತೆ, ಅಶೋಕನ ಸಾರಥಿಯೊಬ್ಬನನ್ನು ಲಂಚಕೊಟ್ಟು ಒಡಕೊಂಡು, "ಅಶೋಕನು ನಿನ್ನನ್ನು ಉದ್ಯಾನ ನೋಡುವದಕ್ಕಾಗಿ ಕರೆಸಿರುವನೆ"ಂದು ಆ ಸಾರಥಿಯಿಂದ ಹೇಳಿಸಿ, ಯುವರಾಜನನ್ನು ಮೋಸಮಾಡಿ ತುರಂಗ ದರ್ಬಾರದಿಂದ ಹೊರಡಿಸಿ, ನರಕೋದ್ಯಾನಕ್ಕೆ ಕಳಿಸಿದ್ದಳು; ಇಷ್ಟುಮಾಡಿದರೂ ಯುವರಾಜನ ನಾಶವಾಗದೆ, ತನ್ನದುರಾಲೋಚನೆಯು ಹೊರಬೀಳುವ ಪ್ರಸಂಗ ಬಂತೆಂದು, ಆ ಸಾಹಸಿಯಾದ ದುಷ್ಟ ಪ್ರಮೀಲೆಯು ಚಿಂತಿಸಿದ್ದು ಆಶ್ಚರ್ಯವಲ್ಲ. ಇದೆಲ್ಲ ಪ್ರಮೀಲೆಯ ಕೃತಿಯೆಂಬ ಸಂಗತಿಯು ಯುವರಾಜನ ಮುಖದಿಂದ ಚಕ್ರವರ್ತಿಗೆ ಗೊತ್ತಾಯಿತು. ಪ್ರಮೀಲೆಯ ಈ ಮಹಾಪರಾಧಕ್ಕಾಗಿ ಕಠಿಣ ಶಾಸನಮಾಡಬೇಕೆಂದು ಚಕ್ರವರ್ತಿಯು ಯೋಚಿಸಲು, ಉಪಗುಪ್ತಾಚಾರ್ಯರು--ಭಗವನ್, ಪ್ರಮೀಲೆಯನ್ನು ಇದೊಂದುಸಾರೆ ಕ್ಷಮಿಸುವದು ಯೋಗ್ಯವಾಗಿ ಕಾಣುತ್ತದೆ. ನರಕದ ಮೂಲೋತ್ಪಾಟನಕ್ಕೆ ಪ್ರಮೀಲೆಯ ದುಷ್ಟಕೃತಿಯೇ ಕಾರಣವಾದುದರಿಂದ, ಆಕೆಯಿಂದೊಂದು ಲೋಕೋಪಕಾರವೇ ಆಯಿತೆಂದು

ತಿಳಿಯಬೇಕಾಗುವದು.; ಯಾಕಂದರೆ, ಭಯಂಕರವಾದ ನರಕಯಾತನೆ ಯಿಂದ ಆಗುತ್ತಿದ್ದ ಮನುಷ್ಯಸಂಹಾರವು, ಆಕೆಯಿಂದ ಕಟ್ಟಾದಂತಾಯಿತು. ಈ ಮಹಾನಂದದ ಪ್ರಸಂಗದಲ್ಲಿ ಪ್ರಮೀಲೆಯನ್ನು ಎಚ್ಚರಗೊಳಿಸಿ, ಆಕೆಯ ಅಪರಾಧವನ್ನು ಕ್ಷಮಿಸುವದು, ಭೂತದಯದ ದೃಷ್ಟಿಯಿಂದ ಯೋಗ್ಯವಾಗಿ ತೋರುತ್ತದೆ. ಅನ್ನಲು, ಅಶೋಕನು ಆಚಾರ್ಯರ ಮಾತನ್ನು ನಡಿಸುವ ಕ್ಕಾಗಿ, ನಡತೆಯನ್ನು ತಿದ್ದಿಕೊಳ್ಳುವಂತೆ ಪ್ರಮೀಲೆಯನ್ನು ನಿರ್ಧಾರ ದಿಂದ ಎಚ್ಚರಗೊಳಿಸಿ, ಆಕೆಯ ಅಪರಾಧವನ್ನು ಈ ಸಾರೆಯೂ ಕ್ಷಮಿಸಿ ದನು. ಯುವರಾಜನನ್ನು ತುರಂಗದರ್ಬಾರಕ್ಕೆ ಕಳಿಸುವದು ಚಕ್ರವರ್ತಿಗೆ ಪ್ರಶಸ್ತವಾಗಿ ತೋರಲಿಲ್ಲ; ಆದರೆ, ಸ್ತ್ರೀಯಾದ ತಾನು ಅಶೋಕನ ನಿಕಟ ಸಹವಾಸದಲ್ಲಿರಲು ಸಂಕೋಚಪಟ್ಟು, ಪ್ರಣಯಿನಿಯು ಅಶೋಕನಿಗೆ ಹೇಳಿ ಕೊಂಡು ಮತ್ತೆ ತುರಂಗದರ್ಬಾರಕ್ಕೆ ಹೋದಳು.

ಪ್ರಿಯವಾಚಕರೇ, ಪ್ರಮೀಲೆಯನ್ನು ಹೋಲುವ ದುಷ್ಟಸ್ತ್ರೀಯರು ಜಗತ್ತಿನಲ್ಲಿ ವಿರಲವೆಂದು ಹೇಳಬಹುದು. ಅಶೋಕನು ಎರಡುಸಾರೆ ತನ್ನ ಅಪರಾಧಗಳನ್ನು ಕ್ಷಮಿಸಿರುವನೆಂಬ ಪಶ್ಚಾತ್ತಾಪದಿಂದ ಬುದ್ಧಿಗ ಲಿತು, ಆ ಸ್ತ್ರೀಯು ತನ್ನ ದುಷ್ಟಗುಣಗಳನ್ನು ಬಿಡಲಿಲ್ಲ. ಯುವರಾಜ ನಲ್ಲಿ ತುಂಬಾ ಪ್ರೇಮವುಳ್ಳ ಚಕ್ರವರ್ತಿಯು, ಕಲಿಂಗದೇಶವನ್ನು ಹೇಗೂ ಆತನಿಗೆ ಕೊಡುವನಾದ್ದರಿಂದ, ನಾನು ಕಲಿಂಗದ ರಾಣಿಯಾಗಲಿಕ್ಕೆ ಈವ ರೆಗೆ ಮಾಡಿದ ಸಾಹಸವೆಲ್ಲ ವ್ಯರ್ಥವಾಗುವದೆಂದು ತಿಳಿದು, ತನ್ನ ಪ್ರಾಣ ಹೋದರೂ ಚಿಂತೆಯಿಲ್ಲ, ಯುವರಾಜನನ್ನು ನಾಶಗೊಳಿಸಿಯೇ ತೀರ ಬೇಕೆಂದು ಆಕೆಯು ನಿಶ್ಚಯಿಸಿದಳು! ಮುಂದಿಗೆ ಹೇಳಿದರೆ ಕೆಲಸವು ನೆಟ್ಟಗಾ ಗುವದಿಲ್ಲೆಂದು ತಿಳಿದು, ಯುವರಾಜನ ಕೊಲೆಯನ್ನು ಕೈಮುಟ್ಟಮಾಡಬೇ ಕೆಂದು ಆಕೆಯು ಯೋಚಿಸಿದಳು. ತುರಂಗದರ್ಬಾರದ ಕಾವಲುಗಾರರನ್ನು ಒಡಕೊಂಡು, ಒಳಗಿನ ಗುಪ್ತದ್ವಾರಗಳನ್ನು ಅರಿತುಕೊಂಡು ತಾನೇ ಖಡ್ಗ ಪಾಣಿಯಾಗಿ ಮಧ್ಯರಾತ್ರಿಯಲ್ಲಿ ಯುವರಾಜನ ಬಳಿಗೆಹೋಗಿ, ಆತನನ್ನು ಖಡ್ಗದಿಂದ ತುಂಡರಿಸಬೇಕೆಂದು ಮಾಡಿದಳು! ಇತ್ತ ಈಕೆಯು ತನ್ನ ಕಾರ್ಯಕ್ಕೆ ಕೈಹಾಕಿದ ದಿವಸವೇ ಅತ್ತ ಸಂಪುಷ್ಪಾಚಾರ್ಯನು, ತನ್ನ

ಶಿಷ್ಯವರ್ಗವನ್ನು ಕೂಡಿಕೊಂಡು ಒಮ್ಮೆಲೆ ರಾಧಾಗುಪ್ತನ ಮನೆಯಮೇಲೆ ಬಿದ್ದು, ಆ ವೃದ್ಧ ಮಂತ್ರಿಯನ್ನು ಕೊಲ್ಲಬೇಕೆಂದು ನಿಶ್ಚಯಿಸಿದನು. ಇವರಿಬ್ಬರು ಗಂಗಾತೀರದ ಒಂದು ಗುಹೆಯಲ್ಲಿ ಏಕಾಂತವಾಗಿ ಆಲೋಚಿಸುತ್ತಿರುವಾಗ, ಆ ಗುಹೆಯ ಒಂದುಮೂಲೆಯಲ್ಲಿ ಕತ್ತಲೊಳಗೆ ಕುಳಿತುಕೊಂಡಿದ್ದ ಒಬ್ಬ ತರುಣ ಬೌದ್ಧ ಭಿಕ್ಷುವು, ಅವರ ಆಲೋಚನೆಗಳನ್ನೆಲ್ಲ ಕೇಳಿದನು. ಈ ಭಿಕ್ಷುವು ಯಾರೆಂಬದನ್ನು ವಾಚಕರು ಗೊತ್ತು ಹಿಡಿದಿರಬಹುದು. ಕಲಿಂಗದೇಶದ ಯುವರಾಜನಾದ ಜಿತೇಂದ್ರನು, ಮೊಗ್ಗಲೀಪುತ್ರ-ತಿಷ್ಯರವರ ಕೈಯಿಂದ ಒಂದು ಪತ್ರವನ್ನು ಇಸಕೊಂಡು, ಪಾಟಲಿಪುತ್ರಕ್ಕೆ ಅಶೋಕನ ಬಳಿಗೆ ಬರುತ್ತಿದ್ದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಆ ತರುಣ ಭಿಕ್ಷುವು ಸಾವಕಾಶವಾಗಿ ಮಾರ್ಗವನ್ನು ಕ್ರಮಿಸುತ್ತ ಬಂದು, ಗಂಗಾತೀರದ ಆ ಗುಹೆಯನ್ನು ನೋಡುವದಕ್ಕಾಗಿ ಒಳಗೆ ಪ್ರವೇಶಿಸಿದ್ದನು. ಅಷ್ಟರಲ್ಲಿ ಹೊರಗೆ ಎರಡು ತಾಸು ಹೊತ್ತು ಇರುವಾಗ ಪ್ರಮೀಲೆಯೂ, ಸಂಪುಷ್ಟಾಚಾರ್ಯನೂ ಆ ಗುಹೆಯನ್ನು ಪ್ರವೇಶಿಸಿದರು. ತರುಣ ಬೌದ್ಧಭಿಕ್ಷುವು ಕೂಡಲೆ ಪ್ರಮೀಲೆಯ ಗುರುತು ಹಿಡಿದು, ಈ ಸಾಹಸಿಯಾದ ಸ್ತ್ರೀಯು ಏನು ಒಳಸಂಚು ನಡಿಸುವಳೋ ಕೇಳಬೇಕೆಂದು, ಗುಹೆಯಒಳಗೇ ಒತ್ತಟ್ಟಿಗೆ ಸುಮ್ಮನೆ ಕುಳಿತುಕೊಂಡನು. ಆಗ ಪ್ರಮೀಲೆಯೂ, ಸಂಪುಷ್ಟಾಚಾರ್ಯರೂ ಮಾಡಿದ ಮೇಲೆಹೇಳಿದ ಆ ಸಂಕಲ್ಪಗಳು ಆ ತರುಣ ಬೌದ್ಧ ಭಿಕ್ಷುವಿನ ಕಿವಿಗೆಬಿದ್ದವು. ಗುಪ್ತಾಲೋಚನೆಯು ತೀರಿದಕೂಡಲೆ, ಅವರಿಬ್ಬರೂ ಹೊರಟುಹೋಗಲು, ಅತ್ತ ಆ ತರುಣ ಭಿಕ್ಷುವಾದರೂ ಈ ಒಳಸಂಚನ್ನು ಅಶೋಕನಿಗೆ ತಿಳಿಸಿ, ಇಬ್ಬರು ನಿರಪರಾಧಿಗಳ ಪ್ರಾಣವನ್ನು ಉಳಿಸಬೇಕೆಂದು ಯೋಚಿಸಿ ಪಾಟಲಿಪುತ್ರವನ್ನು ಪ್ರವೇಶಿಸಿದನು.

ತನ್ನ ವೇಷವನ್ನು ಹಾಕಿಕೊಂಡು ಯಾವನೊ ಒಬ್ಬನು, ಯುವರಾಜನಾದ ಜಿತೇಂದ್ರನೆಂಬ ಹೆಸರಿನಿಂದ ಅಶೋಕನ ಬಳಿಯಲ್ಲಿರುತ್ತಾನೆಂಬ ಸುದ್ದಿಯು ಜಿತೇಂದ್ರನ ಕಿವಿಗೆ ಮುಟ್ಟಿತ್ತು; ಆದರೆ ತನ್ನ ತಂಗಿಯಾದ ಪ್ರಣಯಿನಿಯೇ ತನ್ನ ಸಂಕಟವನ್ನು ದೂರಮಾಡುವದಕ್ಕಾಗಿ, ಪುರುಷವೇಷದಿಂದ ಅಶೋಕನ ಬಳಿಯಲ್ಲಿರುತ್ತಾಳೆಂಬದು ಆತನಿಗೆ ಗೊತ್ತಿದ್ದಿಲ್ಲ. ಹಾಗೆ ಗೊತ್ತಾಗಿ

ದ್ದರೆ, ಆ ಅಭಿಮಾನಿಯಾದ ತರುಣ ಕ್ಷತ್ರಿಯನು ಇಷ್ಟು ಸಮಾಧಾನದಿಂದ ಕಾಲಕ್ರಮಣ ಮಾಡದೆ, ತನ್ನ ತಂಗಿಯ ಬಂಧವಿಮೋಚನಕ್ಕಾಗಿ ಏನಾದರೂ ಉಪಾಯವನ್ನು ಯೋಚಿಸುತ್ತಿದ್ದನು. ಸದ್ಯಕ್ಕೆ ಆ ತರುಣ ಬೌದ್ಧ ಭಿಕ್ಷುವಿಗೆ ವೇಷಧಾರಿಯಾದ ಯುವರಾಜನನ್ನೂ, ವೃದ್ಧ ರಾಧಾಗುಪ್ತಮಂತ್ರಿಯನ್ನೂ ಸಂಕಟದಿಂದ ಪಾರಮಾಡುವದು ಅವಶ್ಯವಾಗಿತ್ತು. ಆತನು ಅಶೋಕನನ್ನು ಅಂದು ಸಂಜೆಯೊಳಗಾಗಿ ಕಾಣಬೇಕಾಗಿತ್ತು; ಯಾಕಂದರೆ, ಅಂದು ಮಧ್ಯರಾತ್ರಿಯಲ್ಲಿ ಪ್ರಮೀಲೆಯೂ, ಸಂಪುಷ್ಟಾಚಾರ್ಯನೂ, ತಮ್ಮ ದುರಾಲೋಚನೆಗಳನ್ನು ಪೂರ್ಣಮಾಡಿಕೊಳ್ಳುವವರಿದ್ದರು. ಆ ಭಿಕ್ಷುವು ಅಶೋಕನ ದರ್ಶನವು ಹೇಗಾದೀತೆಂಬ ವಿಚಾರದಲ್ಲಿ ಮಗ್ನನಾಗಿ ಮಾರ್ಗವನ್ನು ಕ್ರಮಿಸುತ್ತಿದ್ದನು. ಅಷ್ಟರಲ್ಲಿ ಅರಮನೆಯ ಉಪವನವು ಅವನ ಕಣ್ಣಿಗೆಬಿದ್ದಿತು. ಆತನು ಮನೋಹರವಾದ ಆ ಉಪವನವನ್ನು ನೋಡುತ್ತ ಸಾಗಿರಲು, ಒಬ್ಬ ಸುಂದರಿಯು ಸಖಿಯರೊಡನೆ ಉಪವನದಲ್ಲಿ ಅರಳುಮಗ್ಗಿಗಳನ್ನು ಎತ್ತುತ್ತಿದ್ದಳು. ಆ ಸುಂದರಿಯ ಗುರುತು ನಮ್ಮ ತರುಣಬೌದ್ಧಭಿಕ್ಷುವಿಗೆ ಕೂಡಲೆಹತ್ತಿ, ಆತನಿಗೆ ಚಕ್ರವರ್ತಿಯ ದರ್ಶನದಮಾರ್ಗವು ಸಿಕ್ಕಹಾಗಾಯಿತು. ಬೌದ್ಧಭಿಕ್ಷುವಿನ ವೇಷವನ್ನು ಹಾಕಿಕೊಂಡವರು, ಬೇಕಾದಲ್ಲಿ ನಿರಾತಂಕವಾಗಿ ಪ್ರವೇಶಿಸಬಹುದಾಗಿತ್ತು. ಭಿಕ್ಷುವು ಉಪವನವನ್ನು ಪ್ರವೇಶಿಸಿ, ಆ ತರುಣ ಸುಂದರಿಯ ಸಮೀಪಕ್ಕೆ ಹೋಗಲು, ಆ ಮನೋಹರಿಯ ದೃಷ್ಟಿಯು ಭಿಕ್ಷುವಿನ ಮೇಲೆಬಿದ್ದು, ಅವರಿಬ್ಬರ ದೃಷ್ಟಿಗಳು ಕೂಡಿದವು. ಆಕೆಗೂ ಭಿಕ್ಷುವಿನ ಗುರುತು ಹತ್ತಿದಹಾಗಾಯಿತು. ತಾನು ಹರಿದ್ವಾರಕ್ಕೆ ಹೋದಾಗ ತನ್ನ ಚಿಗರೆಯನ್ನು ಸಿಂಹನ ದವಡೆಯೊಳಗಿಂದ ಬಿಡಿಸಿದ ಸುಂದರ ತರುಣನು, ಈತನೇ ಎಂದು ಆಕೆಗೆ ಮತ್ತೆ ಮತ್ತೆ ಗುರುತುಹತ್ತಿದಹಾಗಾಗುತ್ತಿತ್ತು; ಆದರೆ ತನಗೆ ಅಲ್ಲಿ ಭೆಟ್ಟಿಯಾದವನು ಚಿದಾನಂದರ ಆಶ್ರಮಸ್ಥ ಒಬ್ಬ ಬ್ರಹ್ಮಚಾರಿಯಿದ್ದು, ಈತನು ಬೌದ್ಧ ಭಿಕ್ಷುವಿರುತ್ತಾನೆಂಬ ಸಂಶಯವು ಆಕೆಯನ್ನು ಬಾಧಿಸಹತ್ತಿತು. ಈ ಸಂಗತಿಯಮೇಲಿಂದ ಆ ತರುಣಿಯು ಅಶೋಕನ ತಂಗಿಯಾದ ಇಂದಿರೆಯೆಂಬದು ನಮ್ಮ ವಾಚಕರ ಮನಸ್ಸಿಗೆ ಹೊಳೆದಿರಬಹುದು. ಇಂದಿರೆಯು ಈಮೇರೆಗೆ ಸಂಶಯಗ್ರಸ್ತಳಾಗಿ

ಬೌದ್ಧ ಭಿಕ್ಷುವನ್ನು ನೋಡುತ್ತ ಸುಮ್ಮನೆ ನಿಂತುಕೊಂಡಿದ್ದಳು.

ತನ್ನ ಬೌದ್ಧಭಿಕ್ಷುವಿನ ವೇಷವು ಇಂದಿರೆಯನ್ನು ಬಾಧಿಸುತ್ತದೆಂಬ ಮಾತು ಜಿತೇಂದ್ರನ ಮನಸ್ಸಿಗೆ ಹೊಳೆಯಿತು. ಆತನು ಇಂದಿರೆಯ ಸಂಶಯವನ್ನು ದೂರ ಮಾಡುವದಕ್ಕಾಗಿ—"ನಮೋಬುದ್ಧಾಯ, ನಮೋಬುದ್ಧಾಯ! ಎಲೈ ಚಿದಾನಂದಾಶ್ರಮಸ್ಥ ಸಿಂಹವೇ, ನಿನ್ನ ಯೋಗದಿಂದ ನನ್ನ ಹೃದಯದಲ್ಲಿ ಸ್ಥಿರವಾಗಿ ನೆಲೆಸಿರುವ ಒಂದು ಸುಂದರ ರೂಪವು, ಅಂದಿನಿಂದ ಇಂದಿನ ವರೆಗೆ ಅಚ್ಚಳಿಯದೆ ಸ್ಥಿರವಾಗಿರುತ್ತದೆ," ಎಂದು ನುಡಿದು, ಇಂದಿರೆಯನ್ನು ಮೃದುಹಾಸದಿಂದ ನೋಡಿದನು. ಇಂದಿರೆಗೆ ಇಷ್ಟು ಸಂಕೇತವು ಸಾಕಾಯಿತು. ಆ ಸರಳ ಹೃದಯದ ಸುಂದರಿಯು ಲಗಬಗೆಯಿಂದ ಆ ತರುಣಭಿಕ್ಷುವಿನ ಬಳಿಗೆ ಬಂದು ಪ್ರೇಮಯುಕ್ತಭಕ್ತಿಯಿಂದ ನಮಸ್ಕರಿಸಿ—ಸುಂದರ ತರುಣನೇ, ಇದೇನು ವಿಚಿತ್ರವು! ಇಂದಿರೆಯ ಚಿತ್ತವನ್ನು ಹರಣ ಮಾಡಿದ ನೀನು ಭಿಕ್ಷುವಾಗಬಹುದೆ? ತರುಣನೇ, ನೀನು ಭಿಕ್ಷುವಾದ ಬಳಿಕ ಇಂದಿರೆಯೂ ಭಿಕ್ಷುಣಿಯಾಗಲಿಕ್ಕೆ ಯಾವ ಪ್ರತಿಬಂಧವೂ ಇಲ್ಲದಾಯಿತು. ಅನ್ನಲು ಆ ತರುಣನು—"ದೇವೀ, ಇಂದಿರೇ, ನನ್ನನ್ನು ಭಿಕ್ಷುವೇಷಧಾರಿಯೆಂದು ತಿಳಿಯಲ್ಲದೆ, ನಿಜವಾದ ಭಿಕ್ಷುವೆಂದು ತಿಳಿಯಬೇಡ! ನಿನ್ನ ಮೂರ್ತಿಯು ಹೃದಯದಲ್ಲಿ ಸ್ಥಿರವಾಗಿರುವ ವರೆಗೆ ನಾನು ಭಿಕ್ಷುವಾಗುವ ಬಗೆಯೇನು? ಇಗೋ, ನೀನು ಪ್ರೇಮದಿಂದ ನನ್ನ ಬೆರಳಲ್ಲಿ ಇಟ್ಟಿದ್ದ ಉಂಗುರವು ನೀನು ಇಟ್ಟ ಹಾಗೆಯೇ ಇರುತ್ತದೆ ನೋಡು! ಉದಾರಾಂತಃಕರಣದ ಸುಂದರ ತರುಣಿಯೇ, ಚಕ್ರವರ್ತಿಯ ತಂಗಿಯಾದ ನಿನ್ನ ಸೌಜನ್ಯವನ್ನು ನೋಡಿ ನಾನು ನಿನ್ನ ದಾಸನಾಗಿದ್ದೇನೆ. ಅದಿರಲಿ, ಸದ್ಯಕ್ಕೆ ಈ ಪ್ರಣಯಪ್ರಸಂಗವು ಬೇಡ; ಅದಕ್ಕೆ ತಕ್ಕಕಾಲವು ಇನ್ನೂ ಒದಗಿರುವದಿಲ್ಲ. ನಾನು ಈಗಲೇ ಚಕ್ರವರ್ತಿಯನ್ನು ಕಂಡು, ಒಂದು ಮಹತ್ವದ ಸಂಗತಿಯನ್ನು ಆತನಿಗೆ ತಿಳಿಸಬೇಕಾಗಿದೆ; ನನಗೆ ಆತನ ದರ್ಶನವನ್ನು ಮಾಡಿಸು, ಎಂದು ಹೇಳಿದನು ಅದಕ್ಕೆ ಇಂದಿರೆಯು—ಪ್ರತಾಪಿಯಾದ ತರುಣನೇ, ಚಕ್ರವರ್ತಿಯ ದರ್ಶನಕ್ಕೆ ಇದು ಸಮಯವಲ್ಲ. ಆ ಭಗವಂತನು ಈಗ ಬೋಧಿವೃಕ್ಷದ ಬುಡದಲ್ಲಿ ಧ್ಯಾನಸ್ಥನಾಗಿ ಕುಳಿತಿರುವನು. ನನ್ನ ಹೊರತು ಬೇರೆ ಯಾರಿಗೂ ಹೋಗಲಿಕ್ಕೆ

ಬರುವ ಹಾಗಿಲ್ಲ. ಮೂರು ತಾಸು ರಾತ್ರಿಯ ಮೇಲೆ ನಿನಗೆ ಆತನ ದರ್ಶನೆ ವಾಗಬಹುದು.

ಇಂದಿರೆಯ ಈ ಮಾತುಗಳನ್ನು ಕೇಳಿ, ಭಿಕ್ಷುವೇಷಧಾರಿಯಾದ ಜಿತೇಂದ್ರನು ಮನಸ್ಸಿನಲ್ಲಿ ವಿಚಾರ ಮಾಡಿ ಇಂದಿರೆಯನ್ನು ಕುರಿತು—ಸರಳಹೃದಯದ ಪ್ರಮದೆಯೇ, ಅಷ್ಟು ರಾತ್ರಿಯಲ್ಲಿ ಚಕ್ರವರ್ತಿಯನ್ನು ಕಾಣುವದು ನನಗೆ ಪ್ರಶಸ್ತವಾಗಿ ತೋರುವದಿಲ್ಲ ನಾನು ಹೇಳುವ ಸಂಗತಿಯನ್ನು ಈಗಿಂದೀಗಲೇ ಚಕ್ರವರ್ತಿಗೆ ತಿಳಿಸಿ ಬಿಡು. ನಾನು ಮತ್ತೆ ಸಾವಕಾಶವಾಗಿ ನಿನ್ನ ಅನುಮತಿಯಂತೆ ಚಕ್ರವರ್ತಿಯನ್ನು ಕಾಣುವೆನು. ಈಗ ಮಾತಿನಲ್ಲಿ ಹೊತ್ತುಗಳೆಯುವದರಿಂದ ಹಿತವಾಗದು, ಎಂದು ನುಡಿದು, ತಾನು ಗಂಗಾತೀರದ ಗುಹೆಯಲ್ಲಿ ಕೇಳಿದ ಒಳಸಂಚಿನ ಸಂಗತಿಯನ್ನು ನಾದ್ಯಂತವಾಗಿ ಇಂದಿರೆಯ ಮುಂದೆ ಹೇಳಿದನು. ಅದನ್ನು ಕೇಳಿ ಇಂದಿರೆಯು ಅಶ್ಚರ್ಯಪಟ್ಟು, ಆ ತರುಣ ಭಿಕ್ಷುವನ್ನು ಪ್ರೇಮಲದೃಷ್ಟಿಯಿಂದ ನೋಡುತ್ತ ನಮಸ್ಕರಿಸಿ, ಬೇಗನೆ ಇನ್ನೊಮ್ಮೆ ದರ್ಶನ ಕೊಡಬೇಕೆಂದುಪ್ರಾರ್ಥಿಸಿ, ಸಖಿಯರ ಬಳಿಗೆ ಹೋಗಿ ಅವರೊಡನೆ ಅವಸರದಿಂದ ಚಕ್ರವರ್ತಿಯ ಬಳಿಗೆ ಹೊರಟುಹೋದಳು. ಇತ್ತ ತರುಣಭಿಕ್ಷುವು ಉದ್ಯಾನದಿಂದ ಹೊರಹೊರಡುತ್ತಿರಲು, ವನಪಾಲಕನು, ಇಂದಿರೆಯ ಅಪ್ಪಣೆಯಿಂದ ಬಗೆಬಗೆಯ ರಸಾಳಫಲಗಳನ್ನು ಭಿಕ್ಷುವಿಗೆ ಅರ್ಪಿಸಿದನು. ಬಳಿಕ ಜಿತೇಂದ್ರನು ಒಂದು ಧರ್ಮಶಾಲೆಗೆ ಹೋಗಿ ಸಾಯಂ ಸಂಧ್ಯಾದಿಗಳನ್ನೂ, ಉಪಾಹಾರವನ್ನೂ ತೀರಿಸಿಕೊಂಡು ವಿಶ್ರಮಿಸಿದನು. ಅಷ್ಟರಲ್ಲಿ ನಾಲ್ಕು ತಾಸು ರಾತ್ರಿಯಾಯಿತು. ಇಂದಿರೆಯು ತನ್ನ ಅಣ್ಣನಾದ ಚಕ್ರವರ್ತಿಯ ಮುಂದೆ ಒಳಸಂಚಿನ ಸಂಗತಿಯನ್ನು ಹೇಳಿರಬಹುದಾದ್ದರಿಂದ ತಾನು ಮಾಡತಕ್ಕದ್ದೇನೂ ಉಳಿಯದಿದ್ದರೂ, ಬ್ರಾಹ್ಮಣನಾದ ವೃದ್ಧರಾಧಾಗುಪ್ತನ ಸಂಕಟವನ್ನು ದೂರಮಾಡುವದೂ, ಹೊತ್ತುಬಿದ್ದರೆ ಆತನ ಸಂರಕ್ಷಣಕ್ಕಾಗಿ ಪ್ರಾಣವನ್ನರ್ಪಿಸುವದೂ ಅವಶ್ಯವೆಂದು ಆತನು ಬಗೆದನು. ರಾಧಾಗುಪ್ತನು ಪ್ರಸಿದ್ಧಮುತ್ಸದ್ದಿಯು; ರಾಜನಿಷ್ಠನು; ಧರ್ಮಪರಾಯಣನು; ಕರ್ತವ್ಯದಕ್ಷನು;ಅಂತೇ ಬೌದ್ಧಚಕ್ರವರ್ತಿಯ ಸಂಪೂರ್ಣ ಪ್ರೇಮಕ್ಕೆ ಪಾತ್ರನಾಗಿ, ಸಂಪುಷ್ಟಾಚಾರ್ಯನಂಥ

ದುಷ್ಟಭಿಕ್ಷುವಿನ ಗಂಟಲಲ್ಲಿಳಿಯದೆ, ಬುದ್ಧಿಮತಿಯಂಥ ಕುಹಕವೃದ್ಧರಾಜಮಾತೆಗೆ ಸೊಪ್ಪುಹಾಕದೆ ತನ್ನ ಕಾರಭಾರವನ್ನು ದಕ್ಷತೆಯಿಂದ ಸಾಗಿಸುತ್ತಿದ್ದನು. ವೈರಿಗಳು ಕೂಡ ರಾಧಾಗುಪ್ತನನ್ನು ಮನ್ನಿಸುತ್ತಿದ್ದರೆಂದಬಳಿಕ, ತರುಣಕ್ಷತ್ರಿಯವೀರನಾದ ವೇದಧರ್ಮಾಭಿಮಾನಿಜಿತೇಂದ್ರನು ಆ ಬ್ರಾಹ್ಮಣ ಮಂತ್ರಿಯ ವಿಷಯವಾಗಿ ಅಭಿಮಾನ ತಾಳಿದ್ದೇನಾಶ್ಚರ್ಯವು? ಮಧ್ಯರಾತ್ರಿಯಾಗಲಿಕ್ಕೆ ಇನ್ನು ಎರಡು ಗಳಿಗೆಯ ಅವಕಾಶವಿತ್ತು; ಅಷ್ಟರಲ್ಲಿ ಅಶೋಕನು ತನಗೆ ಅತ್ಯಂತ ಪ್ರಿಯನಾಗಿರುವ ಯುವರಾಜನನ್ನು ಬಿಡಿಸುವದಕ್ಕಾಗಿ ಖಡ್ಗಪಾಣಿಯಾಗಿ, ಒಬ್ಬನೇ ತುರಂಗದಬಾರದ ಕಡೆಗೆ ಹೊರಟನು. ರಾಧಾಗುಪ್ತನ ಸಂರಕ್ಷಣಕ್ಕಾಗಿ ಚಕ್ರವರ್ತಿಯು ತನ್ನ ತಮ್ಮನಾದ ವೀತಾಶೋಕನನ್ನು ನಿಯಮಿಸಿದನು. ಚಕ್ರವರ್ತಿಯು ತುರಂಗದ ಬಾರವನ್ನು ಹೊಕ್ಕು, ಪ್ರಣಯಿನಿಯು ಮಲಗಿರುವ ಕೋಣೆಯನ್ನು ಗುಪ್ತದ್ವಾರದಿಂದ ಪ್ರವೇಶಿಸಿದಾಗ, ಆ ಕಲಿಂಗರಾಜಪುತ್ರಿಗೆ ಗಾಢವಾದ ನಿದ್ರೆಯು ಹತ್ತಿತ್ತು. ಚಕ್ರವರ್ತಿಯು ಒಳಗೆ ಬಂದಕೂಡಲೆ ಕೋಣೆಯ ಆ ಗುಪ್ತದ್ವಾರವು ಮುಚ್ಚಿತು.

“ಪಾಪ ತನಗೊದಗಿದ ಸಂಕಟದ ಕಲ್ಪನೆಯು ಏನಾದರೂ ಇರುತ್ತದೋ? ಹೇಗೆ ಸುಖದಿಂದ ನಿದ್ದೆಮಾಡುತ್ತಾನೆ” ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತ, ಚಕ್ರವರ್ತಿಯು ತನ್ನ ಮಿತ್ರನ ಸುಖಶಯ್ಯೆಯಬಳಿಗೆ ಹೋಗಿ, ಆತನ ಕೈಯನ್ನು ಹಿಡಿದು ಎಬ್ಬಿಸತಕ್ಕವನು. ಅಷ್ಟರಲ್ಲಿ ಪ್ರಣಯಿನಿಯ ಅದ್ವಿತೀಯ ಸೌಂದರ್ಯದ ಕಡೆಗೆ ಆತನ ಲಕ್ಷವು ಹೋಗಲು, ಆ ಮನೋಹರಮೂರ್ತಿಯನ್ನು ಆತನು ಕ್ಷಣಹೊತ್ತು ದಿಟ್ಟಿಸಿನೋಡುತ್ತ ಕುಳಿತುಕೊಂಡನು. ಆ ತೇಜಃಪುಂಜಲಾವಣ್ಯವನ್ನು ನಿರೀಕ್ಷಿಸುತ್ತಿರುವಾಗ, ತಾನು ಒಬ್ಬ ಸುಂದರ ತರುಣಿಯನ್ನು ನೋಡುತ್ತೇನೆಂಬ ಮಾತು ಕೂಡಲೆ ಚಕ್ರವರ್ತಿಯ ಲಕ್ಷದಲ್ಲಿ ಬಂದಿತು. ನಿದ್ದೆಹತ್ತಿ ಪರವಶಳಾಗಿ ಮಲಗಿದ ಸುಂದರತರುಣಿಯ ಸುಂದರಾವಯವಗಳು, ತಮ್ಮ ಗೂಢಸ್ಥಿತಿಯನ್ನು ಬಿಟ್ಟು ಹೊರಬಿದ್ದಿರುವಾಗ, ಏಕಾಂತದಲ್ಲಿ ಆಕೆಯನ್ನು ಕಾಣುವದು ಅನೀತಿಯೆಂದು ತಿಳಿದು, ಪಾಪಭೀರುವಾದ ಆ ಚಕ್ರವರ್ತಿಯು, ಕೂಡಲೆ ಎರಡು

ಹೆಜ್ಜೆ ಹಿಂದಕ್ಕೆ ಸರಿದನು. ಆದರೆ ಆತನ ತೇಜಃಪುಂಜವಾದ ವಿಶಾಲನೇತ್ರ ಗಳು ಪ್ರಣಯಿನಿಯ ಮುಖಚಂದ್ರನನ್ನು ಬಿಟ್ಟು ಬರಲೊಲ್ಲವು. ಆಗ ಅಶೋಕನು ಮನಸ್ಸಿನಲ್ಲಿ—ಏನು ಚಮತ್ಕಾರವಿದು! ಈ ಲೋಕೋತ್ತರ ಸುಂದರಿಯು ಈ ಕೋಣೆಯಲ್ಲಿ ಹೇಗೆ ಬಂದಳು! ನಾನು ತಪ್ಪಿ ಮತ್ತೊಂದು ಕೋಣೆಗೆ ಹೋಗಿರುವದಿಲ್ಲವಷ್ಟೇ? ಛೆ! ಅದೇ ಈ ತುರಂಗದ ಕೋಣೆಯು. ಪ್ರತ್ಯಕ್ಷ ರಾಜಮಂದಿರದಲ್ಲಿರಲು ಅಶಕ್ಯವಾದ ಈ ವಿಲಾಸದ ಒಡವೆಗಳು ಯುವರಾಜನ ಕೋಣೆಯಲ್ಲಲ್ಲದೆ ಮತ್ತೆ ಎಲ್ಲಿ ಕಣ್ಣಿಗೆಬೀಳಬಹುದು? ಯುವ ರಾಜನು ನಿನ್ನೆ ಹಾಕಿಕೊಂಡಿದ್ದ ಉಡುಪುತೊಡಪುಗಳು ಇಲ್ಲಿಯೇ ಇರುತ್ತವೆ; ಮತ್ತು ನಿನ್ನೆ ಬಲುಮೆಯಿಂದ ನಾನು ಆತನಿಗೆ ಕೊಟ್ಟಿದ್ದ ಹೂವಿನ ಸುಂದರ ತುರಾಯವು ಇಲ್ಲಿಯೇ ಬಿದ್ದಿದೆ! ಇಲ್ಲಿ ಯುವರಾಜನಂತು ಕಾಣುವದಿಲ್ಲ. ಯುವರಾಜನನ್ನು ಅಚ್ಚಳಿಯದೆ ಹೋಲುತ್ತಿರುವ ಈ ಸುಂದರ ತರುಣಿಯು ಆತನ ಹಾಸಿಗೆಯಮೇಲೆ ಹೇಗೆ ಮಲಗಿರಬಹುದು? ಇದರಲ್ಲಿ ದುಷ್ಟ ಪ್ರವಿಾ ಲೆಯ ಕಾರಸ್ಥಾನವೇನು ಇರಲಿಕ್ಕಿಲ್ಲವಷ್ಟೆ? ಛೆ! ಹಾಗಿದ್ದರೆ ಈ ಸುಂದರ ತರು ಣಿಯು ಇಷ್ಟು ನಿಶ್ಚಿಂತೆಯಿಂದ ನಿದ್ದೆಮಾಡಬಹುದೆ? ನೋಡೋಣ, ಇನ್ನೊಮ್ಮೆ ಹತ್ತರಹೋಗಿ ನೋಡೋಣ. ಗುರುತು ಹತ್ತಿದರೆ ಹತ್ತಬ ಹುದು, ಎಂದು ಚಕ್ರವರ್ತಿಯು ಹತ್ತರಹೋಗಿ ಪ್ರಣಯಿನಿಯ ಸೌಂದರ್ಯ ವನ್ನು ಎವೆಯಿಕ್ಕದೆ ನೋಡಹತ್ತಿದನು.

ಈಮೇರೆಗೆ ನೋಡುತ್ತ ಅಶೋಕನು ಮತ್ತೆ ಮನಸ್ಸಿನಲ್ಲಿ—ಜಿತೇಂ ದ್ರನೆಂಬ ಹೆಸರಿನಿಂದ ನನ್ನಲ್ಲಿರುವ ಯುವರಾಜನು ಪುರುಷನಾಗಿರಲಿಕ್ಕಿಲ್ಲ. ಪುರುಷನಾಗಿದ್ದರೆ, ಆತನ ಆಲಿಂಗನವು ಅಷ್ಟು ಮೃದುವಾಗಿ ನನಗೆ ಹತ್ತು ತ್ತಿದ್ದಿಲ್ಲ. ಎಲ್ಲಕ್ಕೂದೊಡ್ಡಸಾಕ್ಷಿಯೆಂದರೆ, ಯುವರಾಜನ ಮಂಜುಲಧ್ವನಿಯು. ಪುರುಷರ ಧ್ವನಿಯು ಅಷ್ಟು ಮಂಜುಲವಾಗಿರುವ ಸಂಭವವಿಲ್ಲ. ಮೊದಲಿಗೆ ನನ್ನ ಬಳಿಗೆ ಬಂದಾಗ ಯುವರಾಜನು ನನ್ನೊಡನೆ ಸಿಂಹಾಸನದಮೇಲೆ ಕುಳಿತುಕೊಳ್ಳಲಿಕ್ಕೆ ಸಂಕೋಚಪಡಲಿಕ್ಕೂ, ಆತನು ಅರಮನೆಯಲ್ಲಿ ಇರ ಲಿಕ್ಕೆ ಒಪ್ಪದೆ ಇರುವದಕ್ಕೂ ಕಾರಣವು ಈಗ ಗೊತ್ತಾಯಿತು. ತನ್ನ ನಿಜ ವಾದ ಸ್ವರೂಪವು ಹೊರಬಿದ್ದೀತೆಂಬ ಭಯದಿಂದಲೇ ಆತನು ನನ್ನ ನಿಕಟ

ಸಹವಾಸಕ್ಕೆ ಒಪ್ಪಿಕೊಳ್ಳಲಿಲ್ಲ. ಇಷ್ಟು ದಿವಸವಾದರೂ ನನಗೆನಿಜವಾದಸ್ಥಿತಿಯು ಗೊತ್ತಾಗಲಿಲ್ಲವಲ್ಲ! ಯುವರಾಜನ ಸ್ಪರ್ಶವು ಇಷ್ಟು ಕೋಮಲವೇಕೆ? ಆತನ ಆಲಿಂಗನದಲ್ಲಿ ಇಷ್ಟು ಸುಖವು ಯಾಕೆ? ಎಂಬದರ ಕಾರಣವು ಇಂದು ನನಗೆ ಗೊತ್ತಾಯಿತು; ಆದರೆ ಇಂಥ ಸುಂದರ ತರುಣಿಯು ಯಾರಾಗಿದ್ದಾಳು? ಆಕೆಯು ಜಿತೇಂದ್ರನ ವೇಷದಿಂದ ನನ್ನಲ್ಲಿ ಯಾಕೆ ಇರಬಹುದು? ಈ ತರುಣಿಯಲ್ಲಿ ನನ್ನ ಮನಸ್ಸು ನಟ್ಟುಹೋಗಿರುವದರಿಂದ, ಈಕೆಯು ನನ್ನ ಅರ್ಧಾಂಗಿಯಾಗುವ ಯೋಗವಿರಬಹುದೋ?" ಹೀಗೆಂದು ಯೋಚಿಸುತ್ತ ಪ್ರಣಯಿನಿಯ ಸುಂದರ ರೂಪವನ್ನು ಚಕ್ರವರ್ತಿಯು ಎವೆಯಿಕ್ಕದೆ ನೋಡ ಹತ್ತಿದನು. ನೋಡನೋಡುತ್ತ ಆತನ ಕಣ್ಣೊಳಗಿಂದ ಪ್ರೇಮಾಶ್ರುಗಳು ಉದುರತೊಡಗಿದವು. ಪ್ರೇಮಭರದಲ್ಲಿ ಆತನು ಪ್ರಣಯಿನಿಯನ್ನು ಚುಂಬಿಸಬೇಕೆಂದು ತನ್ನ ಮುಖವನ್ನು ಮುಂದೆ ಮಾಡಿದನು; ಆದರೆ ಹೀಗೆ ಮಾಡುವದು ನೀತಿಗೆ ಸಮ್ಮತವಲ್ಲವೆಂತಲೂ, ಚಂಚಲಮನಸ್ಕನಾಗುವದು ಧೀರತನವಲ್ಲವೆಂತಲೂ ಯೋಚಿಸಿ, ಆತನು ಹಿಂದಕ್ಕೆ ಸರಿದು ದೂರದಿಂದಲೇ—ಯುವರಾಜಾ, ಯುವರಾಜಾ, ಎಂದು ಕೂಗುತ್ತ ಕಿಡಿಕಿಯಿಂದ ಹೊರಗೆ ನೋಡುತ್ತ ನಿಂತುಕೊಂಡನು. ನಿದ್ರೆ ಹತ್ತಿದಾಗ ತನ್ನ ನಿಜವಾದ ಸ್ವರೂಪವನ್ನು ಚಕ್ರವರ್ತಿಯು ಕಂಡು ಹಿಡಿದನೆಂದು, ಆ ವೇಷಧಾರಿ ಜಿತೇಂದ್ರನು ನೊಂದುಕೊಳ್ಳಬಾರದೆಂಬ ಸೌಜನ್ಯದಿಂದ ಚಕ್ರವರ್ತಿಯು ಹೀಗೆಮಾಡಿದನು. ಆತನ ಧ್ವನಿಯನ್ನು ಕೇಳಿದ ಕೂಡಲೆ ಪ್ರಣಯಿನಿಯು ಎಚ್ಚತ್ತು ಅವಸರದಿಂದ ಪುರುಷವೇಷವನ್ನು ಹಾಕಿಕೊಂಡು ಚಕ್ರವರ್ತಿಯ ಎದುರಿಗೆ ನಿಂತು, "ಏನು ಅಪ್ಪಣೆ" ಎಂದು ಕೇಳಿದಳು. ಅದಕ್ಕೆ ಚಕ್ರವರ್ತಿಯು—ಯುವರಾಜಾ, ಇನ್ನು ನೀನು ಈ ತುರಂಗದಬಾರದಲ್ಲಿರುವದು ಘಾತಕವು. ಈಗಲೇ ನೀನು ನನ್ನ ಸಂಗಡ ಅರಮನೆಗೆ ಬರತಕ್ಕದ್ದು. ಅಲ್ಲಿ ನಿನಗೆ ಎಲ್ಲದರ ಅನುಕೂಲತೆಗಳನ್ನು ಮಾಡಿಕೊಡುವೆನು; ಎಂದು ಹೇಳಿ, ಯುವರಾಜ ವೇಷಧಾರಿಯಾದ ಪ್ರಣಯಿನಿಯನ್ನು ಕರಕೊಂಡು ಅರಮನೆಗೆ ಹೋದನು.



# ೧೫ನೆಯ ಪ್ರಕರಣ--ಧರ್ಮಜಾಗೃತಿ.



ಚಕ್ರವರ್ತಿಯು ಪ್ರಣಯಿನಿಯನ್ನು ಕರಕೊಂಡು ಅರಮನೆಗೆ ಹೋಗುವದರೊಳಗಾಗಿ ವೀತಾಶೋಕನು ರಾಧಾಗುಪ್ತಮಂತ್ರಿಯ ಸಂಕಟವನ್ನು ದೂರಮಾಡಿ ಅಲ್ಲಿಗೆಬಂದಿದ್ದು, ಇಂದಿರೆಯ ಅಣ್ಣನಾದ ಅಶೋಕಚಕ್ರವರ್ತಿಯ ಹಾದಿಯನ್ನು ನೋಡುತ್ತ ಅಲ್ಲಿ ಕುಳಿತುಕೊಂಡಿದ್ದನು. ಚಕ್ರವರ್ತಿಯು ಯುವರಾಜನೊಡನೆ ಬಂದದ್ದನ್ನು ನೋಡಿ, ವೀತಾಶೋಕನು—ಭಗವನ್, ರಾಧಾಗುಪ್ತಮಂತ್ರಿಗಳು ಸುರಕ್ಷಿತವಾಗಿರುವರು. ಸಂಪುಷ್ಪಾಚಾರ್ಯನ ಶಿಷ್ಯರಾದ ಆ ದುಷ್ಟ ಭಿಕ್ಷುಗಳ ಕ್ರೂರತನವನ್ನು ಮನಸ್ಸಿನಲ್ಲಿ ತಂದರೆ, ಅವರನ್ನು ಬೌದ್ಧ ಭಿಕ್ಷುಗಳೆಂದು ಕರೆಯುವದಕ್ಕಿಂತ, ಕಟುಕರೆಂದು ಕರೆಯುವದು ಯೋಗ್ಯವಾಗಿ ತೋರುತ್ತದೆ. ಆ ದುಷ್ಟರು, ನಾನು ಸೈನಿಕರನ್ನು ಕರಕೊಂಡು ಹೋಗುವದರೊಳಗಾಗಿ ಆಕಸ್ಮಿಕವಾಗಿ ಮಂತ್ರಿಯ ಮನೆಯನ್ನು ಮುತ್ತಿ, ಕಾವಲುಗಾರರನ್ನು ತುಂಡರಿಸಿ, ಮಂತ್ರಿಯ ಅಂತರ್ಗೃಹವನ್ನು ಪ್ರವೇಶಿಸಿದ್ದರು. ಅಲ್ಲಿ ಭಿಕ್ಷುಗಳು ನಡಿಸಿದ ಅನಾಚಾರವನ್ನೂ, ಕ್ರೂರತನವನ್ನೂ ನೋಡಿದರೆ, ಎಂಥ ನಾಸ್ತಿಕರಾದರೂ ಸಂತಾಪಗೊಳ್ಳಬಹುದು! ಯಾವನೋ ಒಬ್ಬ ತರುಣ ಭಿಕ್ಷುವು ಇಂದು ಸಾಹಸಮಾಡದಿದ್ದರೆ, ನಿಶ್ಚಯವಾಗಿ ನಿಮ್ಮ ವೃದ್ಧಮಂತ್ರಿಯ ಪ್ರಾಣವು ಉಳಿಯುತ್ತಿದ್ದಿಲ್ಲ. ದುಷ್ಟ ಭಿಕ್ಷುಗಳು ನಾನು ಹೋಗುವದರೊಳಗಾಗಿ ಮಂತ್ರಿಯನ್ನು ಮುತ್ತಿದ್ದರು. ಧರ್ಮಶ್ರದ್ಧೆಯಮೂಲಕ ನಮ್ಮ ಬೌದ್ಧಸೈನಿಕರು ಭಿಕ್ಷುಗಳಮೇಲೆ ಕೈಮಾಡಲೊಲ್ಲರು. ಆಗ ಆ ತರುಣ ಭಿಕ್ಷುವು ಯಾವತ್ತು ಭಿಕ್ಷುಮಂಡಲವನ್ನು ಹೊರಗೆ ದೂಡುವದಕ್ಕಾಗಿ, ಅವರನ್ನು ಕುರಿತು—ಭಿಕ್ಷುಗಳೇ, ಒಬ್ಬ ವೃದ್ಧ ಮಂತ್ರಿಯನ್ನು ಸಂಹರಿಸುವದಕ್ಕಾಗಿ ಇಷ್ಟೊಂದು ಅಟ್ಟಹಾಸವೇಕೆ? ವೈದಿಕ ಧರ್ಮದ ಈ ಮಂತ್ರಿಯ ಸಮಾಚಾರವನ್ನು ನಾನು ತಕ್ಕೊಳ್ಳುವೆನು. ಈತನನ್ನು ಗೊತ್ತಿಗೆಹಚ್ಚುವ ಪ್ರತಿಜ್ಞೆಯನ್ನು ನಾನು ಮಾಡಿದ್ದೇನೆ. ನನ್ನ ಪ್ರತಿಜ್ಞೆಗೆ ನೀವು ಭಂಗವನ್ನುಂಟುಮಾಡಬೇಡಿರಿ. ಬಹುದಿವಸ ಕಾದಿದ್ದ ನನಗೆ,

ಇಂಪು ಅನಾಯಾಸವಾಗಿ ಸುಯೋಗವು ಒದಗಿರುತ್ತದೆ. ನನ್ನ ಪ್ರತಿಜ್ಞೆಗೆ ಭಂಗತರುವವರನ್ನು ನಾನು ಸಂಹರಿಸದೆ ಬಿಡೆನು. ಸರಿಯಿರಿ ಹಿಂದಕ್ಕೆ; ಎಲ್ಲರೂ ಮಂತ್ರಿಯ ಶಯನಗೃಹದಿಂದ ಹೊರಗೆ ಹೋಗಿರಿ, ಎಂದು ತನ್ನ ಖಡ್ಗವನ್ನು ಒರೆಯಿಂದ ಹಿರಿದನು. ಅವನ ವೀರಶ್ರೀಯನ್ನು ನೋಡಿ ಬೌದ್ಧಭಿಕ್ಷುಗಳು "ತಮ್ಮೊಳಗಿನವನೊಬ್ಬನು ಅನಾಯಾಸವಾಗಿ ಮಂತ್ರಿಯನ್ನು ಕೊಲ್ಲುತ್ತಿರಲು. ನಾವು ಸುಮ್ಮನೆ ಕಷ್ಟಪಡುವದು ಯಾಕೆ" ಎಂದು ಎಲ್ಲರೂ ಶಯ್ಯಾಗೃಹದಿಂದ ಹೊರಗೆ ಬಂದರು. ಆಗ ಆ ತರುಣ ಭಿಕ್ಷುವು ಮಂತ್ರಿಯನ್ನು ಕುರಿತು—ಪೂಜ್ಯನಾದ ರಾಧಾಗುಪ್ತನೇ, ಇನ್ನು ಏಳು; ಇಲ್ಲಿಂದ ಆ ನೀಚ ಭಿಕ್ಷುಗಳ ಕಣ್ಣುತಪ್ಪಿಸಿ ಹೊರಟುಹೋಗು. ಎಂದು ಮಂತ್ರಿಯನ್ನು ಎರಡನೆಯ ಕಡೆಗೆ ಹೋಗಗೊಟ್ಟು, ಭಿಕ್ಷುಮಂಡಲವನ್ನು ಕುರಿತು—ಎಲೈ ಅಧಮಭಿಕ್ಷುಗಳೇ, ಪ್ರಾಣಹಿಂಸೆಯು ಭಿಕ್ಷುಗಳ ವೇಷಕ್ಕಾದರೂ ಒಪ್ಪುವದೇ? ಅಹಿಂಸಾತತ್ವವನ್ನು ಜಗತ್ತಿಗೆಬೋಧಿಸುವ ನಿಮ್ಮ ಅಮಂಗಲ ಮುಖವು ಇದೇ ಏನು? ಮುಂದಕ್ಕೆ ಬಿರ್ರಿ, ಮಂತ್ರಿಯ ನಾಶಕ್ಕಾಗಿ ಬಂದಿರುವ ಪುಂಡಭಿಕ್ಷುಗಳಲ್ಲಿ ಎದೆಗಾರರಾದವರು ಮುಂದಕ್ಕೆ ಒಂದು ಹೆಜ್ಜೆಯನ್ನು ಇಡಿರಿ ನೋಡೋಣ, ನನ್ನ ಈ ಖಡ್ಗವು ಒಬ್ಬೊಬ್ಬರನ್ನೇ ತುಂಡರಿಸಿ ಚಲ್ಲುವದು.

ಭಗವನ್, ಈಮೇರೆಗ ಆತರುಣಭಿಕ್ಷುವು ನುಡಿದು, ಮಂತ್ರಿಯಶಯನಗೃಹದ ಬಾಗಿಲಲ್ಲಿ ನಿಂತುಕೊಂಡು ಖಡ್ಗಗವನ್ನು ಝಳಪಿಸಲು, ಭಿಕ್ಷುಮಂಡಲದ ಸೊಂಡೆಗಳು ಒಣಗಿದವು. ಅವರು ಮುಂದೆ ಏನು ಮಾಡಬೇಕೆಂಬು ಯೋಚಿಸುತ್ತಿರಲು, ನಾನು ಸೈನಿಕರೊಡನೆ ಅಲ್ಲಿಗೆ ಹೋದೆನು. ನಮ್ಮನ್ನು ನೋಡಿದ ಕೂಡಲೆ ಭಿಕ್ಷುಗಳು ಬೆದರಿ ಹಿಂದಕ್ಕೆ ಸರಿಯಹತ್ತಿದರು. ಭಿಕ್ಷುಗಳ ಈ ಕೃತ್ಯವನ್ನು ನೋಡಿ ನನಗೆ ಸಂತಾಪವಾದರೂ, ಭಿಕ್ಷುಗಳ ಕೊಲೆಯು ಮಹಾಪಾಪಮೂಲವೆಂಬ ಮೂಢಶ್ರದ್ಧೆಯಿಂದ ನಾನಾಗಲಿ, ನನ್ನ ಸೈನಿಕರಾಗಲಿ ಅವರಮೇಲೆ ಕೈಮಾಡಲಿಲ್ಲ. ಆದರೂ ಭಿಕ್ಷುಗಳು ನಮ್ಮನ್ನು ನೋಡಿ ಓಡಿಹೋದರು. ಆ ತರುಣ ಭಿಕ್ಷುವನ್ನು ನೋಡುವಷ್ಟರಲ್ಲಿ, ಆತನು ಎತ್ತೋ ಜಾರಿಹೋಗಿದ್ದನು. ಈಗ ಬಹುಜನ ಭಿಕ್ಷುಗಳನ್ನು ಸೆರೆಹಿಡಿದು

ತಂದಿರುತ್ತೇನೆ. ರಾಧಾಗುಪ್ತಮಂತ್ರಿಗಳು ಸುರಕ್ಷಿತವಾಗಿರುವರು. ಮಂತ್ರಿಯ ಮನೆಗೆ ಬಿಗಿಯಾದ ಕಾವಲಿಟ್ಟು, ಸನ್ನಿಧಿಗೆ ಸುದ್ದಿಯನ್ನು ಹೇಳಲಿಕ್ಕೆ ಬಂದೆನು. ಭಗವನ್, ಆ ತರುಣ ಭಿಕ್ಷುವಿನ ಸ್ವರೂಪವನ್ನು ಮನಸ್ಸಿನಲ್ಲಿ ತಂದರೆ, ಈಗಲೂ ನನಗೆ ಆತನ ವಿಷಯವಾಗಿ ಆದರಭಾವವು ಉತ್ಪನ್ನವಾಗುತ್ತದೆ. ವೀರಾಗ್ರಣಿಗಳಲ್ಲಿ ಕೂಡ ಅಪರೂಪವಾಗಿರುವ ಧೈರ್ಯ-ಪ್ರತಾಪಗಳನ್ನು ನಾನು ಆ ತರುಣ ಭಿಕ್ಷುವಿನಲ್ಲಿ ಕಂಡೆನು, ಎಂದು ಹೇಳಿದನು. ಇದನ್ನೆಲ್ಲ ಕೇಳುತ್ತಿದ್ದ ಇಂದಿರೆಯು ಸಮಾಧಾನಪಟ್ಟು, ತನ್ನ ಮನಸ್ಸಿನಲ್ಲಿ—ಆ ತರುಣ ಭಿಕ್ಷುವು ಚಿದಾನಂದಾಶ್ರಮಸ್ಥ ತರುಣ ಬ್ರಹ್ಮಚಾರಿಯೇ ಇರಬಹುದೋ? ಇಂದು ಈ ಒಳಸಂಚಿನ ಸುದ್ದಿಯನ್ನು ನನ್ನ ದ್ವಾರದಿಂದ ಅಣ್ಣನಿಗೆ ತಿಳಿಸಿದ್ದಲ್ಲದೆ, ತಾನೂ ರಾಧಾಗುಪ್ತನ ಕಷ್ಟನಿವಾರಣಕ್ಕಾಗಿ ಆತನು ಹೋಗಿರಬಹುದೋ? ರಾಧಾಗುಪ್ತನು ಬ್ರಾಹ್ಮಣನಾದುದರಿಂದ, ವೈದಿಕ ಧರ್ಮಾಭಿಮಾನಿಯಾದ ನಮ್ಮ ಆ ತರುಣ ಬ್ರಹ್ಮಚಾರಿಯು, ಮಂತ್ರಿಯ ಪ್ರಾಣವನ್ನು ಉಳಿಸಲಿಕ್ಕೆ ಯತ್ನಿಸಿರಬಹುದು, ಎಂದು ಯೋಚಿಸಿ, ಅಶೋಕನನ್ನು ಕುರಿತು—ಭಗವನ್, ಈ ಚಿಕ್ಕ ಅಣ್ಣನು ವರ್ಣಿಸುವ ಭಿಕ್ಷುವು ಬಹಳಮಾಡಿ ಇಂದು ನನಗೆ ಭೆಟ್ಟಿಯಾದ ತರುಣಭಿಕ್ಷುವೇ ಇರಬಹುದು. ಇರಲಿ, ರಾಧಾಗುಪ್ತಮಂತ್ರಿಯು ಸುರಕ್ಷಿತ ಥಾರಾದದ್ದರಿಂದ ಸಾಮ್ರಾಜ್ಯದ ಒಂದು ಅರಿಷ್ಟವು ಹಿಂಗಿದಹಾಗಾಯಿತು.

ತನ್ನ ವೃದ್ಧಮಂತ್ರಿಯು ಸುರಕ್ಷಿತವಿದ್ದದ್ದನ್ನು ಕೇಳಿ, ಸಾಮ್ರಾಟ್ ಅಶೋಕನಿಗಾದ ಆನಂದಕ್ಕಿಂತ, ಎಷ್ಟೋಪಟ್ಟು ಹೆಚ್ಚು ವ್ಯಸನವು, ಅಘೋರ ಕೃತ್ಯವನ್ನು ಮಾಡುವದಕ್ಕಾಗಿ ಭಿಕ್ಷುಗಳು ಒಟ್ಟುಗೂಡಿರುವದನ್ನು ನೋಡಿ ಚಕ್ರವರ್ತಿಗೆ ಆಯಿತು. ಅಹಿಂಸಾತತ್ವದ ಪ್ರಸಾರಮಾಡುವವರ ಮುಂದಾಳುಗಳಾದ ಧರ್ಮಗುರುಗಳೇ ಸಂಘಶಕ್ತಿಯಿಂದ ಒಟ್ಟುಗೂಡಿ, ನಿರಪರಾಧಿಯಾದ ರಾಧಾಗುಪ್ತಮಂತ್ರಿಯನ್ನು ಕೊಲ್ಲುವದಕ್ಕಾಗಿ ಯತ್ನಿಸಿದಬಳಿಕ, ಬೌದ್ಧಧರ್ಮದ ಉದಾತ್ತತತ್ವಗಳ ಆಚರಣವು ಪ್ರಜೆಗಳಲ್ಲಿ ರೂಢವಾಗಿ ಅವರು ನೀತಿವಂತರಾಗಲಿಕ್ಕೆ ಮಾರ್ಗವೇ ಇಲ್ಲದಾಯಿತೆಂದು ಚಕ್ರವರ್ತಿಯು ವ್ಯಸನಪಟ್ಟನು. ಆತನ ಮನಸ್ಸು ಕಲಿಂಗದೇಶದ ಸಮರವಹ್ನಿಯಲ್ಲಿ ಕಾದು

ಮೆಣ್ತಗಾಗಿತ್ತು; ನರಕವನ್ನು ನಾಶಮಾಡಿದಬಳಿಕ ಉಪಗುಪ್ತಾಚಾರ್ಯರಂಥ ಪ್ರೇಮುಲಗುರುವಿನ ಸಮಾಗಮವು ಆತನಿಗೆ ಪ್ರಾಪ್ತವಾದದ್ದರಿಂದ, ಆ ಮನಸ್ಸು ದಿನದಿನಕ್ಕೆ ಶುದ್ಧವಾಗುತ್ತ ನಡೆದಿತ್ತು. ತಾನು ಜನರಿಗೆ ಧರ್ಮದ ನಿಜವಾದ ತತ್ವಗಳನ್ನು ತಿಳಿಸಲಿಕ್ಕೆ ಯತ್ನಿಸುತ್ತಿರಲು, ಧರ್ಮಗುರುಗಳು ದಿನದಿನಕ್ಕೆ ಪಾಪರೂಪವಾದ ಕೆಸರಿನಲ್ಲಿ ಮುಳುಗುತ್ತ ನಡೆದಿರುವದನ್ನು ನೋಡಿ, ಆತನು ಚಿಂತೆಗೊಳಗಾದನು. ಸೊಸೆಗೆ ಆಚಾರವನ್ನು ಹೇಳುವ ಮುದುಕೆಯಾದ ಅತ್ತೆಯೇ ಜಾರಕರ್ಮದಲ್ಲಿ ಕಾಲಹರಣಮಾಡುವಂತೆಯೂ, ಔಷಧಕೊಟ್ಟು ರೋಗಿಗಳ ಬೇನೆಯನ್ನು ಕಳೆಯುವ ವೈದ್ಯರಾಜನೇ ರೋಗಿಗಳಿಗೆ ವಿಷಪಾನಮಾಡಿಸುವಂತೆಯೂ ಇರುವ, ಧರ್ಮಗುರುಗಳ ವಿಪರೀತವಾದ ಆಚರಣೆಯು ಚಕ್ರವರ್ತಿಗೆ ತಿರಸ್ಕರಣೀಯವಾಗಿ ತೋರಿತು. ಆತನು ಸೆರೆಯಾಳಾಗಿ ನಿಂತುಕೊಂಡಿದ್ದ ಭಿಕ್ಷುಗಳನ್ನು ಕುರಿತು—ಭಿಕ್ಷುಗಳಿರಾ, ಈವೊತ್ತಿನವರೆಗೆ ನಿಮ್ಮ ಅನಾಚಾರಗಳನ್ನು ಕಿವಿಯಿಂದ ಕೇಳುತ್ತ ಬಂದಿದ್ದೆನು; ಆದರೆ ಇಂದು ಕಣ್ಣುಮುಟ್ಟ ನೋಡಿದಹಾಗಾಯಿತು. ಸಂಸಾರವಿರಕ್ತರಾದ ಭಿಕ್ಷುಗಳು, ಎಂದೂ ಅನಾಚಾರಮಾಡರೆಂದು ನಾನು ನಂಬಿದ್ದೆನು; ಆದ್ದರಿಂದ ನಿಮ್ಮ ಲೀಲೆಗಳು ನನ್ನ ಕಿವಿಗೆ ಬಿದ್ದಾಗೆಲ್ಲ ನಾನು ಅವನ್ನು ಅವಿಶ್ವಸನೀಯವೆಂದು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಹೀಗೆ ನಿಮ್ಮಿಂದ ನನ್ನ ಪ್ರಜೆಗಳಿಗಾಗುತ್ತಿದ್ದ ಪೀಡೆಯನ್ನು ಕೇಳುವವರೇ ಇಲ್ಲದಾಗಲು, ಅವರು ನನ್ನಮುಂದೆ ಹೇಳುವದನ್ನೇ ಬಿಟ್ಟುಬಿಟ್ಟರು. ಆಗ ನಾನು ನಮ್ಮ ಭಿಕ್ಷುಗಳು ಬಹು ಸದಾಚಾರಸಂಪನ್ನರೆಂದು ಭಾವಿಸಹತ್ತಿದೆನು. ಇಲ್ಲಿಯವರೆಗೆ ನೀವು ದುರಭಿಮಾನದ ಅಹಂಕಾರದಿಂದ ನನ್ನ ಪ್ರಜೆಗಳನ್ನು ಬಹಳ ಪೀಡಿಸಿದಿರಿ; ನಿಮ್ಮ ಹಟವನ್ನು ನಡಿಸುವದಕ್ಕಾಗಿ ಬಹುಜನರಿಗೆ ತಾಪವನ್ನುಂಟುಮಾಡಿದಿರಿ; ಭಿಕ್ಷುವೇಷದ ಸಹಾಯದಿಂದ ನಿರ್ಭಯರಾಗಿ ಮನಸ್ಸಿಗೆ ಬಂದಂತೆ, ಅನಾಚಾರಗಳನ್ನು ಮಾಡಿದಿರಿ. ಜನರನ್ನು ನೀತಿಸಂಪನ್ನರಾಗಮಾಡುವದಕ್ಕಾಗಿ ಭಗವಾನ್ ಶ್ರೀಬುದ್ಧದೇವನು ಸ್ಥಾಪಿಸಿದ ಭಿಕ್ಷು-ಭಿಕ್ಷುಣಿಗಳ ಪಂಥವು, ನಿಮ್ಮ ಯೋಗದಿಂದ ಸ್ವತಃ ಕೆಸರಿನಲ್ಲಿ ಮುಳುಗಿದಂತಾಗಿದೆ. ನಿಮಗೆ ಪ್ರಾಣಹಿಂಸೆಯು ಕಃಪದಾರ್ಥವಾಗಿ ತೋರಹತ್ತಿದೆ.

ನೀವು ಸರ್ವತಂತ್ರಸ್ವತಂತ್ರ ಜಗದೀಶ್ವರನಂತೆವರ್ತಿಸಿ, ಜಗತ್ತನ್ನು ತೃಣಕ್ಕೆಸಮಾನವಾಗಿ ಭಾವಿಸುವಿರಿ. ಸ್ವೇಚ್ಛಾಚಾರಕ್ಕೆ ಆಸ್ಪದವು ದೊರೆತದ್ದರಿಂದಲೇ, ಕುಳಿತವರು-ನಿಂತವರೆಲ್ಲ ಭಿಕ್ಷುಗಳಾಗಹತ್ತಿದ್ದಾರೆ. ಒಬ್ಬ ಶಿಷ್ಯನಿಗೆ ಐವರು ಗುರುಗಳಂತೆ ಪ್ರಮಾಣವು ಬೀಳಹತ್ತಿದೆ. ಭರದಿಂದ ಬೆಳೆಯುವ ಈ ಗುಗುಗಳ ಸಂಖ್ಯೆಯನ್ನು ಕಡಿಮೆಮಾಡದಿದ್ದರೆ, ಅನರ್ಥವು ತಪ್ಪದು. ಧರ್ಮೋನ್ನತಿಯಾಗಬೇಕೆಂತಲೂ, ಸದ್ಧರ್ಮದ ಪ್ರಸಾರವಾಗಬೇಕೆಂತಲೂ ಈವೊತ್ತಿನವರೆಗೆ ನಾನು ಭಿಕ್ಷು-ಭಿಕ್ಷುಣಿಯರಿಗೆ ಮಾಡಿದ ಸಹಾಯವೆಲ್ಲ ವ್ಯರ್ಥವಾಯಿತು. ಅವರ ಅನುಕೂಲತೆಗಾಗಿ ನಾನು ಕೈಗೆಬಂದಂತೆ ಹಣವನ್ನು ವೆಚ್ಚಮಾಡಿದೆನು; ಮನಸ್ಸಿಗೆ ಬಂದಂತೆ ವಿಹಾರಗಳನ್ನು (ಬೌದ್ಧಮಠಗಳನ್ನು) ಕಟ್ಟಿಸಿದೆನು; ನಿಮ್ಮ ಸಂಗಡ ವಿಚಿತ್ರಪೂಜ್ಯಬುದ್ಧಿಯಿಂದ ನಡಕೊಂಡೆನು. ಇಷ್ಟು ಪೌಷ್ಟಿಕಾಹಾರವನ್ನು ನಿಮಗೆ ಒದಗಿಸಿಕೊಡುತ್ತಿದ್ದರೂ, ನಿಮ್ಮ ಮನಸ್ಸು ದುರ್ಬಲವಾಗಿರುವದರ ಕಾರಣವು ನನಗೆ ಗೊತ್ತಾಗದಾಗಿದೆ. ಅನ್ಯಕಾರಣವೇನಿರಬೇಕು? ಮನಸ್ಸಿಗೆ ಬಂದಹಾಗೆ ತಿಂದು, ಮನಸ್ಸಿಗೆ ಬಂದಂತೆ ನಡೆದು, ಆಲಸ್ಯಕ್ಕೆ ಮೆಚ್ಚಿದ್ದರಿಂದಲೇ ನಿಮ್ಮ ಮನಸ್ಸು ದುರ್ಬಲವಾಗಿರುತ್ತದೆ. ಹಾಯ್ ಹಾಯ್! ಇಷ್ಟು ದಿವಸ ಜನರಹಿತಕ್ಕಾಗಿಯೂ, ಸದ್ಧರ್ಮದ ಪ್ರಸಾರಕ್ಕಾಗಿಯೂ ನಾನು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದವಲ್ಲವೆ! !

ಈಮೇರೆಗೆ ನುಡಿಯುವಾಗ ಅಶೋಕನ ಹೃದಯವು ಕರಗಿ, ಕರುಣಾರಸವು ಆತನ ಕಣ್ಣುಗಳ ಮಾರ್ಗವಾಗಿ ಹೊರಬೀಳಹತ್ತಿತು. ಅದನ್ನು ನೋಡಿ ವೀತಾಶೋಕನು—"ಭಗವನ್, ಕರುಣಾಳುವೆ, ನೀನು ಇಷ್ಟು ಅಸಮಾಧಾನಪಡಬಾರದು. ಸಂಪುಷ್ಟಾಚಾರ್ಯನೂ, ಆತನ ಶಿಷ್ಯರೂ ನೀಚವೃತ್ತಿಯಲ್ಲಿ ಕಾಲಕ್ರಮಣಮಾಡುತ್ತಿದ್ದರೂ, ಎಲ್ಲ ಭಿಕ್ಷು-ಭಿಕ್ಷುಣಿಗಳು ಧರ್ಮಬಾಹಿರರಾಗಿಯೇ ನಡೆಯುತ್ತಾರೆಂದು ತಿಳಿಯಲಾಗದು. ತಮ್ಮ ಧರ್ಮಪ್ರಭಾವದಿಂದ ಪಂಚಮಹಾಭೂತಗಳನ್ನು ವಶಮಾಡಿಕೊಳ್ಳುವ ಉಪಗುಪ್ತಾಚಾರ್ಯರೂ, ತ್ರಿಕಾಲಜ್ಞಾನಿಗಳಾದ ಮೊಗ್ಗಲೀಪುತ್ರ-ಶಿಷ್ಯರವರೂ ಭಿಕ್ಷುಗಳೇ ಆಗಿರುತ್ತಾರೆ. ಇಂಥ ಭಿಕ್ಷುಶ್ರೇಷ್ಠರು

ರತ್ನಗಳಂತೆ ಅಲ್ಲಲ್ಲಿ ಹೊಳೆಯುತ್ತಿರಬಹುದು; ಅಂಥವರಿಂದ ನಿನ್ನ ಪ್ರಜೆಗಳ ಹೃದಯದಲ್ಲಿ ನಿಜವಾದ ಧರ್ಮಪ್ರಕಾಶವೂ ಮಿನುಗುತ್ತಿರಬಹುದು" ಅನ್ನಲು, ಅಶೋಕನು—"ಕುಮಾರಾ, ಇಂಥ ರತ್ನಗಳನ್ನು ಆರಿಸಿ ಅವುಗಳದೊಂದು ಹಾರವನ್ನು ರಚಿಸಿ, ಅದನ್ನು ನನ್ನ ಪ್ರಜೆಗಳಿಗೆ ಅರ್ಪಿಸದಿದ್ದರೆ, ಅವರ ಕಲ್ಯಾಣವಾಗದು; ಆದರೆ ಇಂಥ ರತ್ನಗಳನ್ನು ಹೇಗೆ ಹುಡುಕಬೇಕು? ಕಲ್ಲಿದ್ದಲಿಯ ಖನಿಯಲ್ಲಿ ರತ್ನಗಳು ಹುಗಿದಿರುವಂತೆ, ಹಿಂಡಾನುಹಿಂಡು ಬೌದ್ಧಭಿಕ್ಷುಗಳಲ್ಲಿ ಮಹಾತ್ಮರಾದ ಭಿಕ್ಷುಗಳು ಎಲ್ಲಿ ಅಡಗಿರುವರೋ ಯಾರಿಗೆ ಗೊತ್ತು!" ಎಂದು ನುಡಿದು, ಅಶೋಕನು ಕ್ಷಣಮಾತ್ರ ಯೋಚಿಸಿ, ಬಹು ಸಮಾಧಾನದಿಂದ—ಕುಮಾರಾ, ಉಪಗುಪ್ತಾಚಾರ್ಯರಂಥ ಯೋಗ್ಯಮಾರ್ಗದರ್ಶಕರು ಬಳಿಯಲ್ಲಿ ಇರುತ್ತಿರಲು, ವ್ಯರ್ಥ ಚಿಂತೆಮಾಡುವದೇಕೆ? ಇನ್ನು ರಾತ್ರಿಯೂ ಬಹಳ ಇಲ್ಲ; ಮಲಗಿದರೆ ನಿದ್ದೆಯೂ ಬರುವಹಾಗಿಲ್ಲ; ಆದ್ದರಿಂದ ಆಚಾರ್ಯರ ದರ್ಶನಕ್ಕಾಗಿ ಈಗಲೇ ವೇಣುವನಕ್ಕೆ ಹೋಗಿಬರುವೆನು; ನೀವೆಲ್ಲರು ವಿಶ್ರಮಿಸಬಹುದು, ಎಂದು ಹೇಳಿ, ಭಿಕ್ಷುಗಳನ್ನು ನ್ಯಾಯಾಸನದ ಮುಂದೆ ನಿಲ್ಲಿಸುವವರೆಗೆ ಸೆರೆಯಲ್ಲಿರಿಸುವಂತೆ ಆಜ್ಞಾಪಿಸಿ, ಗುರುಗಳ ದರ್ಶನಕ್ಕೆ ಹೊರಟನು. ಆಗ ಕುಮಾರ ವೀತಾಶೋಕನೂ, ಯುವರಾಜನೂ ಚಕ್ರವರ್ತಿಯನ್ನು ಹಿಂಬಾಲಿಸಿದರು. ಅಷ್ಟರಲ್ಲಿ ರಾಧಾಗುಪ್ತ ಮಂತ್ರಿಯು ಚಕ್ರವರ್ತಿಯ ದರ್ಶನಕ್ಕಾಗಿ ಬರಲು, ಅವರೆಲ್ಲರೂ ವೇಣುವನಕ್ಕೆ ಸಾಗಿದರು.

ವೇಣುವನವು ಗಂಗಾತೀರದಲ್ಲಿತ್ತು. ಉಪಗುಪ್ತಾಚಾರ್ಯರು ಅರಮನೆಯಲ್ಲಿರುವದಕ್ಕೆ ಒಪ್ಪಿಕೊಳ್ಳದ್ದರಿಂದ, ಚಕ್ರವರ್ತಿಯು ಗಂಗಾತೀರದಲ್ಲಿ ಅವರ ಸಲುವಾಗಿ ಹೊಸದಾಗಿಯೇ ಒಂದು ವಿಹಾರವನ್ನು ಕಟ್ಟಿಸಿ, ವೇಣುವನವೆಂಬ ಹೆಸರಿನ ಉಪವನವನ್ನು ಅದಕ್ಕೆ ಜೋಡಿಸಿದನು. ವೇಣುವನದ ಪ್ರದೇಶವು ಬಹುರಮ್ಯವಾಗಿತ್ತು. ತಪಸ್ವಿಗಳ ವಾಸಕ್ಕೆ ಆ ವನವು ಬಹುಯೋಗ್ಯವಾದದ್ದು. ಅಶೋಕನು ಪರಿವಾರದೊಡನೆ ಉಪಗುಪ್ತಾಚಾರ್ಯರ ಬಳಿಗೆ ಹೋಗಿ ನಮಸ್ಕರಿಸಲು, ಆಚಾರ್ಯರು ಆತನನ್ನು ಆಶೀರ್ವದಿಸಿ—ಚಕ್ರವರ್ತಿಯೇ, ನಿಮ್ಮ ಈ ವಿಶ್ರಾಂತಿಯಕಾಲದಲ್ಲಿ

ನೀವೆಲ್ಲರೂ ನನ್ನ ಬಳಿಗೆ ಬಂದ ಕಾರಣವೇನು? ಎಂದು ಕೇಳಲು, ಚಕ್ರವರ್ತಿಯು ನಡೆದ ಸಂಗತಿಯನ್ನೆಲ್ಲ ಹೇಳಿದನು. ಅದನ್ನು ಕೇಳಿ ಉಪಗುಪ್ತಾಚಾರ್ಯರು ಆನಂದದಿಂದ—ಭಗವನ್, ನೀನೂ ಧನ್ಯನು; ನಿನ್ನ ಸ್ವಧರ್ಮನಿಷ್ಠೆಯೂ ಧನ್ಯವಾದದ್ದು. ಪ್ರಜೆಗಳಲ್ಲಿ ಸದ್ಧರ್ಮದ ಪ್ರಸಾರವಾಗಿ, ಅವರು ನೀತಿವಂತರಾಗಬೇಕೆಂದು ಮನಃಪೂರ್ವಕವಾಗಿ ಮಾಡುವ ನಿನ್ನ ಪ್ರಯತ್ನವು ಸ್ತುತ್ಯವಾದದ್ದಿರುತ್ತದೆ! ಭರತಖಂಡದ ಚಕ್ರವರ್ತಿಯಾದದ್ದನ್ನು ನಿಜವಾಗಿ ನೀನು ಸಾರ್ಥಕಮಾಡಿದೆ. ನೀನು ಬೌದ್ಧಧರ್ಮದ ಪ್ರಬಲಪುರಸ್ಕರ್ತೃವೆಂದು ಈ ವೊತ್ತಿನವರೆಗೆ ಪ್ರಸಿದ್ಧನಾಗಿದ್ದೆ; ಇನ್ನುಮೇಲೆ ನೀನು ಬೌದ್ಧಧರ್ಮದ ಪ್ರತಿಪಾಲಕನೆಂತಲೂ, ಪ್ರಸಾರಕನೆಂತಲೂ ಪ್ರಸಿದ್ಧನಾಗುವೆ! ಮಗಧದೇಶದ ಪ್ರಬಲ ರಾಜಮನೆತನದವರು ಸಂಪುಷ್ಟಾಚಾರ್ಯರಂಥ ಧರ್ಮವಿಹೀನ ಭಿಕ್ಷುಗಳಿಗೆ ವ್ಯರ್ಥವಾಗಿ ಮಹತ್ವಕೊಟ್ಟದ್ದರಿಂದ, ಆ ದುರಭಿಮಾನಿಗಳ ಅಹಂಕಾರವು ತಲೆಗೇರಿ ಅವರು ಮನಸ್ಸಿಗೆ ಬಂದಂತೆ ಅನಾಚಾರಗಳನ್ನು ಮಾಡತೊಡಗಿದರು. ಆಗ ಶ್ರೀ ಬುದ್ಧದೇವನ ಅಮೂಲ್ಯವಾದ ತತ್ವಗಳ ಅರ್ಥವು ಮನಸ್ಸಿಗೆ ಬಂದಂತೆ ಆಗ ತೊಡಗಿತು. ಭಿಕ್ಷುಗಳ ಅನಾಚಾರಕ್ಕಾಗಿ ಬೇಸತ್ತು, ಮೊಗ್ಗಲೀಪುತ್ರ-ಶಿಷ್ಯರವರು ಅರಣ್ಯ ವಾಸಮಾಡಲು, ಅವರ ತೆರವಾದ ಸಭಾಪತಿಯಸ್ಥಾನವನ್ನು ಸಂಪುಷ್ಟಾಚಾರ್ಯರು ಆಕ್ರಮಿಸಿದರು; ಅಂದಿನಿಂದ ಭಿಕ್ಷುಮಂಡಲದಲ್ಲಿ ನೋಡಿದತ್ತೆಲ್ಲ ಆಲಸ್ಯ, ಧರ್ಮಪರಾಙ್ಮುಖತೆ, ದುರಾಚರಣೆ ಇವು ಹಬ್ಬುಹತ್ತಿವೆ! ಇದನ್ನು ಪ್ರತಿಬಂಧಿಸಲಿಕ್ಕೆ ಮೊಗ್ಗಲೀಪುತ್ರ-ಶಿಷ್ಯರಂಥ ಮಹಾತ್ಮರ ಆವಶ್ಯಕತೆಯಿರುವದು.

ಉಪಗುಪ್ತಾಚಾರ್ಯರವರ ಈ ಮಾತುಗಳನ್ನು ಕೇಳಿ ಚಕ್ರವರ್ತಿಯು—ಆಚಾರ್ಯರೇ, ಮೊಗ್ಗಲೀಪುತ್ರ-ಶಿಷ್ಯರವರ ದರ್ಶನವಾಗುವದೇ ಅಶಕ್ಯವಾಗಿರಲು, ಅವರ ಪ್ರಾಪ್ತಿಯಾಗುವ ಬಗೆಯೇನು? ಇಂಥ ಪ್ರತಿಕೂಲ ಸ್ಥಿತಿಯಲ್ಲಿ ಸರ್ವತ್ರ ಸದ್ಧರ್ಮ-ಪ್ರಸಾರವಾಗಿ ಜನರ ಕಲ್ಯಾಣವು ಹೇಗಾದೀತು, ಎಂದು ಅಸಮಾಧಾನದಿಂದ ನುಡಿಯುತ್ತಿರಲು, ಒಬ್ಬ ತರುಣ ಬೌದ್ಧಭಿಕ್ಷುವು ಅಲ್ಲಿಗೆ ಬಂದು ಉಪಗುಪ್ತಾಚಾರ್ಯ

ಶಸ್ಸು ವಂದಿಸಿ ಅಶೋಕನನ್ನು ಆಶೀರ್ವದಿಸಿ, ಒಂದು ತಾಡವಾಲಿಯ ಪತ್ರವನ್ನು ಚಕ್ರವರ್ತಿಯ ಕೈಯಲ್ಲಿ ಕೊಟ್ಟನು. ಆ ತರುಣ ಭಿಕ್ಷುವನ್ನು ನೋಡಿ ಇಂದಿರೆಗೆ ಸಂತೋಷವಾಯಿತು. ಆಗ ವೀತಾಶೋಕನು ಚಕ್ರವರ್ತಿಯನ್ನು ಕುರಿತು—ಭಗವನ್, ರಾಧಾಗುಪ್ತ-ಮಂತ್ರಿಯನ್ನು ಬಂಧಮುಕ್ತಮಾಡಿದ ತರುಣಭಿಕ್ಷುವು ಈತನೇ, ಎಂದು ಹೇಳಿದನು. ರಾಧಾಗುಪ್ತನಾದರೂ ಆ ಮಾತಿಗೆ ಒಪ್ಪಿಕೊಂಡು, ಈ ಭಿಕ್ಷುವು ಇಲ್ಲದಿದ್ದರೆ ನಾನು ಪ್ರಾಣಕ್ಕೆ ಎರವಾಗುತ್ತಿದ್ದೆನೆಂದು ಚಕ್ರವರ್ತಿಯ ಮುಂದೆ ಹೇಳಿದನು. ಆ ತರುಣ ಭಿಕ್ಷುವಿನ ರೂಪವು ತನ್ನಲ್ಲಿರುವ ವೇಷಧಾರಿ ಯುವರಾಜನ ರೂಪವನ್ನು ಅಚ್ಚಳಿಯದೆ ಹೋಲುತ್ತಿರುವದನ್ನು ನೋಡಿ ಚಕ್ರವರ್ತಿಗೆ ಆಶ್ಚರ್ಯವಾಯಿತು. ಆತನು ಆ ತರುಣಭಿಕ್ಷುವನ್ನು ಕುರಿತು—ಭಿಕ್ಷುಶ್ರೇಷ್ಠನೇ, ಈ ತಾಡವಾಲಿಯ ಪತ್ರವನ್ನು ಯಾರುಕೊಟ್ಟರು? ಎಂದು ಕೇಳಲು, ಅದಕ್ಕೆ ಭಿಕ್ಷುವು— ಭಗವನ್, ಮಹಾತ್ಮರಾದ ಮೊಗ್ಗಲೀಪುತ್ರ-ಶಿಷ್ಯರವರು ಈ ಪತ್ರುವನ್ನು ಸನ್ನಿಧಿಗೆ ಮುಟ್ಟಿಸೆಂದು ನನ್ನಕೈಯಲ್ಲಿ ಕೊಟ್ಟಿರುತ್ತಾರೆ. ಎಂದು ಹೇಳಿ, ಒಮ್ಮೆ ಇಂದಿರೆಯ ಮೋರೆಯನ್ನೂ, ಒಮ್ಮೆ ಅಶೋಕನ ಮೋರೆಯನ್ನೂ, ಒಮ್ಮೆ ಉಪಗುಪ್ತಾಚಾರ್ಯರ ಮೋರೆಯನ್ನೂ ನೋಡುತ್ತ ನಿಂತುಕೊಂಡನು. ಮೊಗ್ಗಲೀಪುತ್ರ-ಶಿಷ್ಯರವರ ಪತ್ರುವೆಂದಕೂಡಲೆ, ಚಕ್ರವರ್ತಿಗೂ ಅಲ್ಲಿ ಕೂಡಿದವರಿಗೂ ಪರಮಾಶ್ಚರ್ಯವಾಯಿತು. ಚಕ್ರವರ್ತಿಯು ಆ ಪತ್ರವನ್ನು ಭಕ್ತಿಯಿಂದ ತಲೆಯಮೇಲೆ ಇಟ್ಟುಕೊಂಡು, ಅದನ್ನು ಜಾಗರೂಕತೆಯಿಂದ ಉಚ್ಚಿ ಓದಹತ್ತಿದನು. —

ಸಕಲಗುಣಾಲಂಕೃತರಾದ ರಾಜರಾಜೇಶ್ವರ ಅಶೋಕಸಾರ್ವಭೌಮರವರಿಗೆ—ಅನಂತ ಆಶೀರ್ವಾದಗಳು. ನಾವು ಭರತಖಂಡದೊಳಗಿನ ದೇಶ-ದೇಶಗಳಲ್ಲಿ ವಿಹಾರಗಳನ್ನು ಕಟ್ಟಿಸುತ್ತ ಧರ್ಮರತರಾಗಿರುವೆವು. ನಮ್ಮ ಧಾರ್ಮಿಕವ್ಯವಹಾರಗಳು ಸುಸೂತ್ರವಾಗಿ ನಡೆದಿರುತ್ತವೆ; ಆದರೆ ಜನರ ನೀತಿಯು ಅಭಿವೃದ್ಧವಾಗಬೇಕೆಂತಲೂ, ಅವರು ಧರ್ಮಪರಾಯಣರಾಗಬೇಕೆಂತಲೂ, ಅಹಿಂಸಾತತ್ವವು ಅವರ ಹೃದಯದಲ್ಲಿ ಮೂಡಿ, ಭಗ

ಕರೆಸುವ ಕಾರಣವಿಲ್ಲ. ನಿನ್ನ ಸೇವಕರಿಗೆ ನನ್ನ ಸ್ಥಾನವು ಗೊತ್ತಾಗ ಲಿಕ್ಕಿಲ್ಲ. ಭಗವನ್, ಮಹಾಸಭೆಯು ಬೇಗನೆ ನೆರೆದು, ಪ್ರಕೃತಕ್ಕೆ ಧರ್ಮ ಪ್ರಸಾರದ ಮಾರ್ಗದಲ್ಲಿರುವ ಪ್ರತಿಬಂಧಗಳು ದೂರವಾಗಲೆಂದು ಈ ಮೊಗ್ಗಲೀಪುತ್ರ-ತಿಷ್ಯನು ಇಚ್ಛಿಸುವನು.

ಈ ಪತ್ರವನ್ನು ಓದಿ ಚಕ್ರವರ್ತಿಗೆ ಪರಮಾನಂದವಾಯಿತು. ಆತನು ಉಪಗುಪ್ತಾಚಾರ್ಯರನ್ನು ಕುರಿತು—ಆಚಾರ್ಯರೇ, ಭಿಕ್ಷುಗಳ ಅನಾಚಾರವನ್ನು ಹೇಗೆ ಕಡಿಮೆ ಮಾಡಬೇಕೆಂದು ನಾನು ಯೋಚಿಸುತ್ತಿರಲು,ಮಹಾತ್ಮರಿಂದ ಯೋಗ್ಯಮಾರ್ಗವು ದೊರೆತಂತಾಯಿತು. ಇದೆಲ್ಲ ತಮ್ಮ ಕೃಪೆಯಫಲವು! ತಮ್ಮ ದರ್ಶನವಾದಂದಿನಿಂದ ಅಶೋಕನಆತ್ಮೋನ್ನತಿಗೆಆರಂಭವಾದಂತಾಗಿದೆ' ಅನ್ನಲು, ಉಪಗುಪ್ತಾಚಾರ್ಯರು—ಭಗವನ್, ಪುಣ್ಯಪ್ರತಾಪದಿಂದ ನಿನ್ನ ಆತ್ಮವೊಂದೇ ಉನ್ನತಿಯನ್ನು ಪಡೆಯುವದೆಂತಲ್ಲ; ಜಗತ್ತೇ ನಿನ್ನ ಯೋಗದಿಂದ ಆತ್ಮೋನ್ನತಿಯ ಮಾರ್ಗವನ್ನು ಹಿಡಿಯುವದೆಂದು ಹೇಳಿದರೆ ಅತಿಶಯೋಕ್ತಿಯಾಗುವದಾಗಿಲ್ಲ. ಇರಲಿ, ಬೇಗನೆ ಮಹಾಸಭೆಯನ್ನು ನೆರೆಸುವ ವ್ಯವಸ್ಥೆ ಮಾಡು. ಮಹಾತ್ಮರಾದ ಮೊಗ್ಗಲೀಪುತ್ರ-ತಿಷ್ಯರು ಸಭೆಗೆ ಬರುತ್ತೇವೆಂದು ಹೇಳಿರುವದರಿಂದ, ಸಭಾಪತಿಯ ಚಿಂತೆಯೂ ಕಡಿದಹಾಗಾಯಿತು. "ಶುಭಸ್ಯ ಶೀಘ್ರಂ" ಎನ್ನುವಂತೆ, ಈ ಕಾರ್ಯದಲ್ಲಿವಿಲಂಬ ಮಾಡಲಾಗದು, ಎಂದು ನುಡಿಯುತ್ತಿರಲು, ಸೂರ್ಯೋದಯ ಸಮಯವು ಪ್ರಾಪ್ತವಾಯಿತು. ವೇಷಧಾರಿ ಜಿತೇಂದ್ರನು ವೇಣುವನದಲ್ಲಿ ಉಪಗುಪ್ತಾಚಾರ್ಯರ ಸನ್ನಿಧಿಯಲ್ಲಿರುವೆನೆಂದು ಚಕ್ರವರ್ತಿಯನ್ನು ಬೇಡಿಕೊಂಡದ್ದರಿಂದ, ಆತನು ಒಡಂಬಟ್ಟು, ಯುವರಾಜನ ಸಂರಕ್ಷಣಕ್ಕಾಗಿ ಅಂಗರಕ್ಷಕರನ್ನು ನಿಯಮಿಸಿದನು. ಚಕ್ರವರ್ತಿಯು ಆಚಾರ್ಯರ ಅನುಮತಿಯನ್ನು ಪಡೆದು ಹೊರಡಲು, ಎಲ್ಲರೂ ಆತನನ್ನು ಹಿಂಬಾಲಿಸಿದರು. ಮಹಾಸಭೆಯ ಗದ್ದಲದಲ್ಲಿ ನಮ್ಮ ತರುಣಭಿಕ್ಷುವಿನ ಕಡೆಗೆ ಇಂದಿರೆಯ ಹೊರತು ಬೇರೆಯಾರ ಲಕ್ಷವೂ ಹೋಗಿದ್ದಿಲ್ಲ. ಎಲ್ಲರೂ ಹೋದ ಬಳಿಕ ಭಿಕ್ಷುವೂ ತನ್ನ ಮನಬಂದತ್ತ ಹೊರಟು ಹೋದನು. ಹೇಗೂ ಮಹಾಸಭೆಯು ಕೂಡತಕ್ಕದ್ದಿದ್ದುದರಿಂದ ಸೆರೆಯಲ್ಲಿರುವ ಭಿಕ್ಷುಗಳ ವಿಚಾರವನ್ನು ಆಗೇ ಮಾಡಬೇಕೆಂದು ಉಪ

ಗುಪ್ತಾಚಾರ್ಯರು ಹೇಳಲು, ಅವರಸೂಚನೆಯಂತೆ ಯಾವತ್ತು ಭಿಕ್ಷುಗಳನ್ನು ಚಕ್ರವರ್ತಿಯು ಬಂಧಮುಕ್ತವಾಗ ಮಾಡಿದನು.

———[೦]———

## ೧೬ ನೆಯ ಪ್ರಕರಣ, ಮಹಾಸಭೆಯು.



ಪಾಟಲಿಪುತ್ರದಲ್ಲಿ ಮಹಾಸಭೆಯ ಸಿದ್ಧತೆಯು ಒತ್ತರದಿಂದ ಆಗಹತ್ತಿತು. ಅಶೋಕನು ಗಂಗಾತೀರದಲ್ಲ ಅತ್ಯಂತ ವಿಸ್ತೀರ್ಣವಾದ ಸಭಾಮಂಟಪವನ್ನು ಹಾಕಿಸಹತ್ತಿದನು. ಸಭೆಗೆ ಹದಿನೈದೇ ದಿನಗಳ ಅವಕಾಶವಿದ್ದದ್ದರಿಂದ, ತನ್ನ ಯಾವತ್ತು ರಾಜ್ಯದೊಳಗಿನ ಎಲ್ಲ ಭಿಕ್ಷುಗಳು ಅಷ್ಟರೊಳಗೆ ಕೂಡಬೇಕೆಂದು ಚಕ್ರವರ್ತಿಯು ತನ್ನ ಆಜ್ಞಾಪತ್ರದ ಪ್ರಸಿದ್ಧೀಕರಣವನ್ನು ದಕ್ಷತೆಯಿಂದ ಮಾಡಿಸುತ್ತಲಿದ್ದನು. ಚಕ್ರವರ್ತಿಯ ಈ ಮನೋದಯವನ್ನು ಅರಿತು ಬೇರೆ ಬೇರೆ ಅಧಿಕಾರಿಗಳೂ, ಮಾಂಡಲಿಕರೂ ತಮ್ಮ ತಮ್ಮ ರಾಜ್ಯದೊಳಗಿನ ಭಿಕ್ಷುಗಳನ್ನೆಲ್ಲ ಪಾಟಲಿಪುತ್ರಕ್ಕೆ ಕಳಿಸುವದಕ್ಕಾಗಿ ತಮ್ಮ ಬುದ್ಧಿಗೆ ತೋಚಿದಂತೆ ಬೇರೆ ಬೇರೆ ಉಪಾಯಗಳನ್ನು ಯೋಚಿಸತೊಡಗಿದರು. ಕೆಲವರು, ಮಹಾಸಭೆಯಲ್ಲಿ ಭಿಕ್ಷುಮಂಡಲವನ್ನು ಕೂಡಿಸಿ ಚಕ್ರವರ್ತಿಯು ವಿಶೇಷ ದಕ್ಷಿಣೆ ಕೊಡುವನೆಂದು ಹುಟ್ಟಿಸಿದರು; ಕೆಲವರು ಮಹಾಸಭೆಯ ಮಂಟಪದ ಸುತ್ತುಮುತ್ತು ಭಿಕ್ಷುಗಳಿಗಾಗಿ ಅನ್ನಸಂತರ್ಪಣವಾಗುವದೆಂದು ಹೇಳಿದರು; ಬೇರೆ ಕೆಲವರು, ಏಕಸಮಯಾವಚ್ಛೇದದಿಂದ ಯಾವತ್ತು ಧರ್ಮಗುರುಗಳ ದರ್ಶನಮಾಡಿಕೊಳ್ಳಬೇಕೆಂದು ಚಕ್ರವರ್ತಿಯು ಕರೆಸಿರುವನೆಂದು ಪ್ರಸಿದ್ಧಗೊಳಿಸಿದರು. ಹೀಗೆ ಬೇರೆ ಬೇರೆ ಕಡೆಯಲ್ಲಿ ಬೇರೆ ಬೇರೆ ಉಪಾಯಗಳನ್ನು ಯೋಚಿಸಿ, ಭಿಕ್ಷುಗಳನ್ನು ಹೊರಡಿಸುತ್ತಿರಲು, ಒಬ್ಬ ಅಧಿಕಾರಿಯು, ಮಹಾಸಭೆಗೆ ಹೋಗದ ಭಿಕ್ಷುಗಳ ಶಿರಚ್ಛೇದ ಮಾಡಲಿಕ್ಕೆ ನನಗೆ ಚಕ್ರವರ್ತಿಯ ಆಜ್ಞೆಯಾಗಿರುತ್ತದೆಂದು ಸುಳ್ಳೇ ಭಿಕ್ಷು

ಗಳನ್ನು ಬೆದರಿಸಿ ಹೊರಡಿಸಹತ್ತಿದನು. ಎರಡು ದಿನಗಳವರೆಗೆ ಆತನ ಕೆಲಸವು ಒತ್ತರದಿಂದ ನಡೆಯಿತು. ಭಿಕ್ಷುಗಳ ಸಮೂಹವು ಪಾಟಲಿಪುತ್ರದಲ್ಲಿ ನೆರೆಯಹತ್ತಿತು. ತನ್ನ ಯುಕ್ತಿಯು ಬಹುಯೋಗ್ಯವಾದದ್ದೆಂದು ತಿಳಿದು, ಆ ಅಧಿಕಾರಿಯು ಭಿಕ್ಷುಗಳನ್ನು ಬಹಳವಾಗಿ ಬೆದರಿಸಹತ್ತಿದನು. ಸಂಪುಷ್ಟಾಚಾರ್ಯರೂ, ಅವರ ಶಿಷ್ಯರೂ ರಾಧಾಗುಪ್ತಮಂತ್ರಿಯ ಪ್ರಕರಣದಲ್ಲಿ ಚಕ್ರವರ್ತಿಯಿಂದ ಅವಮಾನಿತರಾಗಿ ಮೊನ್ನೆಮೊನ್ನೆ ಸೆರೆಯಿಂದ ಬಿಡುಗಡೆ ಹೊಂದಿದ್ದರಷ್ಟೇ? ಆ ಅಹಂಕಾರದ ದುಷ್ಟ ಭಿಕ್ಷುಗಳಿಗೆ ಮಹಾಸಭೆಯು ಮೊದಲೇ ಬೇಡಾಗಿತ್ತು. ಅದರಲ್ಲಿ ಅಧಿಕಾರಿಯು ಮೇಲೆ ಹೇಳಿದಂತೆ "ನೀವು ಸಭೆಗೆ ಹೋಗದಿದ್ದರೆ ನಿಮ್ಮ ಶಿರಚ್ಛೇದ ಮಾಡುವೆನು" ಎಂದು ಬೆದರಿಕೆ ಹಾಕಿದನು. ಅಂದಬಳಿಕ ಕೇಳುವದೇನು? ರಾಜಗುರುವೆನಿಸುವ ಸಂಪುಷ್ಟಾಚಾರ್ಯನಿಗೆ, ಅಧಿಕಾರಿಯ ಈ ಉದ್ಧಟತನಕ್ಕಾಗಿ ಬಹಳ ಸಿಟ್ಟು ಬಂದಿತು. ಆತನ ಶಿಷ್ಯರೂ, ಅಧಿಕಾರಿಯೂ ವಾದಿಸಾಡಹತ್ತಿದರು. ಕಡೆಗೆ ಮಾತಿಗೆ ಮಾತು ಬೆಳೆದು, ಸಂಪುಷ್ಟಾಚಾರ್ಯನ ಪಟ್ಟಶಿಷ್ಯನು ಅಧಿಕಾರಿಗೆ ಬಾಯಿಗೆ ಬಂದಂತೆ ಮಾತಾಡಲು, ಅಧಿಕಾರಿಯು ಸಂತಾಪಗೊಂಡು, ಮೈಮೇಲೆ ಎಚ್ಚರವಿಲ್ಲದೆ ಆ ಭಿಕ್ಷುವಿನ ಶಿರಚ್ಛೇದಮಾಡಿದನು. ಇದನ್ನೆಲ್ಲ ನೋಡುತ್ತಿದ್ದ ಸಂಪುಷ್ಟಾಚಾರ್ಯನ ಬಾಯಿಯು ಮತ್ತಿಷ್ಟು ಎದ್ದಿತು. ಆತನಿಗೆ ತನ್ನ ಶಿಷ್ಯನು ಸತ್ತದ್ದಕ್ಕಾಗಿ ವ್ಯಸನವಾಗಲಿಲ್ಲ, ಚಕ್ರವರ್ತಿಯಮೇಲೆ ಭಿಕ್ಷುಹತ್ಯೆಯ ದೋಷವನ್ನು ಹೊರಿಸಿ, ಅದರ ಸಹಾಯದಿಂದ ಮಹಾಸಭೆಯನ್ನೂ, ಪ್ರಸಂಗ ಒದಗಿದರೆ ಚಕ್ರವರ್ತಿಯನ್ನೂ ನಾಶಗೊಳಿಸಲಿಕ್ಕೆ ಅನುಕೂಲವಾಗುವದೆಂದು ಆತನು ಸಮಾಧಾನಪಟ್ಟನು.

ಸಿಟ್ಟಿನಭರದಲ್ಲಿ ಆಗಬಾರದ ಕೆಲಸವು ತನ್ನ ಕೈಯಿಂದಾದದ್ದಕ್ಕಾಗಿ ಅಧಿಕಾರಿಗೆ ಪಶ್ಚಾತ್ತಾಪವಾಯಿತು. ಚಕ್ರವರ್ತಿಯ ಆಜ್ಞೆಯಂತೆ ಒಬ್ಬ ಭಿಕ್ಷುವಿನ ಸಂಹಾರವಾಯಿತೆಂಬ ಸುದ್ದಿಯು ಎಲ್ಲಕಡೆಯಲ್ಲಿ ಹಬ್ಬಿತು. ವೈದಿಕಧರ್ಮದಲ್ಲಿಯ ಬ್ರಹ್ಮಹತ್ಯದಂತೆ, ಬೌದ್ಧರಲ್ಲಿ ಭಿಕ್ಷುಹತ್ಯವು ಮಹಾಪಾತಕವಾಗಿರುವದು. ಆ ಭಿಕ್ಷುವಧೆಯ ಸುದ್ದಿಯು ಹಬ್ಬುತ್ತ ಹಬ್ಬುತ್ತ, ಕಡೆಗೆ ಅದು ಅತಿಶಯೋಕ್ತಿಯನ್ನು ಹೊಂದಿತು. ಚಕ್ರವರ್ತಿಯು ಮಹಾ ಸಭೆಯ ನೆವ

ದಿಂದ ಎಲ್ಲ ಭಿಕ್ಷುಗಳನ್ನು ಕರೆಸಿ, ಅವರ ಸಂಹಾರಮಾಡಿಸುವನೆಂದು ಮಹಾಸಭೆಯ ದ್ವೇಷಿಗಳು ಅನ್ನಹತ್ತಿದರು. ಪಾಟಲಿಪುತ್ರದಲ್ಲಿ ನೆರೆದಿದ್ದ ಭಿಕ್ಷುಗಳ ಸಮೂಹದಲ್ಲಿ ಬಹುಜನರಿಗೆ ಮಹಾಸಭೆಯು ಸೇರುತ್ತಿದ್ದಿಲ್ಲ. ಮಹಾಸಭೆಯ ಕಾರ್ಯಕ್ರಮದೊಳಗಿನ ಮೊದಲನೆಯ ವಿಷಯವಾದ "ಭಿಕ್ಷುಗಳ ಪರೀಕ್ಷೆ" ಎಂಬ ವಿಷಯವಂತು ಅವರಿಗೆ ಸರ್ವಥಾ ಬೇಡಾಗಿತ್ತು. ಧರ್ಮರಹಸ್ಯದ ಗಂಧವನ್ನರಿಯದ ಆ ಹುಂಬ ಭಿಕ್ಷುಗಳು, ಕೋಣನಂತೆ ಹಚ್ಚಗಿದ್ದಲ್ಲಿ ಮೇದು ಬೆಚ್ಚಗಿದ್ದಲ್ಲಿ ಮಲಗಿ ಪುಷ್ಟರಾಗಿ, ಧರ್ಮಗುರುಗಳಾದ ತಮ್ಮ ಪರೀಕ್ಷೆಯನ್ನು ತಕ್ಕೊಳ್ಳುವವರಾರೆಂದು ಹರಟಹತ್ತಿದರು. ಅವರಿಗೆ ಮಹಾಸಭೆಯ ವಿರುದ್ಧವಾಗಿ ಗದ್ದಲವನ್ನೆಬ್ಬಿಸಲಿಕ್ಕೆ ಆ ಭಿಕ್ಷುವಿನ ಮರಣವು ಅನುಕೂಲವಾಯಿತು. ಸಂಪುಷ್ಟಾಚಾರ್ಯನು ಈ ಸಂಧಿಯನ್ನು ಸಾಧಿಸಿ ಮಹಾಸಭೆಗೆ ವಿರುದ್ಧವಾಗಿದ್ದ ಭಿಕ್ಷುಗಳನ್ನು ಒಟ್ಟುಗೂಡಿಸಿ, ಮಹಾಸಭೆಯ, ಹಾಗು ಚಕ್ರವರ್ತಿಯ ವಿರುದ್ಧವಾಗಿ ಅವರ ಮನಸ್ಸಿನಲ್ಲಿ ಇಲ್ಲದ್ದೊಂದು ತುಂಬಿ, ಚಕ್ರವರ್ತಿಗೆ ಪ್ರಾಯಶ್ಚಿತ್ತವನ್ನು ಹೇಳುವ ಅಧಿಕಾರವನ್ನು ನೀವೆಲ್ಲರೂ ಕೂಡಿ ನನ್ನ ಕಡೆಗೆ ಕೊಡಿರೆಂದು ಹೇಳಿದನು. ಚಕ್ರವರ್ತಿಯಮೇಲೆ ಬಹುತರ ಯಾವತ್ತು ಭಿಕ್ಷುಗಳ ಪ್ರೇಮವಿದ್ದರೂ, ಮಹಾಸಭೆಯು ಎಲ್ಲರಿಗೂ ಬೇಡಾಗಿತ್ತು. ಸಭೆಕೂಡಿಸುವದಕ್ಕೆ ಉಪಕ್ರಮಿಸಿದಕೂಡಲೆ ಭಿಕ್ಷುವಿನ ಸಂಹಾರವಾದದ್ದರಿಂದ, ಇಂಥಲೌಕಿಕಸಭೆಯನ್ನು ಕೂಡಿಸಲೇ ಬಾರದೆಂತಲೂ, ಇಂಥ ವಿಚಾರಕ್ಕೆ ಇನ್ನು ಹೋಗದಿರುವಂತೆ ಚಕ್ರವರ್ತಿಯನ್ನು ನಿರ್ಬಂಧಿಸುವದೇ ಆತನಿಗೆ ಪ್ರಾಯಶ್ಚಿತ್ತಕೊಟ್ಟಹಾಗೆಂತಲೂ ತಿಳಿದು, ಸಂಪುಷ್ಟಾಚಾರ್ಯನ ಮುಖದಿಂದ ಚಕ್ರವರ್ತಿಗೆ ಇಷ್ಟು ಪ್ರಾಯಶ್ಚಿತ್ತಕೊಡಿಸಬೇಕೆಂದು ಅವರೆಲ್ಲರೂ ಕೂಡಿ ಆತನ ಕಡೆಗೆ ಅಧಿಕಾರವನ್ನು ಕೊಟ್ಟರು. ಇದರಿಂದ ಸಂಪುಷ್ಟಾಚಾರ್ಯನಿಗಾದ ಆನಂದವು ಆತನ ಹೊಟ್ಟೆಯಲ್ಲಿ ಹಿಡಿಸದಾಯಿತು. ಮಹಾಸಭೆಯು ನೆರೆಯುವದರೊಳಗಾಗಿ ಚಕ್ರವರ್ತಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಟ್ಟುಬಿಟ್ಟರೆ, ಆತನ ಸಂಗಡ ಮಹಾಸಭೆಯೂ ನಷ್ಟವಾಗುವದೆಂದು ಯೋಚಿಸಿ, ಸಂಪುಷ್ಟಾಚಾರ್ಯನು ಭಿಕ್ಷುಗಳ ಸಮೂಹವನ್ನು ಕೂಡಿಕೊಂಡು ಚಕ್ರವರ್ತಿಗೆ ಪ್ರಾಯಶ್ಚಿತ್ತ ಕೊಡುವದಕ್ಕಾಗಿ

ಅರಮನೆಗೆ ಹೋದನು.

ಇತ್ತ ಚಕ್ರವರ್ತಿಯು ಭಿಕ್ಷುವಿನ ಮರಣವಾರ್ತೆಯನ್ನು ಕೇಳಿ, ವ್ಯಸನಾಕ್ರಾಂತನಾಗಿದ್ದನು. ಸದುದ್ದೇಶದಿಂದ ಸಭೆಯನ್ನು ನೆರೆಸಲುಪಕ್ರಮಿಸಿದ ತನಗೆ ಇದೊಂದು ಅಪಕೀರ್ತಿಯು ಬಂತೆಂತಲೂ, ಲೋಕಹಿತದಕಾರ್ಯಕ್ಕೆ ಮಹಾವಿಘ್ನವು ಒದಗಿದಹಾಗಾಯಿತೆಂತಲೂ ಆತನು ತಳಮಳಿಸಹತ್ತಿದನು. ಆತನಿಗೆ ಅನ್ನನೀರುಗಳು ಬೇಡಾದವು. ಮಾತುಕಥೆಗಳು ಸೇರದಾದವು. ಕುಳಿತರೆ ಸಮಾಧಾನವಿಲ್ಲ, ನಿಂತರೆ ಸಮಾಧಾನವಿಲ್ಲ, ಮಲಗಿದರೆ ಸಮಾಧಾನವಿಲ್ಲೆಂಬಂತಾದದ್ದರಿಂದ, ಆತನು ಅರಮನೆಯಿಂದ ಹೊರಟು, ಉಪವನದಲ್ಲಿ ಒತ್ತಟ್ಟಿಗೆ ಚಿಂತೆಯಿಂದ ಉಸುರ್ಗಳೆಯುತ್ತ ಕುಳಿತುಕೊಂಡನು. ಅಶೋಕನ ಪ್ರತಾಪವನ್ನೂ, ಅಧಿಕಾರವನ್ನೂ, ಸಾಮರ್ಥ್ಯವನ್ನೂ ಮನಸ್ಸಿನಲ್ಲಿ ತಂದರೆ, ಆತನು ಒಬ್ಬ ಸೊಟ್ಟ ಭಿಕ್ಷುವಿನ ಮರಣಕ್ಕಾಗಿ, ಇಷ್ಟು ವ್ಯಸನಪಡುವದು ಲೌಕಿಕವಾಚಕರಿಗೆ ಆಶ್ಚರ್ಯಕರವಾಗಿ ತೋರಬಹುದು; ಆದರೆ ಧಾರ್ಮಿಕಭಾವನೆಯ ಮಹಿಮೆಯೇ ಅಂಥಾದ್ದು. ಒಂದು ಸೊಟ್ಟ ಆಕಳನ್ನು ಕೊಂದ ಅಪರಾಧಕ್ಕಾಗಿ, ಬಲರಾಮನು ಕುರುಕ್ಷೇತ್ರದ ಮಹಾಯುದ್ಧದಲ್ಲಿ ತನ್ನ ಪಕ್ಷದವನಾದ ದುರ್ಯೋಧನನಿಗೆ ಸಹಾಯಮಾಡುವದನ್ನು ಬಿಟ್ಟು, ಭೂಪ್ರದಕ್ಷಿಣೆಗಾಗಿ ಹೊರಟದ್ದು ಭಾರತದಲ್ಲಿ ಪ್ರಸಿದ್ಧವಾಗಿರುವದು; ಅದರಂತೆ ಒಬ್ಬ ಬ್ರಾಹ್ಮಣಪುತ್ರನ ಅಕಾಲಮರಣಕ್ಕಾಗಿ ಶ್ರೀರಾಮನು ಪೇಚಾಡಿದ್ದು ರಾಮಾಯಣದಲ್ಲಿ ಪ್ರಸಿದ್ಧವಿರುವದು. ಎಂಥ ಪ್ರತಾಪಿಯೇ ಇರಲಿ, ಎಂಥ ಬಲಿಷ್ಠನೇ ಇರಲಿ ಪಾಪಪುಣ್ಯಗಳ, ಹಾಗು ಕೀರ್ತ್ಯಪಕೀರ್ತಿಗಳ ವಿಚಾರಕ್ಕೆ ಬಿದ್ದರೆ, ಪಾಪದ, ಹಾಗು ಅಪಕೀರ್ತಿಯ ಪ್ರಸಂಗದಲ್ಲಿ ಆತನು ಹಣ್ಣಾಗುವದೇಸರಿ. ಅಶೋಕನ ಸ್ಥಿತಿಯಾದರೂ ಹೀಗೆಯೇ ಆಯಿತು. ಆತನು ದುಷ್ಟ ಭಿಕ್ಷುಗಳಿಗೆ ಬೆದರುವಷ್ಟು ಹೇಡಿಯಿದ್ದಿಲ್ಲ; ಆತನ ಪ್ರತಾಪಕ್ಕೆ ಇಡಿಯ ಭರತಖಂಡವು ಗದಗುಟ್ಟಿ ನಡಗುತ್ತಿತ್ತು; ಆದರೆ ಭಿಕ್ಷುವಧೆಯ ದೋಷವು ತನಗೆ ತಟ್ಟಿತೆಂತಲೂ, ಧಾರ್ಮಿಕವ್ಯಕ್ತಿಯ ವಧೆಯ ಅಪಕೀರ್ತಿಗೆ ತಾನು ಗುರಿಯಾದೆನೆಂತಲೂ ಆ ಮಹಾತ್ಮನು ಚಿಂತಿಸಿದನು. ಉಪವನದಲ್ಲಿ ಸಮಾಧಾನವಾಗದ್ದರಿಂದ ಆತನು ವೇಣುವನಕ್ಕೆ

ಹೋಗಿ ಉಪಗುಪ್ತಾಚಾರ್ಯರ ದರ್ಶನವನ್ನು ತಕ್ಕೊಂಡನು. ಅವರು, ನಿನ್ನ ಅಪ್ಪಣೆಗೂ ಭಿಕ್ಷುವಿನ ವಧೆಗೂ ಏನೂಸಂಬಂಧವಿಲ್ಲೆಂದು ಚಕ್ರವರ್ತಿಗೆ ಹೇಳಿದರೂ, ಆತನಿಗೆ ಸಮಾಧಾನವಾಗಲಿಲ್ಲ. ಅಧಿಕಾರಿಯು ಅವಿಚಾರದಿಂದ ಆದ ಭಿಕ್ಷುವಿನ ಸಂಹಾರದ ಪಾಪವು ನಿನಗೆ ತಟ್ಟದೆಂತಲೂ, ಅಜ್ಞಾನಿಗಳ ಅಪಕೀರ್ತಿಗೆ ನೀನು ಮಹತ್ವಕೊಡಲಾಗದೆಂತಲೂ ಉಪಗುಪ್ತಾಚಾರ್ಯರು ಬೇಕಾದಷ್ಟು ತಿಳಿಸಿ ಹೇಳಿದರು; ಆದರೆ ಅಶೋಕನಿಗೆ ಅದರಿಂದ ಸ್ಥಿರವಾದ ಶಾಂತಿಯು ದೊರೆಯಲಿಲ್ಲ. ಆತನು ಗುರುಗಳ ಬೋಧವನ್ನು ಕೇಳುತ್ತ ಕೆಲವು ಹೊತ್ತು ಕುಳಿತುಕೊಂಡು, ಆಮೇಲೆ ಮತ್ತೆ ಅರಮನೆಗೆ ಬಂದನು. ಅಷ್ಟರಲ್ಲಿ ಸಂಪುಷ್ಟಾಚಾರ್ಯನೂ ಭಿಕ್ಷುಗಳಸಮೂಹವನ್ನು ನೆರಿಸಿಕೊಂಡು ಅರಮನೆಯ ಬಾಗಿಲಲ್ಲ ನಿಂತುಕೊಂಡಿದ್ದನು.

ಭಿಕ್ಷುಗಳ ಆವೇಶವನ್ನು ನೋಡಿ ದ್ವಾರರಕ್ಷಕರು ಅವರನ್ನು ಅರಮನೆಯಒಳಗೆ ಬಿಟ್ಟದ್ದಿಲ್ಲ. ತನ್ನನ್ನು ಹೀಗೆ ಪ್ರತಿಬಂಧಿಸಿದ್ದಕ್ಕಾಗಿ ಸಂಪುಷ್ಟಾಚಾರ್ಯನಪಿತ್ತವು ತಲೆಗೇರಿತ್ತು. ಭಿಕ್ಷುಗಳ ಈ ಗದ್ದಲವನ್ನು ಕೇಳಿ ಚಕ್ರವರ್ತಿಯು ಹೊರಗೆಬರಲು, ಸಂಪುಷ್ಟಾಚಾರ್ಯನು ತನ್ನ ಪರಿವಾರದೊಡನೆ "ನಮೋಬುದ್ಧಾಯ, ನಮೋಬುದ್ಧಾಯ" ಎಂಬ ಪವಿತ್ರಶಬ್ದದ ಭೀಷಣ ನಾದಮಾಡಿ, ಚಕ್ರವರ್ತಿಗೆ— "ಭಗವನ್, ನೀನು ಭಿಕ್ಷುವನ್ನು ಕೊಲ್ಲಿಸಿದ್ದಕ್ಕಾಗಿ ಪ್ರಾಯಶ್ಚಿತ್ತವನ್ನು ತಕ್ಕೊಳ್ಳಬೇಕೆಂ" ದು ಆಜ್ಞಾಪಿಸಿದನು. ಭಿಕ್ಷುಗಳ ಸಮೂಹವನ್ನೂ, ಅವರ ತ್ವೇಷವನ್ನೂ ಅವಲೋಕಿಸಿ, ಚಕ್ರವರ್ತಿಯು ಅವರನ್ನು ಕುರಿತು—ಪೂಜ್ಯರೇ, ಭಿಕ್ಷುವಿನ ಶಿರಚ್ಛೇದವಾದದ್ದಕ್ಕಾಗಿ ನನಗೆ ಬಹಳ ದುಃಖವಾಗಿದೆ. ಭಿಕ್ಷುವಧಕ್ಕೆ ನಾನು ಕೊಟ್ಟ ಅಪ್ಪಣೆಯ ಸಂಬಂಧವಿಲ್ಲ; ಆದ್ದರಿಂದ ನಾನು ಪ್ರಾಯಶ್ಚಿತ್ತಕ್ಕೆ ಪಾತ್ರನಲ್ಲ; ನಿಮ್ಮ ಸಮದುಃಖಿಯಿರುತ್ತೇನೆ. ಇದರ ಮೇಲೆಯೂ ಧರ್ಮದ ತತ್ವದಂತೆ ನಾನು ಅಪರಾಧಿಯೆಂದು ನಿರ್ಧರಿಸಲ್ಪಟ್ಟರೆ, ಪ್ರಾಯಶ್ಚಿತ್ತವನ್ನು ತಕೊಳ್ಳಲಿಕ್ಕೆ ನಾನು ಸಿದ್ಧನಿರುವೆನು. ಮೃತಭಿಕ್ಷುವಿನ ಔರ್ಧ್ವದೇಹಿಕ ಕ್ರಿಯೆಗಳು ತೀರಿದಕೂಡಲೆ, ಯಾವತ್ತು ಧರ್ಮಗುರುಗಳ ಸಭೆಯನ್ನು ಕೂಡಿಸಿರಿ; ಬಹುಮತದಿಂದ ಆದ ನಿರ್ಣಯವು ನನಗ ಮಾನ್ಯವಾಗಿರುತ್ತದೆ, ಎಂದು ಹೇಳಿದನು. ಚಕ್ರವರ್ತಿಗೆ

ಪ್ರಾಯಶ್ಚಿತ್ತವನ್ನು ಕೊಡಲಿಕ್ಕೆ ತಡಮಾಡುವದು, ಸಂಪುಷ್ಟಾಚಾರ್ಯನ ಮನಸ್ಸಿಗೆ ಬರಲಿಲ್ಲ. ಮಹಾಸಭೆಯು ನೆರೆಯುವದಕ್ಕಿಂತ ಮೊದಲೇ, ಅಥವಾ ಸಭಾಪತಿಯು ಪಾಟಲಿಪುತ್ರಕ್ಕೆ ಬರುವದಕ್ಕಿಂತ ಮೊದಲೇ ಚಕ್ರವರ್ತಿಗೆ ಪ್ರಾಯಶ್ಚಿತ್ತವನ್ನು ಕೊಟ್ಟು, ಚಕ್ರವರ್ತಿಯನ್ನೂ, ಮಹಾಸಭೆಯನ್ನೂ ಕೂಡಿಯೇ ನಾಶಗೊಳಿಸಬೇಕೆಂದು ಆತನು ಮಾಡಿದನು. ಆ ದುಷ್ಟ ಸಭಾಪತಿಯು, ಚಕ್ರವರ್ತಿಯನ್ನು ಕುರಿತು—ಭಗವನ್, ಭಿಕ್ಷುವಿನ ಔರ್ಧ್ವದೇಹಿಕ ಕ್ರಿಯೆಗಳು ತೀರಲಿಕ್ಕೆ ಇನ್ನು ಮೂರುದಿನಗಳು ಬೇಕು. ನಾಲ್ಕನೆಯದಿವಸ ಯಾವ ನೆವವನ್ನೂ ಹೇಳದೆ, ನೀನು ಪ್ರಾಯಶ್ಚಿತ್ತವನ್ನು ಕೇಳಲಿಕ್ಕೆ ಸಿದ್ಧನಾಗಲಿಕ್ಕೆ ಬೇಕು, ಎಂದು ನುಡಿದು, ಆತನು ದೊಡ್ಡ ಜಯವನ್ನು ಸಂಪಾದಿಸಿದವನಂತೆ ಚಕ್ರವರ್ತಿಯನ್ನು ನೋಡುತ್ತ, ತನ್ನ ಭಿಕ್ಷುಮಂಡಲದೊಡನೆ ಹೊರಟುಹೋದನು.

ಈ ಪ್ರಾಯಶ್ಚಿತ್ತದ ಪ್ರಕರಣದಿಂದ ಚಕ್ರವರ್ತಿಯ ಮನಸ್ಸು ಮತ್ತಿಷ್ಟು ಅಸಮಾಧಾನವಾಯಿತು. ಆತನು ಉಪವನಕ್ಕೆ ಹೋಗಿ, ಆಲೋಚಿಸುತ್ತ ಕುಳಿತುಕೊಂಡನು. ಇಂದಿರೆಯು ಅಣ್ಣನ ಈ ಅಸಮಾಧಾನದ ಸ್ಥಿತಿಯನ್ನು ಕೇಳಿ ವ್ಯಸನಪಟ್ಟು, ಆತನ ಬಳಿಗೆ ಹೋದಳು. ಚಿಂತಾಮಗ್ನನಾದ ಚಕ್ರವರ್ತಿಗೆ ತನ್ನ ತಂಗಿಯು ಬಂದದ್ದು ಗೊತ್ತೇ ಆಗಲಿಲ್ಲ. ಆಗ ಇಂದಿರೆಯು ದುಃಖದಿಂದ ಉಸುರ್ಗರೆದು—ಭಗವನ್, ದುಃಖವನ್ನಾದಗೂ ಎಷ್ಟು ಮಾಡಬೇಕಿದು! ನೀನು ದುಃಖಪಟ್ಟರೆ, ಸತ್ತ ಭಿಕ್ಷುವು ತಿರುಗಿ ಬರುವನೋ? ಭಿಕ್ಷುವಿನ ಶಿರಚ್ಛೇದಕ್ಕೂ ನಿನ್ನ ಅಪ್ಪಣೆಗೂ ಏನೂ ಸಂಬಂಧವಿಲ್ಲೆಂದು ಉಪಗುಪ್ತಾಚಾರ್ಯರು ಹೇಳಿರುತ್ತಾರೆ; ಅಂದ ಬಳಿಕ ಚಿಂತಿಸುವದೇಕೆ? ಎಂದು ನುಡಿಯಲು, ಚಕ್ರವರ್ತಿಯು ಎಚ್ಚತ್ತು ಇಂದಿರೆಯನ್ನು ಕುರಿತು—ತಂಗೀ, ಮನುಷ್ಯಪ್ರಾಣಿಯು ಮರಣಾಧೀನನಾಗಿರುತ್ತಾನೆ; ಒಂದಿಲ್ಲೊಂದು ದಿನ ಆತನ ಅಂತವು ಯಾವದೊಂದು ಕಾರಣದಿಂದ ಆಗೇ ಆಗುವದು; ಅದಕ್ಕಾಗಿ ದುಃಖಿಸುವದು ವ್ಯರ್ಥವೆಂಬದನ್ನು ನಾನು ಬಲ್ಲೆನು; ಆದರೆ ಭಿಕ್ಷುವಿನ ಮರಣವು, ನನ್ನ ಆಜ್ಞೆಯನ್ನು ನಡಿಸುವಾಗ ಒಬ್ಬ ಅಧಿಕಾರಿಯು

ಕೈಯಿಂದಾಗಿರುತ್ತದೆಂಬದು ನನ್ನ ಚಿಂತೆಯ ಮೂಲವಾಗಿರುತ್ತದೆ. ಭಿಕ್ಷುವಿನ ಶಿರಚ್ಛೇದಕ್ಕೂ, ನನ್ನ ಅಪ್ಪಣೆಗೂ ಸಂಬಂಧವಿಲ್ಲದಿದ್ದರೂ, ಎಷ್ಟೋ ತಿಳಿಗೇಡಿ ಭಿಕ್ಷುಗಳು ದ್ವೇಷಮೂಲಕ ನನ್ನ ಅಪ್ಪಣೆಯಿಂದಲೇ ಭಿಕ್ಷುವಿನ ಶಿರಚ್ಛೇದವಾಯಿತೆಂದು ಪ್ರತಿಪಾದಿಸುವದರಿಂದ, ಬಹುಜನ ಸಮಾಜದ ತಿಳುವಳಿಕೆಯೂ ಅವರಂತೆಯೇ ಆಗಿರುತ್ತದೆ. ಹೀಗೆ ಲೋಕವು ತದಂತೆ ತಿರಸ್ಕರಣೀಯವಾದ ಕಾರ್ಯವನ್ನು ಮಾಡಿದ ಅಪವಾದಕ್ಕೆ ಗುರಿಯಾದ ನಾನು, ಹೇಗೆ ಸಮಾಧಾನದಿಂದ ಇರಲಿ!

ಇಂದಿರೆ—ಭಗವನ್, ಕೆಲವರು ದುಷ್ಟರು ಹೊರಿಸಿದ ಅಪವಾದಕ್ಕಾಗಿ ನೀನು ಇಷ್ಟು ಚಿಂತಿಸಬಹುದೆ? ಸುಳ್ಳು ಅಪವಾದ ಹೊರಿಸುವ ದುಷ್ಟರ ಶಾಸನ ಮಾಡುವದು ನಿನ್ನ ಕರ್ತವ್ಯವಾಗಿರುತ್ತದೆ! ದುಷ್ಟಶಾಸನ, ಶಿಷ್ಟಪರಿಪಾಲನ ಮಾಡಲು ಬದ್ಧನಾಗಿರುವ ನೀನು, ಹೀಗೆ ಚಿಂತಾಕ್ರಾಂತನಾಗುವದು ಸರಿಯಲ್ಲ. ಸುಳ್ಳು ಅಪವಾದ ಹೊರಿಸುವ ಭಿಕ್ಷುಗಳು ನಮ್ಮ ಗುರುಗಳೇ ಅಲ್ಲ. ಅಂಥವರ ಅಪ್ಪಣೆಯಂತೆ ನಡೆದರೆ ಧರ್ಮಹಾನಿಯಾಗುವದರಲ್ಲಿ ಸಂಶಯವಿಲ್ಲ. ಸಂಪುಷ್ಟಾಚಾರ್ಯನ ದುಷ್ಟತನದ ಅನುಭವವುಳ್ಳ ನೀನು, ಆತನ ಕೈಯಲ್ಲಿ ನಿನ್ನ ಪ್ರಾಣಗಳನ್ನು ಕೊಡುವದು ಯೋಗ್ಯವಲ್ಲ. ಆ ದುಷ್ಟನು ಪ್ರಾಯಶ್ಚಿತ್ತದ ನೆವದಿಂದ ನಿನ್ನ ಪ್ರಾಣಹರಣ ಮಾಡಲಿಕ್ಕೆ ಸಹ ಹೇಸಲಿಕ್ಕಿಲ್ಲ!

ಅಶೋಕ—ತಂಗೀ, ನಿನ್ನ ಮಾತನ್ನು ನಾನು ಅಲ್ಲಗಳೆಯುವದಿಲ್ಲ. ಸಂಪುಷ್ಟಾಚಾರ್ಯರು ಅಂಥ ಇಂಥ ಬಿಡಿಭಿಕ್ಷುವಲ್ಲ; ನಮ್ಮ ಧರ್ಮಗುರುಗಳಾಗಿದ್ದಾರೆ. ಇಲ್ಲಿಯವರೆಗೆ ಪ್ರಾಯಶ್ಚಿತ್ತದ ಸಂಬಂಧದಿಂದ ಅವರ ಆಜ್ಞೆಯನ್ನು ಪಾಲಿಸುತ್ತಬಂದ ನಾನು, ಸ್ವತಃ ಪ್ರಾಯಶ್ಚಿತ್ತವನ್ನು ತಕ್ಕೊಳ್ಳುವ ಪ್ರಸಂಗದಲ್ಲಿ ಬಹುಮತದಿಂದ ಗೊತ್ತಾದ ಪ್ರಾಯಶ್ಚಿತ್ತವನ್ನು ಸಂಪುಷ್ಟಾಚಾರ್ಯರ ಮುಖದಿಂದ ಕೇಳಲಿಕ್ಕೆ ಒಡಂಬಡದಿದ್ದರೆ, ನನ್ನ ಪ್ರಜೆಗಳು ನನ್ನ ನ್ಯಾಯಬುದ್ಧಿಗೆ ಹೆಸರನ್ನಿಡಬಹುದು. ಇಂದಿನಿಂದ ನಾಲ್ಕನೆಯ ದಿನ ಭಿಕ್ಷುಮಂಡಲವು ಬಹುಮತದಿಂದ ನಿರ್ಣಯಿಸಿದ ಪ್ರಾಯಶ್ಚಿತ್ತವನ್ನು ಸ್ವೀಕರಿಸುವೆನೆಂದು ನಾನು ವಚನಕೊಟ್ಟಿದ್ದೇನೆ; ಆದ್ದ

ರಿಂದ ನಾನು ವಚನವನ್ನು ಪಾಲಿಸುವದಕ್ಕಾಗಿ, ಪ್ರಾಯಶ್ಚಿತ್ತವನ್ನು ಕೇಳ ಲಿಕ್ಕೆ ಸಿದ್ಧನಾಗಿರಬೇಕಾಗುವದು. ಪ್ರಜಾರಂಜಕನಾಗುವದಕ್ಕಾಗಿ ಶ್ರೀ ರಾಮನು ಒಬ್ಬ ಅಗಸನ ಸುಳ್ಳು ಅಪವಾದಕ್ಕೆ ಲೋಕಮಾತೆಯಾದ ಜಾನಕಿಯನ್ನು ಅಡವಿಗೆ ಅಟ್ಟಲಿಲ್ಲವೆ?

ಇಂದಿರೆ—ಹಾಗಾದರೆ, ಈ ಸಂಕಟದಿಂದ ಪಾರಾಗಲಿಕ್ಕೆ ಮಾರ್ಗವೇ ಇಲ್ಲವೇನು?

ಅಶೋಕ—ಮಾರ್ಗವಿದೆ. ತಂಗೀ, ತಮ್ಮ ಅಕುಂಠಿತವಾದ ತೇಜ ಸ್ಸಿನಿಂದ ಲೋಕಪೂಜ್ಯತೆಯನ್ನು ಪಡೆದಿದ್ದ ಮೊಗ್ಗಲೀಪುತ್ರ-ತಿಷ್ಯರಂಥ ಮಹಾತ್ಮರು ಭಿಕ್ಷುಗಳ ಸಭೆಗೆ ಬಂದು, ನಾನು ನಿರಪರಾಧಿಯೆಂದು ನಿರ್ಣಯಿಸಿದರೆ, ನಾನು ಅಪವಾದದಿಂದ ಮುಕ್ತನಾಗುವೆನು. ಉಪ ಗುಪ್ತಾಚಾರ್ಯರು ನಾನು ನಿರಪರಾಧಿಯೆಂದು ಹೇಳುತ್ತಿದ್ದರೂ, ಈಗ ಪಾ ಟಲಿಪುತ್ರದಲ್ಲಿ ಕೂಡಿರುವ ಭಿಕ್ಷುಸ್ತೋಮದ ಮುಂದೆ ಅವರ ವರ್ಚಸ್ಸು ಬೀಳದು. ಈ ಪ್ರಸಂಗದಲ್ಲಿ ಮಹಾತ್ಮರಾದ ಮೊಗ್ಗಲೀಪುತ್ರತಿಷ್ಯರ ಹೊರತು ಅನ್ಯರ ಆಟವು ನಡೆಯುವಹಾಗಿಲ್ಲ. ಆ ತಪೋಧನರು "ಮಹಾಸಭೆಗೆ ಬರುವೆನೆಂ"ದು ತಮ್ಮ ಪತ್ರದ ಕಡೆಯಲ್ಲಿ ಬರೆದಿರುವರು; ಆದರೆ ಅವರು ಇರುವ ಸ್ಥಳವು ಯಾರಿಗೆ ಗೊತ್ತಿರುವದು.? ಗೊತ್ತಿದ್ದರೆ ನಾಳಿನ ಸಭೆಗೆ ಅವರನ್ನು ಕರಕೊಂಡು ಬರಬಹುದಾಗಿತ್ತು. ತಂಗೀ, ಇಂದಿರೇ, ಯಾಕೆ ವ್ಯಸನ ಪಡುತ್ತೀ? ಪ್ರೇಮಲ ಮೂರ್ತಿಯಾದ ನೀನು ವ್ಯರ್ಥವಾಗಿ ವ್ಯಸನದಿಂದ ಕ್ಷೀಣ ವಾಗಬೇಡಮ್ಮಾ! ದುಷ್ಟ ಭಿಕ್ಷುಗಳು ನಾಳಿನ ಸಭೆಯಲ್ಲಿ ನನಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಟ್ಟರೂ ಕೊಡಲಿ. ನನ್ನ ಪ್ರಜೆಗಳಲ್ಲಿ ಸದ್ಧರ್ಮದ ಪ್ರಸಾರಮಾಡಿ, ಅವರನ್ನು ನೀತಿವಂತರನ್ನಾಗಿ ಮಾಡುವೆನೆಂದು ಯಾರಾದರೂ ಹೇಳಿದರೆ, ನಾನು ಸಮಾಧಾನದಿಂದ ದೇಹಾಂತ ಪ್ರಾಯ ಶ್ಚಿತ್ತವನ್ನು ಭೋಗಿಸುವೆನು.

ಅಣ್ಣನ ಈ ಹೃದಯದ್ರಾವಕ ಮಾತುಗಳನ್ನೂ, ಆತನ ಸೌಜನ್ಯ ವನ್ನೂ ನೋಡಿ, ಇಂದಿರೆಯು ವ್ಯಸನಪಟ್ಟಳು. ಅಷ್ಟರಲ್ಲಿ ಆಕೆಯ ಮನ ಸ್ಸಿಗೆ ಏನೋ ಹೊಳೆದಂತಾಗಿ, ಆಕೆಯ ಮನಸ್ಸು ಸಮಾಧಾನಪಟ್ಟಿತು. ಆಕೆಯು

ಅಶೋಕನನ್ನು ಕುರಿತು—ಅಣ್ಣಾ, ಮೊಗ್ಗಲೀಪುತ್ರ-ತಿಷ್ಯರವರನ್ನು ಕರೆಸುವ ಚಿಂತೆಯನ್ನು ಬಿಡು. ಅಗೋ ನೋಡು, ಆ ತರುಣ ಭಿಕ್ಷುವು ಇತ್ತ ಕಡೆಗೆ ಬರುತ್ತಾನೆ. ಆತನಿಂದ ಆ ಕಾರ್ಯವು ನಿಶ್ಚಯವಾಗಿ ಸಾಧಿಸುತ್ತದೆ, ಅನ್ನಲು, ಅಶೋಕನಿಗೆ ಆಶಾಂಕುರವು ಉತ್ಪನ್ನವಾಗಿ, ಆತನು ಇಂದಿರೆಯ ಕೈಯನ್ನು ಹಿಡಕೊಂಡು ಭಿಕ್ಷುವಿನ ಎದುರಿಗೆ ಹೊರಟನು. ಆಗ ಭಿಕ್ಷುವು ಅಶೋಕನನ್ನು ವಂದಿಸಲು "ಈತನು ನಮ್ಮ ಯುವರಾಜನಲ್ಲವೆ?" ಎಂಬ ಭ್ರಾಂತಿಯು ಚಕ್ರವರ್ತಿಯ ಮನಸ್ಸಿನಲ್ಲಿ ಉತ್ಪನ್ನವಾಯಿತು. ಆದರೆ ಆ ತರುಣನ ಭಿಕ್ಷುವೇಷವನ್ನೂ, ಆತನು ರಾಧಾಗುಪ್ತಮಂತ್ರಿಯ ಪ್ರಾಣಸಂಕಟ ದೂರ ಮಾಡುವಾಗ ಮಾಡಿದ ಸಾಹಸವನ್ನೂ ಸ್ಮರಿಸಿ, ಚಕ್ರವರ್ತಿಯು ಆ ತರುಣನನ್ನು ಕುರಿತು—ಭಿಕ್ಷುಶ್ರೇಷ್ಠನೇ, ನಿನಗೆ ಮೊಗ್ಗಲೀಪುತ್ರ-ತಿಷ್ಯರವರ ವಾಸಸ್ಥಳವು ಗೊತ್ತಿರುವದೋ? ಎಂದು ಕೇಳಲು, ಭಿಕ್ಷುವು—ಭಗವನ್, ನನಗೆ ಆಚಾರ್ಯರವರ ನಿವಾಸಸ್ಥಾನವು ಗೊತ್ತಿರುವದಿಲ್ಲ; ಆದರೆ ಆ ಮಹಾತ್ಮರು ತಮ್ಮ ದಿವ್ಯಜ್ಞಾನದಿಂದ ನಾನು ಮತ್ತೊಮ್ಮೆ ತಮ್ಮನ್ನು ಕಾಣಬೇಕಾಗುವದೆಂಗು ತಿಳಿದು, ತಮ್ಮನ್ನು ಕಾಣುವ ಸ್ಥಾನವನ್ನು ನನಗೆ ಹೇಳಿರುವರು, ಎಂದು ನುಡಿದನು. ಅವನ್ನು ಕೇಳಿ ಅಶೋಕನಿಗೆ ಬಹಳ ಸಂತೋಷವಾಯಿತು. ಆತನು ಸ್ವಲ್ಪದರಲ್ಲಿ ಪ್ರಾಯಶ್ಚಿತ್ತದ ಸಂಗತಿಯನ್ನು ಆ ತರುಣ ಭಿಕ್ಷುವಿಗೆ ಹೇಳಿ, ಆಚಾರ್ಯರನ್ನು ಕರಕೊಂಡುಬರುವ ಕೆಲಸವನ್ನು ಆತನಿಗೆ ಒಪ್ಪಿಸಿದನು. ತರುಣ ಭಿಕ್ಷುವಾದರೂ ಈ ಕೆಲಸಮಾಡುವದು ನನ್ನನ್ನು ಕೂಡಿತೆಂದು ಚಕ್ರವರ್ತಿಗೆ ಉಲ್ಲಾಸದಿಂದ ಹೇಳಿದನು. "ಬೌದ್ಧಧರ್ಮಕ್ಕೊದಗುವ ಒಂದು ಸಂಕಟವು ನಿನ್ನಿಂದ ದೂರವಾಗಬೇಕಾಗಿದೆ" ಯೆಂದು ಮಹಾತ್ಮರು ತನ್ನಮುಂದೆ ಹೇಳಿದ್ದರ ಸತ್ಯತೆಯು, ಈಗ ಆತರುಣಭಿಕ್ಷುವಿನ ಮನಸ್ಸಿಗೆ ಹೊಳೆಯಿತು. ಆತನು ಚಕ್ರವರ್ತಿಗೆ ವಂದಿಸಿ, ಇಂದಿರೆಯನ್ನು ಪ್ರೇಮಲದೃಷ್ಟಿಯಿಂದ ನೋಡುತ್ತ, ಹೊರಡಲು ಸಿದ್ಧನಾಗಲು, ಅಶೋಕನು ಆತನನ್ನು ಕುರಿತು—ತರುಣನೇ, ಈಗ ನಾನು ಹೇಳಿದ್ದ ಸಂಗತಿಯನ್ನೆಲ್ಲ, ಆಚಾರ್ಯರಿಗೆ ತಿಳಿಸು; ನಾನು ಒಂದು ಪತ್ರವನ್ನು ಕೊಡುತ್ತೇನೆ, ಅದನ್ನು ಆಚಾರ್ಯರಿಗೆ ಮುಟ್ಟಿಸು. ಹೇಗಾದರೂಮಾಡಿ ಸಭೆಯದಿವಸ ಆಚಾರ್ಯ

ರನ್ನು ಇಲ್ಲಿಗೆ ಕರೆದುಕೊಂಡು ಬರುವಂತೆ ಮಾಡು, ಎಂದುಹೇಳಿ, ಅಲ್ಲಿಯೇ ಕುಳಿತು, ಒಂದು ಪತ್ರವನ್ನು ಬರೆದು ಭಿಕ್ಷುವಿನ ಕೈಯಲ್ಲಿಕೊಟ್ಟನು. ಕೂಡಲೆ ಭಿಕ್ಷುವು ಅಶೋಕನನ್ನು ವಂದಿಸಿ, ಇಂದಿರೆಯನ್ನು ಪ್ರೀತಿಪೂರ್ವಕವಾಗಿ ನೋಡುತ್ತ, ಅಲ್ಲಿಂದ ಹೊರಟುಹೋದನು.

ಇತ್ತ ಮೃತಭಿಕ್ಷುವಿನ ಔರ್ಧ್ವದೇಹಿಕ ಕರ್ಮಗಳು ತೀರಿ, ನಾಲ್ಕನೆಯ ದಿವಸ ಭಿಕ್ಷುಗಳ ಸಭೆಯು ನೆರೆಯಿತು. ಭಿಕ್ಷುಗಳ ಅಗ್ರಸ್ಥಾನದಲ್ಲಿ ಸಂಪುಷ್ಟಾಚಾರ್ಯನು ತಾನಾಗಿಹೋಗಿ ಕುಳಿತುಕೊಂಡಿದ್ದನು. ಇನ್ನು ಸಂಪುಷ್ಟಾಚಾರ್ಯನು ಚಕ್ರವರ್ತಿಗೆ ಪ್ರಾಯಶ್ಚಿತ್ತವನ್ನು ಹೇಳಿ, ಮಹಾಸಭೆಯನ್ನು ಹೇಗೆ ಮುರಿಯುವನೆಂಬದನ್ನು ನೋಡುವದಕ್ಕಾಗಿ ಭಿಕ್ಷುಮಂಡಲವು ಸಿದ್ಧವಾಗಿ ಕುಳಿತುಕೊಂಡಿತ್ತು. ಕುಮಾರನಾದ ವೀತಾಶೋಕನು, ಅಣ್ಣನಿಗೊದಗಿದ ಸಂಕಟದಿಂದ ಶೋಕಾಕುಲನಾಗಿ, ಅಣ್ಣನ ಬಳಿಯಲ್ಲಿ ಕುಳಿತುಕೊಂಡಿದ್ದನು. ಸಭೆಯು ಸ್ತಬ್ಧವಾಗಿತ್ತು. ಪುಣ್ಯಶಾಲಿಯೂ, ಧರ್ಮಾತ್ಮನೂ ಆದ ಅಶೋಕನ ಪ್ರಖರವಾದ ಧರ್ಮತೇಜಸ್ಸಿನಿಂದ ಸಂಪುಷ್ಟಾಚಾರ್ಯನ ಕಣ್ಣುಗಳು ಕುಕ್ಕಿ, ಆತನಿಗೆ ಏನೂ ತೋಚದಾಯಿತು. ಬಹಳ ಹೊತ್ತು ಶ್ರಮಪಟ್ಟು, ಸಭೆಯಲ್ಲಿ ಮಾತಾಡಬೇಕೆಂದು ಗಟ್ಟಿಮಾಡಿದ್ದ ಆತನ ಮಾತುಗಳೆಲ್ಲ ಮರೆತುಹೋದವು. "ಇನ್ನೂ ಧರ್ಮಗುರುಗಳು ಬರುವವರಿದ್ದಾರೆ, ಬರಲಿ" ಎಂಬ ನೆವವನ್ನು ಮುಂದೆಮಾಡುತ್ತ, ಆತನು ಹೊತ್ತು ಹಾಕಹತ್ತಿದನು. ಹೀಗೆ ಸಭೆಯು ನೆರೆದು ಬಹಳ ಹೊತ್ತಾದರೂ, ಸಂಪುಷ್ಟಾಚಾರ್ಯನು ಮಾತಾಡದೆ ಸುಮ್ಮನೆ ಕುಳಿತಿರುವದನ್ನು ನೋಡಿ, ಜನರು ಆತುರಪಟ್ಟರು. ಅಷ್ಟರಲ್ಲಿ ಸಂಪುಷ್ಟಾಚಾರ್ಯನು ಚಂಚಲವಾಗಿದ್ದ ತನ್ನ ಮನಸ್ಸನ್ನು ಸ್ಥಿರವಾಗಿ ಮಾಡಿಕೊಂಡು, ವ್ಯಾಸಪೀಠದಲ್ಲಿ ಎದ್ದುನಿಂತು ಮಾತಾಡತೊಡಗಿದನು.—ಸನ್ಮಾನನೀಯವಾದ ಪ್ರಿಯಭಿಕ್ಷುವೃಂದವೇ, ನಾವು ಇಂದು ನಮ್ಮ ಆಶ್ರಮದ ಅತ್ಯಂತ ಕಟುವಾದ ಕರ್ತವ್ಯವನ್ನು ನೆರವೇರಿಸುವದಕ್ಕಾಗಿ ಇಲ್ಲಿ ನೆರೆದಿರುತ್ತೇವೆ. ಈ ಸ್ಥಾನವು ಧಾರ್ಮಿಕವಿಷಯಗಳ ವಿಚಾರಣೆ ಮಾಡುವದಕ್ಕಾಗಿ ಸಿದ್ಧಪಡಿಸಲ್ಪಟ್ಟಿರುವದೆಂದು ಮೊದಮೊದಲಿಗೆ ನನ್ನ ತಿಳುವಳಿಕೆಯಾಗಿತ್ತು; ಆದರೆ ಅದು ಕೇವಲ ಭ್ರಮವಾಯಿತು. ಈ ಸ್ಥಾನವು

ಸತ್ಯಧರ್ಮದ ನಾಶಕ್ಕಾಗಿ ರಚಿಸಲ್ಪಟ್ಟಿರುವದೆಂದು ನಾನು ತಿಳಿಯುವೆನು. ವಿಚಾರಮಾಡಿ ನೋಡಿದರೆ ನಾವು ಪ್ರತ್ಯಕ್ಷ ಧರ್ಮಗುರುಗಳು; ಪರಮಪೂಜ್ಯ ಶ್ರೀಗೌತುಮಬುದ್ಧನ ಪ್ರತಿನಿಧಿಗಳು. ನಮ್ಮ ಬಾಯಿಂದ ಹೊರಟ ಶಬ್ದ ಗಳೇ ಧರ್ಮಸೂತ್ರಗಳು, ನಮ್ಮ ಆಜ್ಞೆಗಳೇ ಧರ್ಮಾಜ್ಞೆಗಳು, ನಾವು ಯೋಗ್ಯ ವೆಂದು ಹೇಳುವ ಆಚರಣೆಗಳೇ ಧರ್ಮಾಚರಣೆಗಳು, ನಾವು ಸ್ವೀಕರಿಸುವ ಮಾರ್ಗವೇ ನಿರ್ವಾಣಪ್ರಾಪ್ತಿಯ ಮಾರ್ಗವು. ಹೀಗಿದ್ದು, ನಮ್ಮನ್ನು ವ್ಯರ್ಥ ಅವಮಾನಗೊಳಿಸುವದಕ್ಕಾಗಿಯೂ, ನಮ್ಮ ಅಧಿಕಾರದಬಗ್ಗೆ ಅಸೂಯಪಟ್ಟು ಸುಮ್ಮನೆ ನಮ್ಮನ್ನು ಛಲಿಸುವದಕ್ಕಾಗಿಯೂ, ಇಷ್ಟರಿಂದಲೇ ತೃಪ್ತವಾಗದೆ ಧರ್ಮಗುರುಗಳಾದ ನಮ್ಮ ಮೇಲೆಯೂ ಪ್ರಜೆಗಳಂತೆ ಅನಿಯಂತ್ರಿತ ಅಧಿ ಕಾರವನ್ನು ಕೂಡಿಸುವದಕ್ಕಾಗಿಯೂ ಚಕ್ರವರ್ತಿಯು ಮಹಾಸಭೆಯನ್ನು ನೆರೆಸುವವನಿರುವನು; ಆದರೆ ತಥಾಗತನ ಕೃಪೆಯಿರುವತನಕ ಚಕ್ರವ ರ್ತಿಯ ಅಪವಿತ್ರವಾದ ಉದ್ದೇಶವೂ, ನಾಸ್ತಿಕತ್ವವೂ ಹೇಗೆ ಜಯಶಾಲಿಯಾ ಗಬೇಕು? ಮಹಾಸಭೆಯ ಅಧಿನಿವೇಶವಾಗುವದರೊಳಗೆ ಚಕ್ರವರ್ತಿಯ ದುರುದ್ದೇಶವು ನಮಗೆ ಗೊತ್ತಾದ್ದರಿಂದ, ನಾವು ಸ್ವಲ್ಪದರಲ್ಲಿ ಉಳಕೊಂಡ ಹಾಗಾಯಿತು; ಚಕ್ರವರ್ತಿಯ ಘಾತಕವಾದಉದ್ದೇಶಕ್ಕೆ ಒಬ್ಬ ಧರ್ಮಗುರುವೇ ಬಲಿಯಾದವನು; ಇಲ್ಲದಿದ್ದರೆ ಮಹಾಸಭೆಯ ಅಧಿನಿವೇಶದ ಡಾಂಭಿಕತನದ ಬುಡದಲ್ಲಿ ಎಲ್ಲ ಭಿಕ್ಷು ಸಮಾಜವು ಸಿಕ್ಕು ಜಿಬ್ಬಿಯಾಗಿ ಹೋಗುತ್ತಿತ್ತು!

ಭಿಕ್ಷುಶ್ರೇಷ್ಠರೇ, ಚಕ್ರವರ್ತಿಯು ಮಾಡಿರುವ ಅಪರಾಧವು ನಿಮಗೆ ಗೊತ್ತೇ ಇರುತ್ತದೆ. ಈ ಅಪರಾಧಕ್ಕಾಗಿ ಪ್ರಾಯಶ್ಚಿತ್ತವನ್ನು ಹೇಳುವಾಗ ನಾನು, ಎಲ್ಲ ಗೂಢಸಂಗತಿಗಳ ಪೂರ್ಣವಿಚಾರಮಾಡಿರುತ್ತೇನೆ. ಮಹಾಸ ಭೆಯು ಸದುದ್ದೇಶದಿಂದ ನೆರೆಸಲ್ಪಟ್ಟಿರುವದಿಲ್ಲ. ಉಪಗುಪ್ತಾಚಾರ್ಯನ ಸಹವಾಸವಾದಂದಿನಿಂದ ಧರ್ಮದಮೇಲಿನ ಚಕ್ರವರ್ತಿಯ ವಿಶ್ವಾಸವೂ, ಧರ್ಮಗುರುಗಳಮೇಲಿನ ಆತನ ಪ್ರೇಮವೂ ನಷ್ಟವಾಗಿ ಹೋಗಿರುತ್ತವೆ. ಮಹಾಸಭೆಯ ನೆವದಿಂದ ನಮ್ಮೆಲ್ಲರನ್ನು ಒಟ್ಟುಗೂಡಿಸಿ ನಮ್ಮನ್ನು ಸಂಹ ರಿಸಿ, ಉಪಗುಪ್ತಾಚಾರ್ಯನ ಕೈಯಲ್ಲಿ ಧರ್ಮಸೂತ್ರಗಳನ್ನು ಕೊಟ್ಟು, ರಾಜಮತದಂತೆ ಧರ್ಮವು ನಡೆಯುವಹಾಗೆ ಮಾಡಬೇಕೆಂದು ಚಕ್ರವರ್ತಿಯು,

ಹಾಗು ಉಪಗುಪ್ತಾಚಾರ್ಯನ ಸಂಕಲ್ಪವಿದ್ದಂತೆ ತೋರುತ್ತದೆ. ಇಲ್ಲದಿದ್ದರೆ, ಈಗ ಮಹಾಸಭೆಯು ಯಾತಕ್ಕೆ ಬೇಕಾಗಿತ್ತು! ನಮ್ಮಲ್ಲಿ ಯಾರಾದರೂ ಸ್ನಾನ-ಜಪ-ತಪ-ವ್ರತೋಪೋಷಣಗಳನ್ನು ಬಿಟ್ಟಿರುವರೋ? ಧರ್ಮಪ ರಾಙ್ಮುಖತೆಯು ಯಾರಲ್ಲಾದರೂ ತೋರುತ್ತಿರುವದೋ? ಹಾಗೇನು ಇಲ್ಲ. ದಿನದಿನಕ್ಕೆ ಧರ್ಮಕಾರ್ಯಗಳ ಅಭಿವೃದ್ಧಿಯಾಗಹತ್ತಿದೆ; ಧರ್ಮಗುರುಗಳು ದಿನದಿನಕ್ಕೆ ಹೆಚ್ಚುತ್ತಲಿದ್ದಾರೆ; ಅನ್ನಸಂತರ್ಪಣವು ಹೆಚ್ಚುತ್ತಲಿದೆ; ದೊಡ್ಡ ದೊಡ್ಡ ವಿಹಾರಗಳು ಊರೂರಿಗೆ ಆಗಹತ್ತಿವೆ. ಇದೆಲ್ಲ ಧರ್ಮಗ್ಲಾನಿಯ ಲಕ್ಷಣವೇನು? ಹೀಗಿದ್ದು ಮಹಾಸಭೆಯನ್ನು ನೆರಿಸಿ ಧರ್ಮಗುರುಗಳನ್ನು ಪರೀಕ್ಷಿಸುವದರ ಗೂಢವೇನಿರಬಹುದೆಂಬದನ್ನು ನೀವು ವಿಚಾರಿಸಿರಿ; ಅಂದರೆ ಚಕ್ರವರ್ತಿಗೆ ಯಾವ ಪ್ರಾಯಶ್ಚಿತ್ತ ಕೊಡಬೇಕೆಂಬದು ನಿಮ್ಮ ಲಕ್ಷದಲ್ಲಿ ಬರಬಹುದು.

ಸಂಪುಷ್ಟಾಚಾರ್ಯನ ಈ ಮಾತುಗಳನ್ನು ಕೇಳಿ, ಉಪಗುಪ್ತಾಚಾರ್ಯರಿಗೆ ವಿಷಾದವಾಗಿತ್ತು; ಆದರೆ ಪುಣ್ಯಪ್ರತಾಪಿಯಾದ ಚಕ್ರವರ್ತಿಯ ಧರ್ಮತೇಜಸ್ಸಿನ ಮೇಲೆ, ಸಂಪುಷ್ಟಾಚಾರ್ಯರಂಥ ಅಧಮಭಿಕ್ಷುಗಳ ಕಾಟವು ನಡೆಯದೆಂಬ ನಿಶ್ಚಯವಿದ್ದದ್ದರಿಂದ, ಅವರು ಅನುಕೂಲಕಾಲವನ್ನು ನಿರೀಕ್ಷಿಸುತ್ತ ಸಮಾಧಾನದಿಂದ ತಮ್ಮ ಸ್ಥಳದಲ್ಲಿ ಕುಳಿತುಕೊಂಡಿದ್ದರು. ಅಣ್ಣನಾದ ಚಕ್ರವರ್ತಿಯಮೇಲೆ ಪೂರ್ಣಭಕ್ತಿಯುಳ್ಳ ವೀತಾಶೋಕನು, ದುಷ್ಟ ಸಂಪುಷ್ಟಾಚಾರ್ಯರಿಗೆ ಪ್ರಾಯಶ್ಚಿತ್ತ ಹೇಳುವ ಅಧಿಕಾರ ಕೊಡುವದು ಹಿತವಲ್ಲೆಂದು ಚಕ್ರವರ್ತಿಗೆ ಹೇಳಿದನು; ಆದರೆ ಏಕಮತದಿಂದ, ಇಲ್ಲವೆ ಬಹುಮತದಿಂದ ಸಭೆಯಲ್ಲಿ ನಿರ್ಣಯವಾದದ್ದನ್ನು ನಡಿಸುವೆನೆಂದು ವಚನಕೊಟ್ಟಿರುವೆನಾದುದರಿಂದ, ಸಂಪುಷ್ಟಾಚಾರ್ಯರಿಗೆ ಮಹತ್ವಕೊಡುವ ಕಾರಣವಿಲ್ಲೆಂದು ಚಕ್ರವರ್ತಿಯು ಸ್ಪಷ್ಟವಾಗಿ ಹೇಳಿದನು. ಹೀಗಾಗಿ ಸಭೆಯಲ್ಲಿ ಮಾತಾಡುವ ಧೈರ್ಯವು ಯಾರಿಗೂ ಆಗದೆ, ಅಶೋಕನ ಹಿತಚಿಂತಕರಾದವರೆಲ್ಲರು, ಭಿಕ್ಷುಗಳು ಏನು ಅನರ್ಥಮಾಡುವರೋ, ಎಂದು ಚಿಂತಿಸುತ್ತ ಸುಮ್ಮನೆ ಕುಳಿತುಕೊಂಡರು. ಸಂಪುಷ್ಟಾಚಾರ್ಯನು ಇನ್ನು ಆದಷ್ಟು ಬೇಗನೆ ಚಕವ್ರರ್ತಿಗೆ ಪ್ರಾಯಶ್ಚಿತ್ತವನ್ನು ಹೇಳಿಬಿಡಬೇಕೆಂದು ಆತುರಪಡು

ತ್ತಿದ್ದನು. ಉಳಿದ ಭಿಕ್ಷುಗಳು, ಸಂಪುಷ್ಟಾಚಾರ್ಯನ ಮುಖವನ್ನು ನೋಡುತ್ತ ಸುಮ್ಮನೆ ಕುಳಿತುಕೊಂಡಿದ್ದರು. ಸ್ವತಃ ಚಕ್ರವರ್ತಿಯು ತನ್ನ ನಿರ್ಮಲ ಮನಸ್ಸನ್ನೂ, ಸದುದ್ದೇಶವನ್ನೂ ನಂಬಿ, ಆತ್ಮವಿಶ್ವಾಸದಿಂದ ಯಾತರ ಲಕ್ಷವೂ ಇಲ್ಲದೆ ಗಾಂಭೀರ್ಯದಿಂದ ಕುಳಿತುಕೊಂಡಿದ್ದನು. ಆತನ ದಿವ್ಯವಾದ ಧಾರ್ಮಿಕ ತೇಜಸ್ಸನ್ನು ನೋಡಿ ಭಿಕ್ಷುಮಂಡಲವು ಪೂಜ್ಯಬುದ್ಧಿ ಯುಳ್ಳದ್ದಾಗಿ, ಸಂಪುಷ್ಟಾಚಾರ್ಯನು ಎಲ್ಲಿ ಅಯೋಗ್ಯ ಪ್ರಾಯಶ್ಚಿತ್ತವನ್ನು ಕೊಟ್ಟು ಭಿಕ್ಷುಮಂಡಲವನ್ನು ದೋಷಕ್ಕೆ ಪಾತ್ರವಾಗಮಾಡುವನೋ, ಎಂದು ಅಸಮಾಧಾನಪಡುತ್ತಲಿತ್ತು. ಹೀಗೆ ಎಲ್ಲರೂ ಕುಳಿತಿರುವಾಗ, ಸಂಪುಷ್ಟಾ ಚಾರ್ಯನು ಮಹಾ ಧೈರ್ಯದಿಂದಲೂ, ನೀಚತನದಿಂದಲೂ ಚಕ್ರವರ್ತಿ ಯನ್ನು ಕುರಿತು—ಎಲೈ ಮೌರ್ಯಕುಲೋತ್ಪನ್ನ ಸಾರ್ವಭೌಮನೇ, ನಿನ್ನಂಥ ಪಾತಕಿಯು ಇನ್ನು ಮೇಲೆ ಜಗತ್ತಿನಲ್ಲಿರಬಾರದೆಂದು ನಾವು ನಿರ್ಧರಿಸಿರು ತ್ತೇವೆ. ನೀನು ನಿನ್ನ ಪ್ರತ್ಯಕ್ಷ ಗುರುವಿನ ಶಿರಚ್ಛೇದ ಮಾಡಿದೆ. ಧರ್ಮ ಪಾಲಕ—ಸಾರ್ವಭೌಮನೆನಿಸುವ ನಿನ್ನಂಥವನಿಗೆ, ಈ ಮಹಾಪರಾಧವು ಅಕ್ಷ ಮ್ಯವಾಗಿದೆ; ಆದ್ದರಿಂದ ಭಿಕ್ಷುವಿನ ಶಿರಚ್ಛೇದ ಮಾಡಿದ ಖಡ್ಗದಿಂದಲೇ ನಿನ್ನ ಶಿರಚ್ಛೇದವನ್ನು ಮಾಡಬೇಕೆಂದು ನಿನಗೆ ಪ್ರಾಯಶ್ಚಿತ್ತವನ್ನು ವಿಧಿಸುತ್ತೇವೆ. ನೀನು ಅಧಿಕಾರ ಸಂಪನ್ನನಿರುವದರಿಂದ, ಅಧಿಕಾರದ ದುರುಪಯೋಗಮಾಡಿ ನಮ್ಮ ಪ್ರಾಯಶ್ಚಿತ್ತವನ್ನು ಧಿಕ್ಕರಿಸಿದರೆ, ಬುದ್ಧನ ಯಾವತ್ತು ನಿಸ್ಸೀಮ ಭಕ್ತರು, ಸಂಘಶಕ್ತಿಯಿಂದ ಅದನ್ನು ನಡಿಸದೆ ಬಿಡಲಿಕ್ಕಿಲ್ಲ.

ಈ ಮೇರೆಗೆ ನುಡಿದ ಸಂಪುಷ್ಟಾಚಾರ್ಯನ ಪ್ರಾಯಶ್ಚಿತ್ತನಿರೂಪಣದ ಪ್ರತಿಧ್ವನಿಯು ಉತ್ಪನ್ನವಾಗುವದರೊಳಗೆ, ದೇದೀಪ್ಯಮಾನವಾದದ್ದೊಂದು ಮೂರ್ತಿಯು ಸಭಾಮಂಟಪವನ್ನು ಪ್ರವೇಶಿಸಿತು. ಆಗ ಸಭೆಯಲ್ಲಿ ನೆರೆ ದಿದ್ದ ಜನಸಮುದಾಯವು ಒಂದೇ ಧ್ವನಿಯಿಂದ "ಆಚಾರ್ಯ ಮೊಗ್ಗಲೀ ಪುತ್ರ—ತಿಷ್ಯರ ಜಯಜಯಕಾರವು" ಎಂದು ಉಚ್ಚರಿಸಿತು. ಕ್ಷಣದಲ್ಲಿ ಮೊಗ್ಗ ಲೀಪುತ್ರ—ತಿಷ್ಯರವರು ವ್ಯಾಸಪೀಠದಮೇಲೆ ಬಂದು ಕುಳಿತು, ಭಕ್ತಿಯಿಂದ ತಮ್ಮ ಚರಣಗಳ ಮೇಲೆ ಮಸ್ತಕವನ್ನಿಟ್ಟಿದ್ದ, ಚಕ್ರವರ್ತಿಯ ಮಸ್ತಕದಮೇಲೆ ತಮ್ಮ ವರದಹಸ್ತವನ್ನಿಟ್ಟು—"ಭಗವನ್, ಆಯುಷ್ಮಂತನಾಗು! ಸದ್ಧರ್ಮ

ವನ್ನು ಅಭಿವೃದ್ಧಿಗೊಳಿಸಿ ನಿರ್ವಾಣಪದವಿಗೆ ಅಧಿಕಾರಿಯಾಗು ” ಎಂದು ಗಂಭೀರಧ್ವನಿಯಿಂದ ಆಶೀರ್ವದಿಸಿದರು. ಸಂಪುಷ್ಟಾಚಾರ್ಯರ ಪ್ರಾಯಶ್ಚಿತ್ತಕಥನದಲ್ಲಿಯೂ, ಮೊಗ್ಗಲೀಪುತ್ರ-ತಿಷ್ಯರವರ ಆಶೀರ್ವಾದದಲ್ಲಿಯೂ ಇರುವ ಭಿನ್ನತ್ವವನ್ನು ನೋಡಿ ಎಲ್ಲರಿಗೆ ಆಶ್ಚರ್ಯವಾಯಿತು. ಒಬ್ಬರು ಪ್ರಾಯಶ್ಚಿತ್ತಕಥನದಿಂದ ಚಕ್ರವರ್ತಿಯನ್ನು ಕ್ಷೀಣಾಯುಷಿಯಾಗಮಾಡುತ್ತಿರಲು, ಮತ್ತೊಬ್ಬರು ಅದೇ ಚಕ್ರವರ್ತಿಯನ್ನು ಆಶೀರ್ವಚನದಿಂದ ದೀರ್ಘಾಯುಷಿಯಾಗಮಾಡುವದು ಎಲ್ಲರಿಗೂ ವಿಚಿತ್ರವಾಗಿ ತೋರಿತು. ಮಹಾಸಭೆಯು ಬಹುಜನ ಭಿಕ್ಷುಗಳಿಗೆ ಬೇಡಾಗಿದ್ದರೂ, ಸದ್ಗುಣಮಂಡಿತನಾದ ತಮ್ಮ ಪ್ರಿಯಚಕ್ರವರ್ತಿಯು ಯಾವ ಭಿಕ್ಷುವಿಗೂ ಬೇಡಾಗಿದ್ದಿಲ್ಲ. ಪ್ರತ್ಯಕ್ಷ ಸಂಪುಷ್ಟಾಚಾರ್ಯರ ಶಿಷ್ಯರಿಗೂ ಕೂಡ ತಮ್ಮ ಗುರುಗಳ ಪ್ರಾಯಶ್ಚಿತ್ತ ಕಥನವು ಮನಸ್ಸಿಗೆ ಬರಲಿಲ್ಲ. ಒಟ್ಟಿಗೆ, ಚಕ್ರವರ್ತಿಯ ಶಿರಚ್ಛೇದವು ಯಾವ ಭಿಕ್ಷುವಿನ ಮನಸ್ಸಿಗೂ ಬರಲಿಲ್ಲ. ತಾವು ಬಿಳಿಯ ವಸ್ತ್ರಗಳನ್ನುಟ್ಟು, ಗೃಹಸ್ಥಾಶ್ರಮಿಗಳಾದರೂ ಚಿಂತೆಯಿಲ್ಲ, ಸುಚರಿತ್ರನಾದ ಅಶೋಕನು ಬದುಕಿರಲೆಂತಲೂ, ಮಹಾಸಭೆಯು ನೆರೆಯಲೆಂತಲೂ ಎಷ್ಟೋ ಭಿಕ್ಷುಗಳು ಮನಸ್ಸಿನಲ್ಲಿ ಅನ್ನುತ್ತಿದರು. ಇಷ್ಟರಲ್ಲಿ ಮೊಗ್ಗಲೀಪುತ್ರ-ತಿಷ್ಯರವರು ಮಧುರವಾದ ಗಂಭೀರಧ್ವನಿಯಿಂದ ಸಭೆಯನ್ನುದ್ದೇಶಿಸಿ-ಸಜ್ಜನರೇ, ಇಂದು ನಿಮ್ಮಿಂದ ಭಯಂಕರವಾದ ಪಾತಕವು ಘಟಿಸುತ್ತಿತ್ತು. ನಿಮ್ಮ ಪರಮಪ್ರಿಯಚಕ್ರವರ್ತಿಯು-ಭರತಭೂಮಿಯ ಸೌಭಾಗ್ಯಾಲಂಕಾರವು-ಬೌದ್ಧಧರ್ಮಕ್ಕೆ ಅತ್ಯಂತ ಪವಿತ್ರಸ್ವರೂಪವನ್ನು ಕೊಟ್ಟು, ಅದನ್ನು ಪ್ರತಿಪಾಲಿಸುವವನು-ಭರತಭೂಮಿಯ ಯಾವತ್ತು ಪ್ರಜೆಗಳ ಪಂಚಪ್ರಾಣವು-ಮ್ಲೇಂಛರಾಷ್ಟ್ರದೊಳಗಿನ ಮ್ಲೇಂಛತ್ವವನ್ನು ಸಮೂಲನಾಶಗೊಳಿಸುವ ಪ್ರತಾಪವಾನ್ ಸೂರ್ಯನು, ಇಂದು ವೃಥಾರೋಪದಿಂದ ಕಲಂಕಿತನಾಗುತ್ತಿದ್ದನು. ಸಂಪುಷ್ಟಾಚಾರ್ಯನೇ ಮೊದಲಾದ ದಾಂಭಿಕ ಭಿಕ್ಷುಗಳಿಂದ ಎಂದಾದರೊಂದು ದಿನ ಇಂಥ ಭಯಂಕರ ಪ್ರಸಂಗ ಬರತಕ್ಕದ್ದೇ ಎಂದು ನಾನು ಮೊದಲೇ ತರ್ಕಿಸಿದ್ದೆನು. ಸಂಸಾರದೊಳಗಿನ ವಿಷಯಸುಖದ ವಾಸನೆಯು ಕಡಿಯುವದಕ್ಕಿಂತಲೂ, ವ್ಯಾವಹಾರಿಕ ಮಹತ್ವಾಕಾಂಕ್ಷೆಗಳು ಪೂರ್ಣವಾಗುವದಕ್ಕಿಂ

ತಲೂ ಮೊದಲೇ, ಧರ್ಮಗುರುಗಳಾಗಲಿಕ್ಕೆ ಅವಸರ ಮಾಡುವವರ ಕೈಯಿಂದ ಇಂಥ ಅನರ್ಥಗಳಾಗುವದು ಅಸ್ವಾಭಾವಿಕವಲ್ಲ; ಆದ್ದರಿಂದಲೇ ಮಹಾಸಭೆಯನ್ನು ಕೂಡಿಸಿ, ಯೋಗ್ಯಗುರುಗಳನ್ನು ಆರಿಸುವದಕ್ಕಾಗಿ ನಾನೇ ಚಕ್ರವರ್ತಿಯನ್ನು ಕುರಿತು ಸೂಚಿಸಿದ್ದೆನು. ನನ್ನ ಸೂಚನೆಯಂತೆ ಮಹಾಸಭೆಯ ಪ್ರಾಣಪ್ರತಿಷ್ಠಾಪನವಾಗಿರುತ್ತದೆ. ಆ ಸಭೆಯಿಂದ ಹಿತಕರ ಪರಿಣಾಮಗಳಾಗುವದನ್ನು ಸ್ಮರಿಸದೆ, ನೀವು ಸ್ವಾರ್ಥಾಭಿಲಾಷೆಯಿಂದ ಮಹಾಸಭೆಗೆ ದೋಷಕೊಡುತ್ತಿರುವಿರಿ. ನಿಜವಾದ ಧರ್ಮಗುರುವು ಧಾರ್ಮಿಕ ವಾದ-ವಿವಾದಕ್ಕೆ ಬೇಸರಿಯಬೇಕೇ? ಅನ್ಯರು ತಮ್ಮನ್ನು ಪರೀಕ್ಷಿಸಹತ್ತಿದರೆ ಧರ್ಮಾತ್ಮನು ಸಿಟ್ಟಿಗೆದ್ದು, ಬಾಯಿಗೆ ಬಂದಂತೆ ಬಡಬಡಿಸಬೇಕೇ? ಸಜ್ಜನರೇ, ಇಲ್ಲಿ ಕೂಡಿದ ಭಿಕ್ಷುಗಳಲ್ಲಿ ಅನಧಿಕಾರಿಗಳು ಬಹು ಜನರಿರುವರು. ವಿಷಯವಾಸನೆಯು ಕಡಿಯದ, ಅಥವಾ ಅದನ್ನು ವಿವೇಕದಿಂದ ಕುಗ್ಗಿಸದ, ಮತ್ಸರಭಾವವು ಅಳಿಯದ, ಮಾನಾಪಮಾನಗಳ ಅಭಿಮಾನವನ್ನು ನೀಗದ, ಸಿಟ್ಟನ್ನು ಬಿಡದೆ ಇರುವ, ಕನಕಕಾಮಿನಿಯರ ಮೋಹವಡಗದ ಹಾಳು ಭಿಕ್ಷುಗಳಿಂದ ಜನರ ಧಾರ್ಮಿಕ ಕಲ್ಯಾಣವು ಹೇಗಾಗಬೇಕು? ಯೋಗ್ಯ ಗುರುಗಳಿಲ್ಲದ್ದರಿಂದ ಪ್ರಜೆಗಳು, ಧಾರ್ಮಿಕಕಾರ್ಯಗಳನ್ನು ಮುಂದೆಮಾಡಿ, ಪ್ರಾಣಹಿಂಸೆಯನ್ನು ಮಾಡಹತ್ತಿದರು. ಜಾತಿಮತ್ಸರವು ಹೆಚ್ಚುತ್ತ ಹೋಗಿ, ತಮ್ಮ ತಮ್ಮೊಳಗಿನ ದ್ವೈತಭಾವದಿಂದ ಬಂಧುಪ್ರೇಮವು ನಷ್ಟವಾಯಿತು. ಪ್ರತಿಒಬ್ಬನು ತನ್ನ ಕಲ್ಯಾಣವನ್ನು ಮಾತ್ರ ನೋಡಹತ್ತಿದ್ದರಿಂದ, ಪರಸ್ಪರರ ವಿಷಯವಾಗಿ ಅನುಕಂಪವು ಉತ್ಪನ್ನವಾಗದಂತಾಯಿತು, ತನ್ನ ಪ್ರಜೆಗಳ ವೃದ್ಧಿಂಗತವಾದ ಈ ಅವನತಿಯನ್ನು ನೋಡಿ, ಚಕ್ರವರ್ತಿಯು ಹಿತಬುದ್ಧಿಯಿಂದ ಮಹಾಸಭೆಯನ್ನು ನೆರಿಸತೊಡಗಿದ್ದಾನೆ. ಇದನ್ನೆಲ್ಲ ಮನಸ್ಸಿನಲ್ಲಿ ತಂದು, ಚಕ್ರವರ್ತಿಯ ಪ್ರಾಯಶ್ಚಿತ್ತದ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಪ್ರಕಟಮಾಡತಕ್ಕದ್ದು, ಅನ್ನಲು, “ಚಕ್ರವರ್ತಿಯು ನಿರ್ದೋಷಿಯಾದದ್ದರಿಂದ ಆತನು ಪ್ರಾಯಶ್ಚಿತ್ತಕ್ಕೇ ಅರ್ಹನಲ್ಲವೆಂ”ದು ಸರ್ವಾನುಮತದಿಂದ ಸಿದ್ಧವಾಯಿತು! ಆಗ ಮೊಗ್ಗಲೀಪುತ್ರ-ತಿಷ್ಯರವರು ಸಭಾಕಾರ್ಯ

ವನ್ನು ಮುಗಿಸಿ, ಉಪಗುಪ್ತಾಚಾರ್ಯರೂ, ಚಕ್ರವರ್ತಿಯೂ ತಮ್ಮನ್ನು ಹಿಂಬಾಲಿಸಲು, ವೇಣುವನದ ಕಡೆಗೆ ಸಾಗಿದರು.

---

## ೧೭ನೆಯ ಪ್ರಕರಣ--ಅಶೋಕನ ಶಾಸನಗಳು.

ಈವರೆಗೆ ಚಕ್ರವರ್ತಿಯ ಪ್ರಾಯಶ್ಚಿತ್ತದ ಸಭೆಯು ಮುಗಿದ ಏಳು ದಿವಸಗಳ ಮೇಲೆ, ಮಹಾಸಭೆಯ ಕಾರ್ಯವು ಮೊಗ್ಗಲೀಪುತ್ರ–ತಿಷ್ಯರವರ ಅಧ್ಯಕ್ಷತೆಯಲ್ಲಿ ನಿರ್ವಿಘ್ನದಿಂದ ನೆರವೇರಿತು. ಅಯೋಗ್ಯರು ಗೃಹಸ್ಥಾಶ್ರಮಿಗಳಾದರು. ಯೋಗ್ಯಗುರುಗಳು ಆರಿಸಲ್ಪಟ್ಟರು. ಧರ್ಮಗ್ರಂಥಗಳ ಸಂಶೋಧನವಾಯಿತು. ಪಾಟಲಿಪುತ್ರಕ್ಕೆ ಬಂದಿದ್ದವರೆಲ್ಲರು ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋಗಹತ್ತಿದರು. ಸಂಪುಷ್ಟಾಚಾರ್ಯರಿಂದ ಅಪವಿತ್ರವಾಗಿದ್ದ ಸಭಾಪತಿಯ ಸ್ಥಾನವನ್ನು ಮೊಗ್ಗಲೀಪುತ್ರ–ತಿಷ್ಯರವರು ಪುನಃ ಅಂಗೀಕರಿಸಿ ಪವಿತ್ರವಾಗಮಾಡಿದರು. ಅವರ ಅಧಿಕಾರದಲ್ಲಿ ಧಾರ್ಮಿಕ ಕಾರ್ಯಗಳು ಸುವ್ಯವಸ್ಥಿತವಾಗಿ ನಡೆಯಹತ್ತಿದವು. ಸಂಪುಷ್ಟಾಚಾರ್ಯನೂ, ಆತನ ಶಿಷ್ಯಮಾಲಿಕೆಯೂ ಅಧಿಕಾರವಿಹೀನಗಳಾದುದರಿಂದ ಅಶೋಕನ ಪ್ರಜೆಗಳು ಸಮಾಧಾನದಿಂದ ಸೌಖ್ಯವನ್ನು ಭೋಗಿಸಹತ್ತಿದರು. ದೇಶದೇಶಗಳಿಗೆ ಉಪದೇಶಕರನ್ನು ಕಳಿಸಿ, ಸಾಮ್ರಾಟ್ ಅಶೋಕನು ಜನರ ಅಂತಃಕರಣದಲ್ಲಿ ಸದ್ಧರ್ಮದ ಪ್ರಕಾಶವನ್ನು ಕೆಡವಹತ್ತಿದನು. ಮಹಾಸಭೆಯ ಕಾರ್ಯವು ಉತ್ತಮರೀತಿಯಿಂದ ನೆರವೇರಿದ್ದರಿಂದ, ಸ್ವಲ್ಪದಿನಗಳಲ್ಲಿ ಪ್ರಜೆಗಳು ನೀತಿವಂತರಾಗಿ, ಧರ್ಮಪ್ರವೃತ್ತಿಯು ಅವರ ಹೃದಯದಲ್ಲಿ ಚೆನ್ನಾಗಿ ಆಳಿತು. ಸುಖ–ಶಾಂತಿಗಳು ಅವರಲ್ಲಿ ನೆಲೆಗೊಂಡವು. ಇದನ್ನು ನೋಡಿ ಅಶೋಕನು ಆನಂದಭರಿತನಾದನು. ಒಂದು ದಿನ ವೇಣುವನದಲ್ಲಿ ಮೊಗ್ಗಲೀಪುತ್ರ–ತಿಷ್ಯರು, ಉಪಗುಪ್ತಾಚಾರ್ಯರ ಮುಂದೆ ಸದ್ಧರ್ಮವನ್ನು

ಕುರಿತು ನಿರೂಪಿಸುತ್ತಿರಲು, ಚಕ್ರವರ್ತಿಯು ಅಲ್ಲಿಗೆ ಹೋದನು. ಉಭಯ ಗುರುಗಳ ಧಾರ್ಮಿಕ ಚರ್ಚೆಯಿಂದಲೂ, ಅವರ ಕೃಪಾಪ್ರಸಾದದಿಂದಲೂ ಚಕ್ರವರ್ತಿಯ ಮನಸ್ಸಿನಲ್ಲಿ ಸರ್ವತ್ರಸಮಭಾವದ ಉದಯವಾಯಿತು ಆಗ ಆತನ ಕಣ್ಣುಗಳೊಳಗಿಂದ ಆನಂದಬಾಷ್ಪಗಳು ಉದುರುತ್ತಿರಲು, ಆತನು ಉಭಯ ಗುರುಗಳನ್ನು ವಂದಿಸಿ-ಮಹಾತ್ಮರೇ, ಧರ್ಮಗಳ ನಿಜವಾದ ರಹಸ್ಯವು ತಿಳಿಯದ್ದರಿಂದ, ಬೇರೆ ಬೇರೆ ಧರ್ಮದವರು ತಮ್ಮ ತಮ್ಮ ಧರ್ಮಗಳೇ ಶ್ರೇಷ್ಠವೆಂಬ ದುರಭಿಮಾನದಿಂದ ಬಡಿದಾಡಿ, ಧರ್ಮದ ಅಂತಿಮಫಲವಾದ ಶಾಂತಿಸೌಖ್ಯಕ್ಕೆ ಎರವಾಗುವರು! ಸ್ವತಃ ನಾನೇ ಬೌದ್ಧಧರ್ಮವನ್ನು ಹಬ್ಬಿಸುವ ನೆವದಿಂದ ನೆಲೆಯಿಲ್ಲದೆ ಮನುಷ್ಯಸಂಹಾರವನ್ನು ಮಾಡಿದೆನು. ನಾನು ಬೌದ್ಧನಾಗುವ ಮೊದಲು, ವೈದಿಕಧರ್ಮವೇ ಶ್ರೇಷ್ಠವಾದದ್ದೆಂಬ ದುರಭಿಮಾನದಿಂದ ಬೌದ್ಧರನ್ನು ಮಿತಿಮೀರಿ ಪೀಡಿಸಿದೆನು. ಹೀಗೆ ಧಾರ್ಮಿಕವೃತ್ತಿಯ ಅಭಿವೃದ್ಧಿಯಿಂದ ಹೃದಯಕ್ಕೆ ಶಾಂತಿಯು ದೊರೆಯುವದೊತ್ತಟ್ಟಿಗುಳಿದು, ಧರ್ಮದ ದುರಭಿಮಾನದಿಂದುಂಟಾದ ಮಾತ್ಸರ್ಯಾದಿ ದುರ್ಗುಣಗಳತಾಪದಿಂದ ಮನುಷ್ಯಮಾತ್ರರ ಹೃದಯಗಳು ದಗ್ಧವಾಗಹತ್ತುತ್ತವೆ! ಪೂಜ್ಯರೇ, ಈ ಅನರ್ಥವು ತಪ್ಪಬೇಕಾದರೆ ಯಾವ ಉಪಾಯುಗಳನ್ನು ಮಾಡಬೇಕು? ಧರ್ಮಯುದ್ಧಗಳು ಕಟ್ಟಾಗಿ ಭರತಖಂಡದಲ್ಲಿಯೂ, ಬೇರೆ ಮ್ಲೇಂಛದೇಶಗಳಲ್ಲಿಯೂ ಜನರು ಶಾಂತಿಸೌಖ್ಯವನ್ನು ಯಾವ ಉಪಾಯದಿಂದ ಪಡೆಯಬಹುದು? ಧರ್ಮದ ಬಹಿರಂಗಕ್ಕಿಂತ ಅಂತರಂಗದ ಕಡೆಗೆ, ಜನರ ಮನಸ್ಸು ಯಾವ ಉಪಾಯದಿಂದ ತಿರುಗಬಹುದು? ಬೌದ್ಧಭಿಕ್ಷುಗಳನ್ನು ನೋಡಿ ಬ್ರಾಹ್ಮಣಯತಿಗಳೂ, ಬ್ರಾಹ್ಮಣಯತಿಗಳನ್ನು ನೋಡಿ, ಬೌದ್ಧಭಿಕ್ಷುಗಳೂ ಮತ್ಸರಿಸುವದು ಯಾತರಿಂದ ಕಟ್ಟಾಗಬಹುದು? ಎಂಬದನ್ನು ದಯಮಾಡಿ ಹೇಳಿದರೆ, ಕೃತಾರ್ಥನಾಗುವೆನು, ಎಂದು ಪ್ರಶ್ನಮಾಡಿ, ಗುರುಗಳನ್ನು ಭಕ್ತಿಯಿಂದ ವಂದಿಸಿ, ಕೈಜೋಡಿಸಿಕೊಂಡು ಅತ್ಯಂತ ಲೀನವೃತ್ತಿಯಿಂದ ಕುಳಿತುಕೊಂಡನು.

ಅಶೋಕನ ಈ ಮಾತುಗಳನ್ನು ಕೇಳಿ, ಮೊಗ್ಗಲೀಪುತ್ರ-ತಿಷ್ಯರವರು ಕೆಲಹೊತ್ತು ಮೌನದಿಂದ ಆಲೋಚಿಸಿ, ಮಂದಹಾಸದಿಂದ ಚಕ್ರವರ್ತಿಯನ್ನು

ಕುರಿತು—ಭಗವನ್, ನಿನ್ನ ಪ್ರಜಾಹಿತದಕ್ಷತೆಯನ್ನೂ, ಶಾಂತತಾಭಿವೃದ್ಧಿಯ ಆತುರತೆಯನ್ನೂ ನೋಡಿ, ನನಗೆ ಬಹಳ ಸಂತೋಷವಾಗುತ್ತದೆ! ನಿನ್ನ ಉದಾತ್ತ ಹೇತುವು ಸಿದ್ಧಿಸಲಿಕ್ಕೆ ಮುಖ್ಯವಾದ ಒಂದೇ ಉಪಾಯವಿರುವದು. ಮನುಷ್ಯಮಾತ್ರರ ಲಕ್ಷ್ಯವನ್ನು ಧರ್ಮಗಳ ಬಾಹ್ಯಚಿಹ್ನಗಳ ಅನೇಕತ್ವದ ಅವಲೋಕನದಿಂದ ಹೊರಳಿಸಿ, ಯಾವತ್ತು ಧರ್ಮಗಳ ರಹಸ್ಯದ ಏಕತ್ವದಕಡೆಗೆ ಎಳೆದೊಯ್ಯಬೇಕು. ಕಣ್ಣಿಗೆಕಾಣುವ ಧರ್ಮಗಳ ಬಾಹ್ಯಚಿಹ್ನಗಳಕಡೆಗೆ ಮನುಷ್ಯನ ಮನಸ್ಸು ಸ್ವಾಭಾವಿಕವಾಗಿ ಹರಿದಷ್ಟು, ಧರ್ಮಗಳ ಗುಪ್ತವಾದ ರಹಸ್ಯದಕಡೆಗೆ ಹರಿಯುವದಿಲ್ಲ. ಈ ದೋಷವು ದೂರವಾಗಬೇಕಾದರೆ, ಯಾವತ್ತುಧರ್ಮಗಳಿಗೆ ಮಾನ್ಯವಾದ ಕೆಲವು ಧರ್ಮಾಜ್ಞೆಗಳನ್ನು ನಿನ್ನ ಶಾಸನಗಳ ರೂಪದಿಂದ ಶಿಲಾಸ್ತಂಭಗಳ ಮೇಲೆಯೂ, ಬಂಡೆಗಳ ಮೇಲೆಯೂ ಕೊರಿಸಿ, ಜನರ ಕಣ್ಣಿಗೆ ಬೀಳುವಂಥ ಸ್ಥಳದಲ್ಲಿ ಅವನ್ನು ನಿಲ್ಲಿಸಬೇಕು. ಆ ನಿಯಮಗಳಂತೆ ಪ್ರಜೆಗಳು ನಡೆಯುವರೋ, ಇಲ್ಲವೋ, ಎಂಬದನ್ನು ನೋಡುವದಕ್ಕಾಗಿ ಅಧಿಕಾರಿಗಳನ್ನು ನಿಯಮಿಸಬೇಕು. ಸದಯಾಂತಃಕರಣದ ಚಕ್ರವರ್ತಿಯೇ, ಈ ಮಹಾ ಕಾರ್ಯವನ್ನು ಮಾಡಲಿಕ್ಕೆ ನೀನು ಯೋಗ್ಯನಾದದ್ದರಿಂದಲೇ, ಚಕ್ರವರ್ತಿಯ ಪದವಿಯು ನಿನಗೆ ಪ್ರಾಪ್ತವಾಗಿರುತ್ತದೆ. ಎಲ್ಲ ಧರ್ಮಗಳಿಗೂ ಸಾಧಾರಣವಾದ ನಿಯಮಗಳನ್ನು ಒಟ್ಟುಗೂಡಿಸಲಿಕ್ಕೆ ಶಾಂತಸ್ಥಾನದ, ಹಾಗು ಸಜ್ಜನರ ಸಮಾಗಮದ ಆವಶ್ಯಕತೆಯಿರುತ್ತದೆ. ರಾಜಧಾನಿಯಿಂದ ಎರಡು ಹರದಾರಿಗಳ ಮೇಲಿರುವ ಚೈತ್ಯಾಲಯಗಳಿಗೆ ನಾಳೆ ಹೋಗೋಣ. ನಿನ್ನ ಪುಣ್ಯಪ್ರತಾಪದಿಂದ ಸಜ್ಜನರ ಯೋಗವು ಅಲ್ಲಿ ಆಗುವದು. ಅರಸೊತ್ತಿಗೆಯ ಯಾವ ಆಡಂಬರವೂ ಇಲ್ಲದೆ, ಕೇವಲ ಸಾಧುವೃತ್ತಿಯಿಂದ ನೀನು ಈ ಕಾರ್ಯದಲ್ಲಿ ವರ್ತಿಸತಕ್ಕದ್ದು, ಎಂದು ಹೇಳಲು, ಚಕ್ರವರ್ತಿಗೆ ಪರಮಾನಂದವಾಯಿತು. ಆತನು ಮರುದಿವಸ ನಿಯಮಿತಪರಿವಾರದೊಡನೆ ಗುರುಗಳಬಳಿಗೆ ಹೋದನು. ಜನರ ಕಲ್ಯಾಣಕಾರಕಗಳಾದ ಶಾಸನಗಳು ತನ್ನ ಕೈಸೇರುವವರೆಗೆ ಉಪೋಷಣವ್ರತವನ್ನು ಕೈಕೊಳ್ಳಬೇಕೆಂದು, ಭಾವಿಕನಾದ ಚಕ್ರವರ್ತಿಯು ನಿಶ್ಚಯಿಸಿದನು. ಮೊಗ್ಗಲೀಪುತ್ರ-ತಿಷ್ಯರು ಉಪಗುಪ್ತಾಚಾರ್ಯರೊಡನೆ ಚೈತ್ಯಾ

ಲಯಗಳಿಗೆ ಹೋಗುವದಕ್ಕಾಗಿ ಹೊರಡಲು, ಅಶೋಕನು ತನ್ನ ನಿಯಮಿತ ಪರಿವಾರದೊಡನೆ ಅವರನ್ನು ಹಿಂಬಾಲಿಸಿದನು. ಚೈತ್ಯಾಲಯಗಳಿಗೆ ಹೋದ ಬಳಿಕ ಬೇರೆಬೇರೆ ಕಡೆಯಿಂದ ಸತ್ಪುರುಷರು ಅಲ್ಲಿಗೆ ಬರಹತ್ತಿದರು. ಅವರನ್ನು ನೋಡಿ ಅಶೋಕನಿಗಾದ ಆನಂದವು, ಆತನ ಹೊಟ್ಟೆಯಲ್ಲಿ ಹಿಡಿಸದಾಯಿತು. ಅತನ ಕಣ್ಣೊಳಗಿಂದ ಆನಂದಬಾಷ್ಪಗಳು ಉದುರಹತ್ತಿದವು. ಶರೀರದಲ್ಲಿ ರೋಮಾಂಚನಗಳುಂಟಾದವು. ಅತ್ತ ಸಜ್ಜನರಲ್ಲಿ ಶಾಸನಗಳ ಸಂಶೋಧನದ ಕಾರ್ಯವು ಎಡೆಬಿಡದೆ ನಡೆಯಿತು ಮರುದಿನ ಮೊಗ್ಗಲೀಪುತ್ರ–ತಿಷ್ಯರವರು ಚಕ್ರವರ್ತಿಯನ್ನು ಕುರಿತು—ಪುಣ್ಯಪುರುಷನೇ, ನಿನ್ನಲ್ಲಿರುವ ಭೂತದಯೆಯ ಯೋಗದಿಂದ ಮಹಾತ್ಮನಾದ ಶ್ರೀಗೌತಮಬುದ್ಧನು, ಸತ್ಪುರುಷರ ಮುಖದಿಂದ ಕೆಲವು ಶಾಸನಗಳನ್ನು ಹೊರಡಿಸಿರುವನು. ಅವನ್ನು ವೈಭವಶಾಲಿಯಾದ ನೀನು ಸ್ವೀಕರಿಸಿ, ನಿನ್ನ ಶಾಸನಗಳಿಂದು ಪ್ರಜೆಗಳಲ್ಲಿ ಅವನ್ನು ಪ್ರಸಾರಗೊಳಿಸು, ಎಂದು ಹೇಳಿ, ಶಾಸನಗಳನ್ನು ಬರಕೊಳ್ಳುವಂತೆ ಚಕ್ರವರ್ತಿಯನ್ನು ಆಜ್ಞಾಪಿಸಿದರು. ಆಗ ಅಶೋಕನು ಕೈಮುಟ್ಟಿ ಅವುಗಳನ್ನು ಬರಕೊಂಡು, ಅವು ಬೇರೆ ಬೇರೆ ಕಡೆಯಲ್ಲಿ ಶಾಶ್ವತವಾಗಿ ನಿಲ್ಲುವಂತೆ, ಶಿಲಾಸ್ತಂಭಗಳ ಮೇಲೆಯೂ, ಶಿಲೆಗಳಮೇಲೆಯೂ ಅವನ್ನು ಕೊರೆಸಿದನು. ಅಶೋಕನ ಆ ಪ್ರಸಿದ್ಧ ಹದಿನಾಲ್ಕು ಆ ದೇಶಗಳನ್ನು ಸಾರಾಂಶರೂಪದಿಂದ ವಾಚಕರ ಸಲುವಾಗಿ ಇಲ್ಲಿ ಕೊಡುವೆವು. ಅಶೋಕನಿಗೆ "ಪ್ರಿಯದರ್ಶಿ" ಅಂದರೆ "ದೇವರಿಗೆ ಪ್ರಿಯನಾದವನು" ಎಂಬ ಹೆಸರು ಇತ್ತು. ಆ ಆದೇಶಗಳ ವಿವರವು ಹೇಗೆಂದರೆ—

(೧) ಪ್ರಿಯದರ್ಶಿಯು ಪ್ರಾಣಿಗಳ ಹಿಂಸೆಯನ್ನು ಪೂರಾನಿಲ್ಲಿಸಿಬಿಟ್ಟಿರುತ್ತಾನೆ. ಇನ್ನು (ಮಾಂಸಾಹಾರದ) ಮೇಜವಾನೆಗಳು ಆಗಲಾರವು; ಯಾಕಂದರೆ, ಅದರಿಂದ ಬಹು ಪಾಪಘಟನೆಯಾಗುತ್ತದೆಂದು ಪ್ರಿಯದರ್ಶಿ ರಾಜನಿಗೆ ತೋರುತ್ತದೆ. ಪ್ರಿಯದರ್ಶಿರಾಜನ ಪಾಕಶಾಲೆಯಲ್ಲಿ ದಿನಾಲು ಲಕ್ಷಾವಧಿ ಪ್ರಾಣಿಗಳ ಸಂಹಾರವಾಗುತ್ತಿತ್ತು; ಆದರೆ ಇನ್ನು ಸತ್ಕಾರ್ಯದ ಸಲುವಾಗಿಯೂ ಹಿಂಸೆಯನ್ನು ಮಾಡಲಾಗದೆಂದು ಆತನು ನಿರ್ಧರಿಸಿ ಬಿಟ್ಟಿದ್ದಾನೆ.

( ೨ ) ಮನುಷ್ಯರ, ಹಾಗು ಇತರ ಪ್ರಾಣಿಗಳ ಸಂಬಂಧದಿಂದ ಪ್ರಿಯದರ್ಶಿಯು ಬೇರೆ ಬೇರೆ ವ್ಯವಸ್ಥೆ ಮಾಡಿರುವನು. ಮನುಷ್ಯರಿಗೂ, ಪಶುಪಕ್ಷ್ಯಾದಿ ಇತರ ಪ್ರಾಣಿಗಳಿಗೂ ಬೇಕಾಗುವ ಗಿಡಗಳು, ವನಸ್ಪತಿಗಳೇ ಮೊದಲಾದ ಪದಾರ್ಥಗಳು, ಇವು ಇಲ್ಲದ ಸ್ಥಳದಲ್ಲಿ ಅವನ್ನು ಬೇರೆ ಸ್ಥಳದಿಂದ ತರಿಸಿ ಪ್ರಿಯದರ್ಶಿಯು ಹಚ್ಚಿಸಿರುವನು. ಅದರಂತೆ ಭಾವಿಗಳನ್ನು ಅಗಿಸಿರುವನು; [ ಮಾರ್ಗದ ಎಡಬಲಗಳಲ್ಲಿ ] ಗಿಡಗಳನ್ನು ಹಚ್ಚಿಸಿರುವನು.

( ೩ ) ಔದಾರ್ಯ, ಅಹಿಂಸೆ, ಅಪರಿಮಿತತೆ, ಹಾಗು ಪರನಿಂದೆಗಳ ಪರಾಙ್ಮುಖತೆ ಇವು ಸದ್ಗುಣಗಳು. ಈ ಸದ್ಗುಣಗಳನ್ನು ಸ್ವಂತದ ನಡಾವಳಿಯ ಉದಾಹರಣದಿಂದ ಜನರ ಮನಸ್ಸಿನಲ್ಲಿ ಬಿಂಬಿಸಲಾಗುವದು.

( ೪ ) ಈಗ ಎಷ್ಟೋ ಶತಕಗಳಿಂದ ಪ್ರಾಣಿಹತ್ಯೆ, ಸಜೀವಪ್ರಾಣಿಗಳ ಉಪದ್ರವ, ಸಮಾನಸ್ಕಂಧರ ವಿಷಯವಾಗಿ ಅನಾದರ, ಬ್ರಾಹ್ಮಣರ, ಹಾಗು ಶ್ರವಣರ ಮಾನಖಂಡನ ಇವು ನಡೆಯುತ್ತ ಬಂದಿರುತ್ತವೆ. ಇನ್ನುಮುಂದೆ ಇವು ನಡೆಯದೆ ಧರ್ಮವೃದ್ಧಿಯಾಗುವದು. ಪ್ರಿಯದರ್ಶಿರಾಜನ ಈ ಆದೇಶವನ್ನು ಆತನ ಮಕ್ಕಳೂ, ಮೊಮ್ಮಕಳೂ ನಡಿಸತಕದ್ದು. ಪ್ರತಿ ಒಬ್ಬ ದುರಾಚಾರಿಯು ಈ ಆದೇಶದ ಕಡೆಗೆ ಲಕ್ಷ್ಯವನ್ನು ಪೂರಯಿಸಿದರೆ ನೆಟ್ಟಗಾಗಬಹುದು.

( ೫ ) ಒಳ್ಳೆಯ ಸಂಗತಿಗಳ ಉಪಯೋಗವನ್ನು ಕೆಟ್ಟ ಕೆಲಸಗಳ ಕಡೆಗೆ ಮಾಡಿದರೆ, ಆ ಒಳ್ಳೆ ಸಂಗತಿಗಳ ಫಲವು ಕಡೆಗೆ ಕೆಡಕೇ ಆಗುವದು; ಆದ್ದರಿಂದಲೇ ನಾನು ( ಜನರ ) ಹಿತಕ್ಕಾಗಿ ಮನಮುಟ್ಟ ಯತ್ನಿಸುವೆನು; ಅದರಂತೆ ನನ್ನ ಮಕ್ಕಳೂ ಮೊಮ್ಮಕ್ಕಳೂ ಯತ್ನಿಸತಕ್ಕದ್ದು. ಪ್ರತಿಯೊಬ್ಬನಿಗೆ ತನ್ನ ಕರ್ಮದಂತೆ ಫಲದೊರೆಯುವದು. ಈವೊತ್ತಿನವರೆಗೆ ಅಧಿಕಾರಿಗಳು ಅನೀತಿಯ ಆಚರಣೆಗಳನ್ನು ಬಹಳವಾಗಿ ನಡೆಯಗೊಟ್ಟರು; ಆದ್ದರಿಂದ ಪ್ರಿಯದರ್ಶಿಯು ಜನರ ನೀತಿಯನ್ನು ತಿದ್ದುವದಕ್ಕಾಗಿ "ಧರ್ಮಮಹಾಮಾತ್ರಾ" ಎಂಬ ಅಧಿಕಾರಿಗಳನ್ನು ನಿಯಮಿಸಿರುವನು. ಜನರನ್ನು ಧರ್ಮಮಾರ್ಗದಲ್ಲಿ ತೊಡಕ್ಕಿಸುವದು ಆ ಅಧಿಕಾರಿಗಳ ಕರ್ತವ್ಯವಾಗಿರುವದು.

ಅವರು ಯೋನ, ಕಾಂಬೋಜ, ಗಾಂಧಾರ, ನಾರಿಸ್ತಿಕ, ಪೇತೇನಿಕ ಮೊದಲಾದ ದೇಶಗಳೊಳಗಿನ ಜನರ ಧರ್ಮವೃದ್ಧಿಯನ್ನು ಮಾಡುವರು. ಕ್ಷತ್ರಿಯ, ಬ್ರಾಹ್ಮಣ, ಭಿಕ್ಷು ಮೊದಲಾದ ಯಾವತ್ತು ಪ್ರಕಾರದ ಜನರಲ್ಲಿ ಅವರು ಪ್ರವೇಶಿಸಿ ಜನರ ಕಲ್ಯಾಣವನ್ನು ಮಾಡುವರು. ಭಾವಿಕಜನರಿಗೆ ಷಡ್ರಿಪುಗಳ ದಮನಮಾಡುವಮಾರ್ಗವನ್ನು ಅವರು ತೋರಿಸುವರು. ಪಾಪಶೃಂಖಲೆಯಿಂದ ಕಟ್ಟಲ್ಪಟ್ಟಿದ್ದ ಜನರನ್ನು, ಆ ಶೃಂಖಲೆಯಿಂದ ಮುಕ್ತಮಾಡಲಿಕ್ಕೆ ಅವರು ಯತ್ನಿಸುವರು. ಧಾರ್ಮಿಕ ಕೃತ್ಯಗಳಿಗೆ ಅವರು ಉತ್ತೇಜನ ಕೊಡುವರು.

(೬) ಹಿಂದಿನಕಾಲದಲ್ಲಿ ಚಟುವಟಿಕೆಯಿಂದ ಕೆಲಸಮಾಡುವ ಪ್ರಚಾರವೂ, ಗುಪ್ತಚಾರರಿಂದ ಸುದ್ದಿಗಳನ್ನು ಕೇಳಿಕೊಳ್ಳುವ ಪ್ರಚಾರವೂ ಇದ್ದಿಲ್ಲ; ಆದರೆ ಈಗ ಅವನ್ನು ಹೊಸದಾಗಿ ಪ್ರಚಾರದಲ್ಲಿ ತಂದಿರುತ್ತದೆ. ಊಟಕ್ಕೆ ಕುಳಿತಿರಲಿ, ವಿಶ್ರಾಂತಿಯನ್ನು ಹೊಂದುತ್ತಿರಲಿ, ಏಕಾಂತದಲ್ಲಿ ಕುಳಿತಿರಲಿ, ಉಪವನದಲ್ಲಿ ತಿರುಗಾಡುತ್ತಿರಲಿ, ಬೇಕಾದಾಗ ಬೇಕಾದಲ್ಲಿ, ಸುದ್ದಿಗಳನ್ನು ಹೇಳುವವರು ನನ್ನ ಮುಂದೆ ಸುದ್ದಿಯನ್ನು ನಿರ್ಬಾಧವಾಗಿ ಹೇಳಬಹುದು. ಜನರ ಸಂಬಂಧದಿಂದ ಮಾಡತಕ್ಕ ಕೆಲಸಗಳನ್ನು ನಾನು ಕೂಡಲೆ ಮಾಡುವೆನು. ಈ ಸಂಬಂಧದಿಂದ ನನ್ನ ಅಧಿಕಾರಿಗಳ ಮುಂದೆ ನಾನು ಬಾಯಿಂದ ಹೇಳಿದ್ದನ್ನು, ಅವರು ಜನರಲ್ಲಿ ಪ್ರಸಿದ್ಧಗೊಳಿಸಬೇಕು. ಎಲ್ಲಿಯಾದರೂ ಧರ್ಮಗುರುಗಳ ಸಮಾಜದಲ್ಲಿ, ಜಗಳ, ವಾದ, ಮತಭೇದಗಳು ಆದರೆ ಅದರ ಸುದ್ದಿಯನ್ನು ಚಾರರು ಕೂಡಲೆ ನನಗೆ ಹೇಳಬೇಕು; ಯಾಕಂದರೆ, ನ್ಯಾಯದ ಕೆಲಸವು ಆದಷ್ಟು ತೀವ್ರವಾಗಿ, ಆದಷ್ಟು ಉತ್ತಮರೀತಿಯಿಂದ ಆಗುವದು ನೆಟ್ಟಗೆ. ಉಪದೇಶದ ದ್ವಾರದಿಂದ ಜನರ ಕಲ್ಯಾಣಮಾಡುವದು ನನ್ನ ಕರ್ತವ್ಯವಾಗಿರುತ್ತದೆ. ಆ ಕರ್ತವ್ಯವನ್ನು ಮಾಡಲಿಕ್ಕೆ ಉತ್ಕೃಷ್ಟ ನ್ಯಾಯಪದ್ಧತಿಯನ್ನಿಡುವದು ಅವಶ್ಯವಾಗಿದೆ. ನನ್ನ ರಾಜ್ಯದಲ್ಲಿರುವ ಯಾವತ್ತು ಜನರ ಐಹಿಕ–ಪಾರಮಾರ್ಥಿಕ ಕಲ್ಯಾಣವನ್ನು ನಾನು ಮಾಡಲೇಬೇಕು; ಇದರಿಂದ ಈಆದೇಶವನ್ನು ಪ್ರಸಿದ್ಧಗೊಳಿಸಿರುತ್ತೇನೆ. ಇದನ್ನು ನನ್ನ ಪುತ್ರ–ಪೌತ್ರಾದಿವಂಶಜರು ನಡಿಸಲಿ; ಪ್ರಜೆಗಳು ತಮ್ಮ ಹಿತಕ್ಕಾಗಿಯತ್ನಿಸಲಿ.

( ೭ ) ನಾಸ್ತಿಕನಿಗೆ ಕೂಡ ಸದ್ವರ್ತನವೂ, ನೀತಿಯೂ ಬೇಕಾಗಿರುವದರಿಂದ ನನ್ನ ರಾಜ್ಯದಲ್ಲಿ ನಾಸ್ತಿಕರಿದ್ದರೂ, ಅವರಿಗೆ ಯಾರೂ ಉಪದ್ರವ ಕೊಡಲಾಗದು; ಯಾಕಂದರೆ, ಮನುಷ್ಯರ ಮತಗಳೂ, ವಿಚಾರಗಳೂ ಭಿನ್ನವಾಗಿದ್ದರೂ, ಅವರ ಉದ್ದೇಶವು ಒಂದೇ ಇರುತ್ತದೆ. ಸದ್ವರ್ತನವೂ, ನೀತಿಯೂ ಬೇಡಾಗಿದ್ದ ಮನುಷ್ಯನ ಸಂಗಡಲೂ ಉದಾರತನದಿಂದ ನಡಕೊಳ್ಳಬೇಕು; ಯಾಕಂದರೆ, ಮನುಷ್ಯನು ಎಂಥ ನೀಚವೃತ್ತಿಯವನಿದ್ದರೂ, ಅವನ ಹುಟ್ಟ ಗುಣವಾದ ಕೃತಜ್ಞತಾಬುದ್ಧಿಯು ಬೆಳಕಿಗೆ ಬಾರದೆಇರುವದಿಲ್ಲ.

( ೮ ) ಮೊದಲಿನ ಅರಸರು ಬೇಟೆಗಾಗಿಯೂ, ಮೋಜಿಗಾಗಿಯೂ ಪ್ರವಾಸಕ್ಕೆ ಹೊರಡುತ್ತಿದ್ದರು; ಆದರೆ ದೇವರ ಪ್ರಿಯದರ್ಶಿಗೆ ತನ್ನ ಆಳಿಕೆಯ ೧೦ನೇವರ್ಷದಿಂದ ಪ್ರವಾಸವನ್ನು ಮುಂದೆ ಹೇಳಿದ ಉದ್ದೇಶಗಳಿಂದ ಮಾಡಬೇಕೆಂದು ತೋರಹತ್ತಿದೆ.—ಬ್ರಾಹ್ಮಣರಿಗೂ ಶ್ರವಣರಿಗೂ [ ಬೌದ್ಧಸನ್ಯಾಸಿಗಳಿಗೂ.] ಅಲ್ಲಲ್ಲಿ ದಕ್ಷಿಣೆಗಳು ಮುಟ್ಟುವವೋ ಇಲ್ಲವೋ, ಗುರುಜನರಿಗೆ ದ್ರವ್ಯಸಹಾಯವು ದೊರೆಯುತ್ತಿರುವದೋ ಇಲ್ಲವೋ, ಜನರು ಹೇಗೆ ನಡೆಯುವರು, ಅವರನ್ನು ನೀತಿವಂತರನ್ನಾಗಿ ಮಾಡಲಿಕ್ಕೆ ಮತ್ತೆಯಾವ ಕಾಯದೆಕಾನೂನುಗಳ ಆವಶ್ಯಕತೆಯಿರುತ್ತದೆ, ಇತ್ಯಾದಿಸಂಗತಿಗಳನ್ನು ಕಣ್ಣುಮುಟ್ಟ ನೋಡಲಕ್ಕೆ ಪ್ರವಾಸಮಾಡುವದು ಹಿತಕರವು.

( ೯ ) ಪ್ರತಿಒಬ್ಬ ಮನುಷ್ಯನು ಲಗ್ನಕಾರ್ಯ, ಪುತ್ರಜನ್ಮ, ಶಿಷ್ಯಾಗಮನ, ಮೊದಲಾದ ಪ್ರಸಂಗಗಳಲ್ಲಿ ಉತ್ಸವಗಳನ್ನು ಮಾಡುವನು. ಈ ಎರಡನೆಯ ಪ್ರಕಾರದ ಉತ್ಸವಗಳನ್ನು ಎಲ್ಲರೂ ಮಾಡಬೇಕು. ಕರ್ತವ್ಯಸಮಾಪ್ತಿಯಾದ ದಿವಸವು, ನಿಜವಾದ ಉತ್ಸವದ ದಿವಸವಾಗಿರುತ್ತದೆ. ಸೇವಕನು ಸ್ವಾಮಿಯ ಆಜ್ಞೆಯನ್ನು ಪಾಲಿಸುವದು, ಸಣ್ಣವರು ದೊಡ್ಡವರ ಸನ್ಮಾನಮಾಡುವದು, ಸಜೀವ ಪ್ರಾಣಿಗಳ ವಿಷಯವಾಗಿ ದಯಾಪರರಾಗಿರುವದು, ಬ್ರಾಹ್ಮಣರಿಗೂ, ಶ್ರವಣರಿಗೂ ದಾನಧರ್ಮಮಾಡುವದು ಇವೇ ಮೊದಲಾದ ಸತ್ಕೃತ್ಯಗಳು ಒದಗಿದ ದಿವಸವು ನಿಜವಾದ ಉತ್ಸವದ ದಿವಸವಾಗಿರುತ್ತದೆಂದು ತಿಳಿಯತಕ್ಕದ್ದು. ಇಂಥ ದಿವಸ ಪಿತಾ—ಪುತ್ರ, ಸ್ವಾಮಿ—ಸೇವಕ ಇವರೇ ಮೊದಲಾದವರಿಗೆ ಆನಂದವಾಗದೆಯಿರಲಿಕ್ಕಿಲ್ಲ. ಉತ್ಸವದ

ದಿವಸವನ್ನು ಅವಶ್ಯವಾಗಿ ಪಾಲಿಸತಕ್ಕದ್ದು.

(೧೦) ದೇವರ ಪ್ರಿಯದರ್ಶಿಯು ಕೀರ್ತಿಯನ್ನೂ, ಪ್ರತಿಷ್ಠೆಯನ್ನೂ ಕ್ಷುಲ್ಲಕವೆಂದು ಭಾವಿಸುವನು. ತನ್ನ ಜನರು ಸದಾಚಾರಿಗಳಾಗಿರುವಂತೆ ವ್ಯವಸ್ಥೆ ಮಾಡಿರುವದೊಂದೇ ಕೀರ್ತಿಯನ್ನು, ಆತನು ಕೀರ್ತಿಯೆಂದು ತಿಳಿಯುವನು. ಅದೊಂದೇ ಕೀರ್ತಿಯು ಅವನಿಗೆ ಬೇಕಾಗಿರುವದು. ಇದರ ಹೊರತು ಬೇರೆ ಕಾರಣದಿಂದ ಪ್ರಾಪ್ತವಾದ ಕೀರ್ತಿಯು ಒಂದು ಕಾಸು ಸಹ ಬಾಳದೆಂದು ಆತನು ತಿಳಿಯುವನು. ಧೂರ್ತರೂ ಕ್ಷುಲ್ಲಕರೂ ಆದವರು, ಬೇಕಾದರೆ ಈ ಎರಡನೆಯ ಪ್ರಕಾರದ ಕೀರ್ತಿಯನ್ನು ಸಂಪಾದಿಸಬಹುದು.

(೧೧) ಧರ್ಮದಾನದಂಥ ದಾನವಿಲ್ಲ; ಧರ್ಮದಾನದಲ್ಲಿ ಹಲವು ಸಂಗತಿಗಳ ಸಮಾವೇಶವಾಗುತ್ತದೆ; ಸೇವಕರ ವಿಷಯವಾಗಿ ಮಮತೆ, ತಾಯಿತಂದೆಗಳ ವಿಷಯವಾಗಿ ಆದರಪೂರ್ವಕವಾದ ಪ್ರೇಮ, ಇಷ್ಟಮಿತ್ರರಿಗೆ ಔದಾರ್ಯದಿಂದ ಸಹಾಯಮಾಡುವದು, ಜೀವಂತಪ್ರಾಣಿಗಳ ಅಹಿಂಸೆ ಇವು ಧರ್ಮದಾನದಲ್ಲಿ ಬರುವವು. ಇವುಗಳ ಯೋಗದಿಂದ ಇಹಪರಗಳಲ್ಲಿ ಕೂಡಿಯೇ ಸುಖಪ್ರಾಪ್ತಿಯಾಗುವದು.

(೧೨) ಗೃಹಸ್ಥಾಶ್ರಮಿಗಳು, ಯತಿಗಳು, ಸನ್ಯಾಸಿಗಳು ಇವರೆಲ್ಲರ ಧರ್ಮಗಳನ್ನು ದೇವರ ಪ್ರಿಯದರ್ಶಿರಾಜನು ಆದರಿಸುವನು; ಮತ್ತು ಧನಾಶ್ರಯವೇ ಮೊದಲಾದ ಬಗೆಗಳಿಂದ ಅವರ ವಿಷಯವಾಗಿ ಪೂಜ್ಯಬುದ್ಧಿಯನ್ನು ಆತನು ವ್ಯಕ್ತಮಾಡುವನು; ಆದರೆ ಧರ್ಮವೃದ್ಧಿಯಲ್ಲಿಯಷ್ಟು ಪುಣ್ಯವು ಬೇರೆ ಯಾತರಲ್ಲಿಯೂ ಇರುವದಿಲ್ಲೆಂದು ಆತನ ತಿಳುವಳಿಕೆಯಾಗಿರುತ್ತದೆ. ಆತನು ಎಲ್ಲರಿಗೂ ಉತ್ತೇಜನಕೊಡುತ್ತಿದ್ದರೂ, ಆ ಉತ್ತೇಜನದ ಬಡ್ಡೆಯಲ್ಲಿ ಸ್ವಧರ್ಮನಿಷ್ಠೆಯೂ, ಪರಧರ್ಮ ಸಹಿಷ್ಣುತೆಯೂ ಇರುತ್ತವೆ; ಯಾಕಂದರೆ ಎರಡನೆಯವರ ಧರ್ಮಕ್ಕೆ ಸಹಾಯ ಮಾಡುವದರಲ್ಲಿಯೂ ಧರ್ಮವೃದ್ಧಿಯಾಗುತ್ತದೆ. ಇದಕ್ಕೆ ವಿರುದ್ಧವಾಗಿ ನಡೆಯುವವನು, ಸ್ವಧರ್ಮದಹಾನಿಯನ್ನೂ, ಪರಧರ್ಮದ ಹಾನಿಯನ್ನೂ ಕೂಡಿಯೇ ಮಾಡುವನು. ಅದರಂತೆ, ಯಾವನು ಸ್ವಧರ್ಮಾಭಿಮಾನಿಯಾಗಿ ತನ್ನ ಧರ್ಮವನ್ನು ಹಬ್ಬಿಸುವ ಉದ್ದೇಶದಿಂದ ಪರಧರ್ಮಗಳನ್ನು ನಿಂದಿ

ಸುವನೋ, ಅವನು ಸ್ವಧರ್ಮವೃದ್ಧಿಯ ಮಾರ್ಗದಲ್ಲಿ ವಿಘ್ನವನ್ನುಂಟು ಮಾಡುವನು; ಆತನ ಈ ನಡತೆಯು ಸರಿಯಾದದ್ದಲ್ಲ. ಎರಡನೆಯವ ರನ್ನು ಸನ್ಮಾನಿಸುವದೂ, ಅವರ ಹೊತ್ತಿಗೆ ಆಗುವದೂ ಇವಂತೂ ಪ್ರತಿಒಬ್ಬನ ಕರ್ತವ್ಯಗಳಾಗಿರುತ್ತವೆ. ದೇವರ ಪ್ರಿಯದರ್ಶಿಯ ಇಚ್ಛೆಯು ಹೀಗೆ ಮಾಡಬೇಕೆಂತಲೇ ಇರುತ್ತದೆ; ಆದ್ದರಿಂದ ಆತನ ಆಶ್ರಯದಲ್ಲಿ ಪ್ರತಿಯೊಬ್ಬ ಮನುಷ್ಯನು ತನ್ನ ಧರ್ಮದಂತೆ ನಡೆಯಬೇಕು. ಧರ್ಮ ತತ್ವಗಳ ಪ್ರಸಾರಮಾಡುವಂಥ ಪುಣ್ಯಕರವಾದ ಕಾರ್ಯವು ಮತ್ತೆ ಯಾವದೂ ಇಲ್ಲೆಂದು ಪ್ರಿಯದರ್ಶಿಯು ತಿಳಿಯುವನು. ಎಲ್ಲ ಧರ್ಮಗಳ ಹೇತುವು ಇದೇ ಇರುತ್ತದೆ; ಆದ್ದರಿಂದ ಧರ್ಮ ಪ್ರಸಾರಕ್ಕಾಗಿಯೂ, ನೀತಿಯ ಅಭಿವೃದ್ಧಿಗಾಗಿಯೂ ಸ್ತ್ರೀಪುರುಷರ ನಡಾವಳಿಯ ಮೇಲೆ ಕಣ್ಣು ಇಡಬೇಕೆಂದು ಅಧಿಕಾರಿಗಳನ್ನು ನಿಯಮಿಸುವದೇ ಮೊದಲಾದ ಉಪಾಯ ಗಳನ್ನು ಮಾಡತಕ್ಕದ್ದು. ಇದರಿಂದ ಧರ್ಮವೃದ್ಧಿಯೂ, ನೀತಿಯ ಉತ್ಕರ್ಷವೂ ಆಗುವವು.

(೧೩) ದೇವರ ಪ್ರಿಯದರ್ಶಿರಾಜನು ವಿಸ್ತಾರವಾದ ಕಲಿಂಗದೇಶ ವನ್ನು ಪಾದಾಕ್ರಾಂತವಾಗಿ ಮಾಡಿದನು. ಆಗ ಗುಲಾಮರೆಂದು ಲಕ್ಷಾ ವಧಿ ಜನರನ್ನು ಸೆರೆ ಹಿಡಿದನು. ಒಂದು ಲಕ್ಷಜನರ ಸಂಹಾರವು ಈ ಪ್ರಸಂಗದಲ್ಲಿ ಆಯಿತು; ಆದರೆ ಈ ಕಲಿಂಗವಿಜಯದಿಂದ ಅರಸನ ವೃತ್ತಿಯು ಧರ್ಮದಕಡೆಗೆ ಒಲಿಯಿತು. ಈ ಕಲಿಂಗವಿಜಯದಿಂದ ಅರ ಸನ ಮನಸ್ಸಿನಲ್ಲಿ ಉಪರತಿಯು ಉತ್ಪನ್ನವಾದದ್ದರಿಂದ, ಇನ್ನುಮೇಲೆ ಧರ್ಮಪ್ರಸಾರಾರ್ಥವಾಗಿಯೇ ತನ್ನ ತನುಮನೋಧನಗಳನ್ನರ್ಪಿಸುವೆ ನೆಂದು ಆತನು ಸಂಕಲ್ಪ ಮಾಡಿದನು.

ಹೊಸದೇಶಗಳನ್ನು ಗೆಲ್ಲುವಾಗ ಆಗುವ ಪ್ರಾಣಹಾನಿಯಬಗ್ಗೆ ನನಗೆ ದುಃಖವಾಗುತ್ತದೆ. ಅದರಲ್ಲಿ ಸ್ವಧರ್ಮನಿಷ್ಠರೂ, ಸದಾಚಾರಿಗಳೂ, ನೀತಿವಂತರೂ, ಆಜ್ಞಾಧಾರಕರೂ, ಸಚ್ಛೀಲಬ್ರಾಹ್ಮಣರೂ—ಶ್ರವಣರೂ—ಇತ ರರೂ ಇಂಥ ಪ್ರಸಂಗದಲ್ಲಿ ಕಷ್ಟವನ್ನು ಸೋಸಬೇಕಾಗುವದರಿಂದಂತು ನನಗೆ ಬಹಳ ದುಃಖವಾಗುತ್ತದೆ. ಅವರ ಆಪ್ತರೂ, ಪ್ರೀತಿಯಜನರೂ

ಯುದ್ಧದಲ್ಲಿ ಮರಣಹೊಂದುವದರಿಂದ ಅವರ ವಿಯೋಗಜನ್ಯದುಃಖವನ್ನು ಸಹಿಸಬೇಕಾಗುತ್ತದೆ. ಅವರು ಸ್ವತಃ ಬಹು ಕಷ್ಟದಿಂದ ಜೀವಉಳಿಸಿ ಕೊಂಡು ಓಡಿ ಹೋದರೂ, ಅವರ ಮನೆಯಾರು, ಇಷ್ಟಮಿತ್ರರು, ನೆರೆ ಹೊರೆಯವರು ಇವರ ನಾಶವಾದದ್ದನ್ನು ಅವರು ಕಣ್ಣುಮುಟ್ಟ ನೋಡ ಬೇಕಾಗುವದು. ಕಲಿಂಗವಿಜಯದಲ್ಲಿ ಲಕ್ಷಾವಧಿ ಜನರೊಳಗೆ ಕೆಲವರು ನೀರಲ್ಲಿ ಮುಳುಗಿ ಸತ್ತರು; ಕೆಲವರು ತುಂಡರಿಸಲ್ಪಟ್ಟು ಸತ್ತರು; ಲಕ್ಷಾ ವಧಿ ಜನರು ಸೆರೆಯಲ್ಲಿ ಸಿಕ್ಕರು. ಇದನ್ನು ನೋಡಿ, ಪ್ರಿಯದರ್ಶಿರಾಜ ನಿಗೆ ಸಾವಿರಪಟ್ಟು ಹೆಚ್ಚು ದುಃಖವಾಗುತ್ತಿರುವದು. ಪ್ರಾಣಿಮಾತ್ರಗಳ ನಿರ್ಭಯತೆ, ಮನುಷ್ಯನ ನಡತೆಯೊಳಗಿನ ಸದಯತೆ, ಇವೆರಡು ಸಂಗತಿ ಗಳು ಧರ್ಮವಿಜಯದ ಪತಾಕೆಗಳಾಗಿರುತ್ತವೆ! ಪ್ರಿಯದರ್ಶಿ ರಾಜನಿಗೆ ತನ್ನ ವಿಸ್ತಾರವಾದ ರಾಜ್ಯದಯೋಗದಿಂದ ಅಭಿಮಾನವು ತೋರುತ್ತಿ ದ್ದರೆ, ಇವೆರಡು ಸಂಗತಿಗಳಿಂದಲೇ ತೋರುತ್ತಿರುವದು. ನನ್ನ ಉಪದೇ ಶಕರು ದೇಶದೇಶಗಳಲ್ಲಿ ಉಪದೇಶದಿಂದ ಧರ್ಮಪ್ರಸಾರ ಮಾಡುವದನ್ನು ನೋಡಿ, ನನಗೆ ಬಹಳ ಆನಂದವಾಗುತ್ತದೆ. ಧರ್ಮವಿಜಯದ ಆನಂದವು ಹೀಗೆ ವಿಲಕ್ಷಣವಾಗಿರುವದು; ಆದರೆ ಈ ವಿಜಯಕ್ಕಾಗಿ ಪರಲೋಕ ದಲ್ಲಿ ದೊರೆಯುವ ಆನಂದವನ್ನು ಮನಸ್ಸಿನಲ್ಲಿ ತಂದರೆ, ಈ ಐಹಿಕಾನಂ ದವೂ ತುಚ್ಛವಾಗಿ ತೋರುವದು; ಆದ್ದರಿಂದ ನನ್ನ ಪುತ್ರಪೌತ್ರಾದಿಗಳು ಖಡ್ಗದ ಬಲದಿಂದ ವಿಜಯವನ್ನು ಸಂಪಾದಿಸುವ ಉಬ್ಬಿಗೆ ಬಿದ್ದು, ಜನ ರಮೇಲೆ ಒತ್ತಾಯ ಮಾಡಬಾರದು. ಅಥವಾ ಅವರ ನಾಶಕ್ಕೆ ಕಾರಣ ವಾಗಬಾರದು. ಧರ್ಮವಿಜಯದಂಥ ವಿಜಯವಿಲ್ಲೆಂಬದನ್ನು ಅವರು ಚನ್ನಾಗಿ ಲಕ್ಷದಲ್ಲಿಡಬೇಕು. ಇದಕ್ಕಾಗಿಯೇ ಈ ಆದೇಶವನ್ನು ಕೊರಿಸಿ ಇಟ್ಟಿರುತ್ತದೆ. ಇಹಪರಗಳಲ್ಲಿ ಕೂಡಿಯೇ ಮಹತ್ವವಾದದ್ದೆಂದರೆ ಧರ್ಮ ವಿಜಯವು.

(೧೪) [ಇದರಲ್ಲಿ ಮೇಲಿನ ಆದೇಶಗಳಲ್ಲಿಯ ವಾಕ್ಯಗಳೂ, ವಿಚಾರ ಗಳೂ ಪುನಃ ಪುನಃ ಬಂದಿರುವದರಿಂದ ಅವುಗಳ ಭಾಷಾಂತರವನ್ನು ಕೊಟ್ಟಿ ರುವದಿಲ್ಲ.]

ಹದಿನಾಲ್ಕು ರತ್ನಗಳಂತೆ ಇದ್ದ, ಈ ಆದೇಶಗಳನ್ನು ಬರಕೊಂಡು ಚಕ್ರವರ್ತಿಯು ಪರಮಾನಂದಭರಿತನಾದನು. ಆತನ ಕಣ್ಣುಗಳೊಳಗಿಂದ ಆನಂದಬಾಷ್ಪಗಳು ಸುರಿಯುತ್ತಲಿದ್ದವು. ಆನಂದದಿಂದ ಗದ್ಗದಿತ ಕಂಠನಾಗಿದ್ದ ಆತನ ಮುಖದಿಂದ ಅಕ್ಷರಗಳು ಹೊರಡಲೊಲ್ಲವು. ಚಕ್ರವರ್ತಿಯ ಈ ಆನಂದವನ್ನು ನೋಡಿ, ಗುರುಜನರಿಗೆ ಬಹಳ ಸಂತೋಷವಾಯಿತು. ಹೀಗೆ ಎಲ್ಲರೂ ಆನಂದಪರವಶರಾಗಿ ಕುಳಿತಿರುವಾಗ, ಸಹಸ್ರಾವಧಿ ಜನಸಮೂಹವು ಅವರು ಕುಳಿತಿರುವ ಚೈತ್ಯಾಲಯವನ್ನು ಮುತ್ತಿತು. ಆಗ ಅಶೋಕನಬಳಿಯಲ್ಲಿ ವೀತಾಶೋಕನು ಆನಂದಬಾಷ್ಪಗಳನ್ನು ಸುರಿಸುತ್ತ ಕುಳಿತುಕೊಂಡಿದ್ದನು. ಅಶೋಕನ ತಂಗಿಯಾದ ಇಂದಿರೆಯು ಅಣ್ಣನ ಈ ಆನಂದಪರವಶತೆಯನ್ನು ಕೌತುಕದಿಂದ ನೋಡುತ್ತ ಕುಳಿತುಕೊಂಡಿದ್ದಳು. ಅಷ್ಟರಲ್ಲಿ ರಾಜಮಾತೆಯಾದ ಇಂದುಮತಿಯೂ, ಸಂಪುಷ್ಟಾಚಾರ್ಯನೂ, ಪ್ರಮೀಲೆಯೂ ಖಡ್ಗಪಾಣಿಗಳಾಗಿ ಭಯಂಕರ ರೂಪಗಳಿಂದ ಅಲ್ಲಿಗೆ ಬಂದರು. ಅವರು ಚಕ್ರವರ್ತಿಯ ನಿಯಮಿತಸೈನ್ಯವನ್ನು ಸಂಹರಿಸಿ, ಒಳಗೆ ಬಂದದ್ದರಿಂದ ಅವರ ಸರ್ವಾಂಗವು ರಕ್ತಮಯವಾಗಿತ್ತು. ಮನುಷ್ಯಕೊಲೆಯ ಆವೇಶದಿಂದ ಅವರ ಮೈಮೇಲಿನ ಎಚ್ಚರವು ತಪ್ಪಿತ್ತು. ಅವರು ವೀತಾಶೋಕನೊಬ್ಬನನ್ನು ಬಿಟ್ಟು, ಉಳಿದವರೆಲ್ಲರಮೇಲೆ ಏರಿಹೋದರು. ಚಕ್ರವರ್ತಿಯ ಆನಂದದ ಆವೇಶವು ಇನ್ನೂ ಕಡಿಮೆಯಾಗದ್ದರಿಂದ, ಆತನು ಆನಂದದಿಂದ ತಲೆದೂಗುತ್ತ ಕುಳಿತುಕೊಂಡಿದ್ದನು. ಇಂದಿರೆಯು ಈ ಭಯಂಕರ ಪ್ರಸಂಗವನ್ನು ನೋಡಿ ಬೆದರಿ, ಚಕ್ರವರ್ತಿಯ ಮಗ್ಗಲಲ್ಲಿ ಹೋಗಿ ಕುಳಿತುಕೊಂಡಿದ್ದಳು. ಗುರುಜನವು ವಿಸ್ಮಯದಿಂದ ನೋಡುತ್ತ ಕುಳಿತುಕೊಂಡಿತ್ತು. ಆಗ ಪ್ರಮೀಲೆಯು ಇಂದಿರೆಯ ಮೇಲೆಯೂ, ರಾಜಮಾತೆಯಾದ ಇಂದುಮತಿಯು ಅಶೋಕನಮೇಲೆಯೂ, ಸಂಪುಷ್ಟಾಚಾರ್ಯನೂ, ಆತನ ಪರಿವಾರವೂ ಭಿಕ್ಷುಮಂಡಲದಮೇಲೆಯೂ ದುಮುಕಿ ಅವರನ್ನು ಸಂಹರಿಸತಕ್ಕವರು; ಅಷ್ಟರಲ್ಲಿ ಕಲಿಂಗದ ಯುವರಾಜನಾದ ಜಿತೇಂದ್ರನೂ, ಯುವರಾಜವೇಷಧಾರಿಯಾದ ಪ್ರಣಯಿನಿಯೂ, ಕಲಿಂಗಾಧಿಪತಿಯಾದ ಮೃಗೇಂದ್ರನೂ, ಚಿದಾನಂದಸ್ವಾಮಿಗಳೂ ನಿಯಮಿತ ಶೂರ

ಪರಿವಾರದೊಡನೆ ಚೈತ್ಯಾಲಯವನ್ನು ಪ್ರವೇಶಿಸಿ, ರಾಜಮಾತೆಯೇ ಮೊದಲಾದವರನ್ನು ಸೆರೆಹಿಡಿದರು. ಈ ಪ್ರಸಂಗದಲ್ಲಿ ಹಲವರ ಪ್ರಾಣಹಾನಿಯಾಯಿತು. ಹೀಗೆ ಕಲಿಂಗರಾಜಮನೆತನದವರಿಂದ, ಚಕ್ರವರ್ತಿಯೇ ಮೊದಲಾದವರ ಪ್ರಾಣನಾಶಕ್ಕಾಗಿ ಬಂದಿದ್ದ ಜನರ ಸದ್ದು ಅಡಗುತ್ತಿರಲು, ಚಿದಾನಂದಸ್ವಾಮಿಗಳನ್ನು ಮೊಗ್ಗಲೀಪುತ್ರ–ತಿಷ್ಯರವರು ಆಲಿಂಗಿಸಿ ಸತ್ಕರಿಸಿದರು. ಆಗ ಚಕ್ರವರ್ತಿಯು ಕಣ್ತೆರೆದು ನೋಡಲು, ಈ ಆಕಸ್ಮಿಕ ಭಯಂಕರ ಪ್ರಸಂಗವು ಆತನ ಕಣ್ಣಿಗೆ ಬಿದ್ದಿತು.

ಪರಮ ಶಾಂತಮೂರ್ತಿಯಾಗಿದ್ದ ಅಶೋಕನ ಚಿತ್ತವು ಈ ಭಯಂಕರ ಪ್ರಸಂಗದಿಂದ ಕ್ಷೋಭಿಸಲಿಲ್ಲ. ಆತನು ತನ್ನ ಬಳಿಯಲ್ಲಿ ನಿಂತಿರುವ ವೇಷಧಾರಿಯಾದ ಜಿತೇಂದ್ರನ ಕೈಹಿಡಿದುಕೊಂಡು ಕೃತಜ್ಞತೆಯಿಂದ ಆತನನ್ನು ಅಭಿನಂದಿಸಿ, ಆತನ ಕೈಗಳನ್ನು ಹಿಡಿದುಕೊಂಡೇ ಚಿದಾನಂದಸ್ವಾಮಿಗಳನ್ನು ನಮಸ್ಕರಿಸಿದನು. ಆಗ ಸ್ವಾಮಿಗಳು ಸದ್ಗದಿತ ಕಂಠರಾಗಿ—"ಆಯುಷ್ಮಾನ್‌ಭವ, ಕೀರ್ತಿಮಾನ್‌ಭವ" ಎಂದು ಆಶೀರ್ವದಿಸಲು, ಅಶೋಕನು—ಮಹಾತ್ಮರೇ, ಕಲಿಂಗಾಧಿಪತಿಯಾದ ಮೃಗೇಂದನನ್ನು ತಾವು ಕೊಂದಿರೆಂದು ಪ್ರಮೀಲಾದೇವಿಯು ಪ್ರತಿಪಾದಿಸಿದ್ದಳಷ್ಟೇ? ಅಂಥ ಅಪರಾಧವು ತಮ್ಮಿಂದ ಘಟಿಸದೆಂದು ತಮ್ಮನ್ನು ನಾನು ಸುಮ್ಮನೆ ಹೋಗಗೊಟ್ಟೆನಲ್ಲದೆ, ಮಹಾತ್ಮರಾದ ತಮ್ಮ ಚರಣವನ್ನು ಸೇವಿಸಿ ಧನ್ಯನಾಗಲಿಲ್ಲ. ಪರಮ ಕೃಪಾಳುಗಳಾದ ತಾವು, ಸದ್ಗುರುಕೃಪೆಯಿಂದ ಪುನಃ ನನಗೆ ದರ್ಶನಕೊಟ್ಟದ್ದರಿಂದ ನಾನು ಕೃತಾರ್ಥನಾದೆನು; ಈ ದಿನವೇ ಸುದಿನವು. ಮಹಾತ್ಮರ ಸಮುಚ್ಚಯದಿಂದ ಅಲಂಕೃತವಾದ ಈ ದಿನವೇ ಚಿರಸ್ಮರಣೀಯವಾದದ್ದು. ಮಹಾತ್ಮರೇ, ವೈದಿಕ ಹಾಗು ಬೌದ್ಧ ಧರ್ಮಗಳ ನಿಜವಾದ ರಹಸ್ಯವನ್ನು ಬಲ್ಲ ತಮ್ಮ ಇಬ್ಬರು ಮಹಾತ್ಮರ ಇಂದಿನ ಆಲಿಂಗನವನ್ನು ನೋಡಿ, ಅವೆರಡು ಧರ್ಮಗಳ ರಹಸ್ಯೈಕ್ಯವು ನನ್ನ ಹೃದಯದಲ್ಲಿ ಚೆನ್ನಾಗಿ ಬಿಂಬಿಸಿತು. ಇಂದು ನಮ್ಮ ಗುರುವೃಂದವು ದಯಪಾಲಿಸಿರುವ ೧೪ ಆದೇಶರತ್ನಗಳಿಂದ ಆ ರಹಸ್ಯೈಕ್ಯಕ್ಕೆ ಪುಷ್ಟಿಯು ದೊರೆಯಿತು! ಇಂದಿಗೆ ಅಶೋಕನು ಧನ್ಯನಾದನು, ಎಂದು ನುಡಿಯುತ್ತಿರುವಾಗ, ಆ ಪ್ರೇಮಲಮೂರ್ತಿಯ ಎರಡೂ ಕಣ್ಣುಗಳು

ಆನಂದಬಾಷ್ಪಪೂರ್ಣವಾಗಲು, ಚಿದಾನಂದಸ್ವಾಮಿಗಳು—ಗುರುಪುತ್ರನಾದ ಅಶೋಕನೇ, ನೀನು ಧನ್ಯನು ಧನ್ಯನು! ನಿನ್ನ ಸಚ್ಛಿಷ್ಯ ಧರ್ಮವನ್ನು ನೋಡಿ, ನಾನೂ ಧನ್ಯನೇ ಆದೆನು; ಆದರೆ ಲೋಕಹಿತತತ್ಪರನಾದ ಚಕ್ರವರ್ತಿಯೇ, ನಿನ್ನ ಹಸ್ತದಲ್ಲಿ ತನ್ನ ಹಸ್ತವನ್ನು ಕೊಟ್ಟು, ತನ್ನ ಸಚ್ಛೀಲದಿಂದ ಸ್ತುತ್ಯಳಾದವಳು ಕಲಿಂಗರಾಜಪುತ್ರಿಯಾದ ಪ್ರಣಯಿನಿಯೆಂದು ತಿಳಿ. ತನ್ನ ಅಣ್ಣನನ್ನು ಉಳಿಸುವದಕ್ಕಾಗಿ ಆ ವೀರಪುತ್ರಿಯು ಪುರುಷವೇಷದಿಂದ ನಿನ್ನಲ್ಲಿ ಬಂದು ಇದ್ದಳು. ನಿನ್ನ ಸದ್ಗುಣಗಳು ಆಕೆಯ ಮನಸ್ಸನ್ನು ದಿನದಿನಕ್ಕೆ ಹರಣಮಾಡುತ್ತಿದ್ದರೂ, ಆ ಅಭಿಮಾನಿಯಾದ ಕ್ಷತ್ರಿಯರಾಜಪುತ್ರಿಯು, ತಂದೆಯ ಇಚ್ಛೆಯನ್ನು ತಿಳಿದು, ನಿನ್ನ ನಿಕಟಸಹವಾಸವನ್ನು ಮಾಡಲೊಪ್ಪದೆ, ತುರಂಗದರ್ಬಾರದಲ್ಲಿ ಕಾಲವನ್ನು ಕಳೆದಳು. ನೀನು ಸ್ವಲ್ಪ ದಿನಗಳ ಹಿಂದೆ ಆಕೆಯನ್ನು ಸ್ತ್ರೀಯೆಂದು ಕಂಡುಹಿಡಿದು, ಆಕೆಗೆ ನಿನ್ನ ಹೃದಯವನ್ನು ಒಪ್ಪಿಸಿದರೂ, ಬಹಿರಂಗದಲ್ಲಿ ನೀತಿಗೆ ವಿರುದ್ಧವಾಗಿ ನೀನೂ ಆಚರಿಸಲಿಲ್ಲ; ಆದ್ದರಿಂದ ಆತ್ಮಸಂಯಮನಧುರೀಣರಾದ, ಹಾಗು ಅಂತರಂಗದಿಂದ ಪರಸ್ಪರರನ್ನು ಪ್ರೀತಿಸುತ್ತಿರುವ ನಿಮ್ಮಿಬ್ಬರ ವಿವಾಹವಾಗಿ, ವೈದಿಕ-ಬೌದ್ಧ ಧರ್ಮಗಳಲ್ಲಿ ಸಖ್ಯವುಂಟಾಗುವದು ನನಗೆ ಉಕ್ತವಾಗಿ ತೋರುತ್ತದೆ. ಇದಕ್ಕೆ ಮಹಾತ್ಮರಾದ ಮೊಗ್ಗಲೀಪುತ್ರ—ತಿಷ್ಯರವರೂ, ಬೇರೆ ಭಿಕ್ಷುಮಂಡಲವೂ ಒಪ್ಪಿಕೊಳ್ಳಬಹುದಾಗಿ ತೋರುತ್ತದೆ, ಅನ್ನಲು, ಮೊಗ್ಗಲೀಪುತ್ರ—ತಿಷ್ಯರು ಚಕ್ರವರ್ತಿಯನ್ನು ಕುರಿತು—ಭಗವನ್, ಸತ್ಪುರುಷರ ಪರಮಾನುಗ್ರಹದ ಅಪ್ಪಣೆಯು ನಿನಗೆ ಸಮ್ಮತವಷ್ಟೇ? ಎಂದು ನುಡಿಯುತ್ತಿರಲು, ಅಲ್ಲಿಯೇ ಅಣ್ಣನ ಬಳಿಯಲ್ಲಿ ಕುಳಿತಿದ್ದ ವೀತಾಶೋಕನು ಎದ್ದು ನಿಂತು, ತನ್ನ ತಾಯಿಯಾದ ಇಂದುಮತಿಯನ್ನು ಕುರಿತು—“ ತಾಯಿಯೇ, ನಿನ್ನ ಈ ಅಧಮಕೃತಿಯನ್ನು ನೋಡಿ ನನ್ನ ಸಂಸಾರದ ಮೇಲಿನ ಪ್ರೇಮವು, ಸಂಪೂರ್ಣ ನಷ್ಟವಾಗಿ ಹೋಯಿತು. ಸಂಸಾರಪರಿತ್ಯಾಗದಸಂಗಡ ನಿನ್ನ ನನ್ನ ಮಾತಾ—ಪುತ್ರ ಸಂಬಂಧವೂ ನಷ್ಟವಾಗುವದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ! ನನಗೆ ಪಟ್ಟವಾಗಬೇಕೆಂಬ ದುರಾಲೋಚನೆಯಿಂದ ಪುಣ್ಯಶ್ಲೋಕನಾದ ಅಣ್ಣನ ಪ್ರಾಣಕ್ಕೂ ಹಲವುಸಾರೆ ನೀನು ಕೈಹಾ

ಕಿದೆಯಲ್ಲ! ನಾನು ಸಂಸಾರದಲ್ಲಿದ್ದರೆ, ಎಂದಿಲ್ಲೊಂದು ದಿನ ನೀನು ಭಗವಂತನ ಪ್ರಾಣಹರಣ ಮಾಡುವವಳೇ ಸರಿ. ಇಷ್ಟು ಸುಲಭವಾಗಿ ಪ್ರಾಪ್ತವಾಗಿರುವ ಆತ್ಮೋದ್ಧಾರದ ಪ್ರಸಂಗವನ್ನು, ನಾನಾದರೂ ಯಾಕೆ ಕಳಕೊಳ್ಳಬೇಕು? ನಾನು ವಿರಕ್ತನಾಗಿ ಭಿಕ್ಷುದೀಕ್ಷೆಯನ್ನು ಹೊಂದಿದರೆ, ನಿನ್ನ ದುರಾಲೋಚನೆಗಳು ನಷ್ಟವಾಗಿ, ನಿನ್ನ ಪಾತಕಗಳನ್ನು ಪಶ್ಚಾತ್ತಾಪದಿಂದ ಸುಟ್ಟುಕೊಳ್ಳಲಿಕ್ಕೆ ನಿನಗೆ ಅನುಕೂಲವಾದೀತು. "ನಮೋಬುದ್ಧಾಯ" ಎಂದು ನುಡಿದು, ಕುಮಾರನು ಭಿಕ್ಷುವೃಂದಕ್ಕೆ ಸಾಷ್ಟಾಂಗವಾಗಿವಂದಿಸಿ, ಭಿಕ್ಷುದೀಕ್ಷೆಯನ್ನು ಕೊಡಲು ಅವರನ್ನು ಪ್ರಾರ್ಥಿಸಿದನು. ಆಗ ಅಶೋಕನು ಕಣ್ಣುತುಂಬನೀರುತಂದು ವೀತಾಶೋಕನನ್ನು ಕುರಿತು—ಕುಮಾರಾ, ಭಿಕ್ಷುವಾಗಲಿಕ್ಕೆ ಇಷ್ಟು ಅವಸರ ಮಾಡಬೇಡ. ನೀನು ಇನ್ನೂ ಸಂಸಾರದ ಆಸ್ವಾದವನ್ನು ಅನುಭವಿಸಿರುವದಿಲ್ಲ, ಅನ್ನಲು, ಬದ್ಧಿಮತಿಯು ಬಿಕ್ಕಿಬಿಕ್ಕಿ ಅಳುತ್ತ ಮಗನನ್ನು ಕುರಿತು—ಕುಮಾರಾ, ಬೇಕಾದರೆ ನನ್ನನ್ನು ಸೆರೆಯಲ್ಲಿರಿಸು, ಇಲ್ಲವೆ ನನಗೆ ದೇಹಾಂತ ಪ್ರಾಯಶ್ಚಿತ್ತವನ್ನಾದರೂ ಕೊಡಿಸು; ಆದರೆ ನೀನು ಸಂಸಾರವನ್ನು ಮಾತ್ರ ಬಿಡಬೇಡ, ಎಂದು ಹೇಳಿಕೊಂಡಳು.

ಅಣ್ಣನ, ಹಾಗು ತಾಯಿಯ ಈ ಮಾತುಗಳನ್ನು ಕೇಳಿ, ವೀತಾಶೋಕನು ನಗುತ್ತ—ಎಂಥ ನಿಮ್ಮ ಚಮತ್ಕಾರದ ಆಗ್ರಹವಿದು! ಈ ಶುಭಪ್ರಸಂಗದಲ್ಲಿ ಆನಂದವನ್ನು ವ್ಯಕ್ತಮಾಡದೆ, ನೀವು ದುಃಖಪಡುತ್ತಿರುವಿರಲ್ಲ! ಭಗವನ್, ನೀನು ಇಂಥ ಜ್ಞಾನಿಯೂ, ಇಂಥ ಧರ್ಮಾತ್ಮನೂ ಇದ್ದು, ನನ್ನ ಕಾರ್ಯಕ್ಕೆ ಸಹಾಯಮಾಡದೆ ನೀನೂ ದುಃಖಪಡುವೆಯಾ! ಇದು ಸರಿಯಲ್ಲ. ಸರಿಯಿರಿ, ರಾಜಪ್ರಾಸಾದವೂ, ಅಲ್ಲಿಯ ವಿಲಾಸಗಳೂ ನನಗೆ ದುಸ್ಸಹವಾಗಹತ್ತಿರುವದರಿಂದ, ಶ್ರೀ ಗುರುಚರಣಕ್ಕೆ ಶರಣು ಹೋಗುವದಕ್ಕಾಗಿ ನನಗೆ ಮಾರ್ಗಕೊಡಿರಿ, ಎಂದು ನುಡಿದು, ಸತ್ವಮೂರ್ತಿಯಾದ ಆ ವೀತಾಶೋಕನು ಮಹಾತ್ಮರಾದ ಮೊಗ್ಗಲೀಪುತ್ರ–ತಿಷ್ಯರವರ ಚರಣಗಳ ಮೇಲೆ ಮಸ್ತಕವನ್ನಿಟ್ಟು ಭಿಕ್ಷುದೀಕ್ಷೆ ಕೊಡುವದಕ್ಕಾಗಿ ಪ್ರಾರ್ಥಿಸಿದನು. ತಿಷ್ಯರವರು ಆ ತರುಣನ ಅಧಿಕಾರಸಂಪನ್ನತೆಯನ್ನರಿತು, ಕೂಡಲೆ ಅವನಿಗೆ ಭಿಕ್ಷುದೀಕ್ಷೆಯನ್ನು ಕೊಟ್ಟರು. ಈ ವಿಚಿತ್ರಪ್ರಸಂಗವನ್ನು ನೋಡಿ, ಎಲ್ಲರೂ ಸುಮ್ಮನೆ

ಕುಳಿತುಕೊಂಡಿರಲು, ಮೊಗ್ಗಲೀಪುತ್ರ–ತಿಷ್ಯರವರು ಅಶೋಕನನ್ನು ಕುರಿತು– ಭಗವನ್, ನಿನ್ನ ಬಂಧುವು ನಿರ್ವಾಣದ ಮಾರ್ಗವನ್ನು ಕ್ರಮಿಸಹತ್ತಿದ್ದು ಬಹು ಆನಂದದ ಸಂಗತಿಯು. ನಿನ್ನ ಆಬಂಧುವಿನೊಡನೆ ಈ ಪ್ರಣಯಿನಿಯು ಲಗ್ನಮಾಡಬೇಕೆಂಬ ಪ್ರಸಕ್ತಿಯಿಂದಲೇ ಹಲವು ಇಷ್ಟಾ–ನಿಷ್ಟ ಪರಿಣಾಮಗಳು ಘಟಿಸಿದವು. ಈಗ ನೀನು ಲೋಕಕಲ್ಯಾಣಾರ್ಥವಾಗಿ ಈ ಪ್ರಣಯಿನಿಯನ್ನು ಲಗ್ನವಾಗು; ಅದರಂತೆ ನಿನ್ನ ತಂಗಿಯಾದ ಈ ಇಂದಿರೆಯು, ಹರಿದ್ವಾರದ ಆಶ್ರಮದ ನೆರೆಯಲ್ಲಿ ಸಿಂಹನಿಗೆ ಬಾಣ ಹೂಡುತ್ತಿರುವಾಗ, ಈ ಕಲಿಂಗರಾಜಪುತ್ರನಾದ ಜಿತೇಂದ್ರನು "ಬೇಡಬೇಡೆಂ"ದು ಈಕೆಯ ಕೈಹಿಡಿಯಲು, ಆಗಲೇ ಈಕೆಯು ತನ್ನ ಹೃದಯವನ್ನು ಜಿತೇಂದ್ರನಿಗೆ ಒಪ್ಪಿಸಿದ್ದಾಳೆ; ಆದ್ದರಿಂದ ನಿನ್ನ ತಂಗಿಯನ್ನು ಜಿತೇಂದ್ರನಿಗೆಕೊಟ್ಟು ಲಗ್ನಮಾಡು, ಅನ್ನಲು, ಚಿದಾನಂದರು ಪರಮಾನಂದದಿಂದ ಅಲ್ಲಿ ನೆರೆದವರನ್ನು ಕುರಿತು– ಸಜ್ಜನರೇ, ಭಿಕ್ಷುಶ್ರೇಷ್ಠರು ಚಕ್ರವರ್ತಿಗೆ ಮಾಡುವ ಈ ಆಜ್ಞೆಗಳು ಲೋಕಕಲ್ಯಾಣಕಾರಕಗಳಾಗಿರುತ್ತವೆ. ಇಂಥ ಕಲ್ಯಾಣಪ್ರಸಂಗವಿರುವದರಿಂದಲೇ ಚಕ್ರವರ್ತಿಯನ್ನು ಸಂಕಟದಿಂದ ದೂರಮಾಡುವ ಸುಯೋಗವು ಕಲಿಂಗಾಧಿಪತಿಯಾದ ಮೃಗೇಂದ್ರನಿಗೆ ಇಂದು ಒದಗಿಬಂದಿತು. ಉಪಗುಪ್ತಾಚಾರ್ಯರ ಪೂರ್ವಾಶ್ರಮದ ಕುಟುಂಬವಾದ ಭಗವತೀ ಬಕುಲಾದೇವಿಯು, ಸಂಪುಷ್ಟಾಚಾರ್ಯರ ಈ ದುಷ್ಟ ಒಳಸಂಚನ್ನು, ಗಂಗಾನದಿಯ ಪಾತ್ರದಲ್ಲಿ ಧ್ಯಾನಮುಗಿಸಿಕೊಂಡು ಕುಳಿತಾಗ ಕೇಳಿ, ಪ್ರಣಯಿನಿಗೆ ಹೇಳಿದಳು; ಆ ಪ್ರಣಯಿನಿಯು ಜಿತೇಂದ್ರನಿಗೆ ಹೇಳಿದಳು. ಜಿತೇಂದ್ರನು ಕೂಡಲೆ ತನ್ನ ತಂದೆಯ ಬಳಿಗೆ ಹೋಗಿ, ಸೈನ್ಯದೊಡನೆ ಆತನನ್ನು ಕರಕೊಂಡು ಇಲ್ಲಿಗೆ ಬಂದನು. ಈ ವಿಚಿತ್ರ ಯೋಗವು ಜಗತ್ತಿನ ಹಿತಕ್ಕಾಗಿಯೇ ಒದಗಿರುತ್ತದೆಂದು ನಾನು ತಿಳಿಯುವೆನು. ಇಂಥ ಹಿತದ ಕಾರ್ಯಕ್ಕೆ ಮೃಗೇಂದ್ರರಾಜನೂ ಒಪ್ಪಿಕೊಳ್ಳಬಹುದು, ಅನ್ನಲು, ಉಪಗುಪ್ತಾಚಾರ್ಯರೇ ಮೊದಲಾದ ಭಿಕ್ಷುಮಂಡಲಕ್ಕೆ ಗಾಳಿಯನ್ನು ಬೀಸುತ್ತನಿಂತಿದ್ದ ಮೃಗೇಂದ್ರನು— ತ್ರಿಕಾಲಜ್ಞಾನಿಗಳಾದ ಮಹಾಮಹಿಮರೇ ಒಪ್ಪಿಕೊಳ್ಳುತ್ತಿರುವ ಮಾತಿಗೆ, ಪಾಮರನಾದ ನಾನು ಒಪ್ಪಿಕೊಳ್ಳದಿರುವದು ಹೇಗೆ? ಎಂದು ನುಡಿದನು.

ಆಗ ಅಲ್ಲಿ ನೆರೆದವರಿಗೆಲ್ಲ ಪರಮಾನಂದವಾಯಿತು. ಪ್ರಣಯಿನಿಯೂ, ಇಂದಿರೆಯೂ ತಮ್ಮ ಜನ್ಮಗಳು ಸಫಲವಾದವೆಂದು ತಿಳಿದರು. ಅಶೋಕ-ಜಿತೇಂದ್ರರೂ ಯೋಗ್ಯ ಪತ್ನೀಪ್ರಾಪ್ತಿಗಾಗಿ ತಮ್ಮನ್ನು ಧನ್ಯರೆಂದು ಭಾವಿಸಿದರು!!

# ೧೮ನೆಯ ಪ್ರಕರಣ, ನಿರ್ವಾಣಸ್ಥಿತಿ.

ಅಶೋಕನು ಈ ಮೇರೆಗೆ, ಗಂಡಾಂತರದಿಂದ ಪಾರಾಗಿ ಪ್ರಣಯಿನಿಯನ್ನು ಲಗ್ನ ಮಾಡಿಕೊಂಡು ಸಂಸಾರಸುಖವನ್ನು ಭೋಗಿಸಹತ್ತಿದನು. ಪ್ರಣಯಿನಿಯ ಹೊರತು ಅಶೋಕನಿಗೆ ಕೆಲವು ಜನ ಹೆಂಡಿರಿದ್ದರು. ಅವರಲ್ಲಿ ಕೆಲವರ ಹೊಟ್ಟೆಯಲ್ಲಿ ಮಕ್ಕಳೂ ಆಗಿದ್ದವು; ಆದರೆ ಪ್ರಣಯಿನಿಯಿಂದ ಆತನಿಗೆ ನಿಜವಾದ ಸಂಸಾರಸುಖವು ಪ್ರಾಪ್ತವಾದಂತೆ, ಬೇರೆ ಯಾರಿಂದಲೂ ಆಗಲಿಲ್ಲ. ಯಾಕಂದರೆ, ಕಲಿಂಗವಿಜಯದಿಂದ ಆತನಲ್ಲಿ ಪಶ್ಚಾತ್ತಾಪವು ಉತ್ಪನ್ನವಾಗುವವರೆಗೆ ಆತನ ಕ್ರೂರಸ್ವಭಾವವು ಅಳಿದಿದ್ದಿಲ್ಲ. ಕೋಮಲಾಂತಃಕರಣವೇ ನಿಜವಾದ ಪ್ರೇಮದ ವಾಸಸ್ಥಾನವಾಗಿರುವದು; ಅದರಿಂದ ಪ್ರಣಯಿನಿಯ ಸಹವಾಸವಾದಂದಿನಿಂದಲೇ ಆತನ ಹೃದಯದಲ್ಲಿ ನಿಜವಾದ ಪ್ರೇಮೋದಯವಾಯಿತೆಂದು ಹೇಳಬಹುದು. ಇತ್ತ ಕಲಿಂಗದರಾಜನಾದ ಮೃಗೇಂದ್ರನಿಗೆ ಆತನ ರಾಜ್ಯವು ಪ್ರೇಮಪೂರ್ವಕವಾಗಿ ಕೊಡಲ್ಪಟ್ಟು, ದೃಢಮೈತ್ರಿಯು ಸಂಪಾದಿಸಲ್ಪಟ್ಟಿತು. ಜಿತೇಂದ್ರನೊಡನೆ ಇಂದಿರೆಯ ವಿವಾಹವಾಯಿತು. ಕಲಿಂಗದ ರಾಜ್ಯವು ಪುನಃ ವೈದಿಕಧರ್ಮದವರ ಕೇಂದ್ರಸ್ಥಾನವಾಗಿ, ಜಿತೇಂದ್ರನ ಆಳಿಕೆಯಿಂದ ಅದು ಪುರೋವೃದ್ಧಿಯನ್ನು ಹೊಂದಿತು. ಇವೆರಡು ರಾಜ್ಯಗಳನಡುವೆ ಆದ ಶರೀರಸಂಬಂಧದಿಂದ ಬೌದ್ಧರಿಗೂ ಆರ್ಯರಿಗೂ ಪ್ರೇಮದಬಳಿಕೆಯಾಗಿ, ಉಭಯ ಧರ್ಮದವರಲ್ಲಿಯೂ ಸ್ನೇಹಭಾವವು ಬೆಳೆಯಹತ್ತಿತು. ಅಶೋಕನು ಮಹಾಸಭೆಯ ಯೋಗದಿಂದ ನಿಜ-

ಪಾದ ಧರ್ಮಗುರುಗಳನ್ನು ಆರಿಸಿದ್ದಲ್ಲದೆ, "ತ್ರಿಪಿತಿಕ" ಎಂಬ ಹೆಸರಿನ ಶಾಸ್ತ್ರ ಗ್ರಂಥದ ಸಂಶೋಧನವನ್ನು ಮಾಡಿಸಿದನು. ತ್ರಿಪಿತಕವೆಂದರೆ, ಮೂರು ಗ್ರಂಥಗಳ ಸಮುದಾಯವು. ಇದರಲ್ಲಿ ಬುದ್ಧನ ಮರಣನಂತರ ಮಹಾಕಾಶ್ಯ ಪನೆಂಬವನು ಸಭೆಗೂಡಿಸಿ ಗೊತ್ತುಮಾಡಿದ ಧರ್ಮಸೂತ್ರಗಳು, ವಿನಯ, ಅಭಿಧರ್ಮ ಎಂಬ ಮೂರು ಗ್ರಂಥಗಳ ಸಮಾವೇಶವಾಗುತ್ತದೆ. ಅಶೋಕನ ಧರ್ಮಬುದ್ಧಿಯು ದಿನದಿನಕ್ಕೆ ಅಭಿವೃದ್ಧವಾಗುತ್ತಹೋಯಿತು. ಆತನ ಕ್ರೂರಸ್ವಭಾವವು ತೀರ ಅಳಿದುಹೋಗಿ, ಆತನು ಶಾಂತಮೂರ್ತಿಯಾದನು. ತನ್ನ ಕುರೂಪವನ್ನು ಆಡಿಕೊಂಡದ್ದಕ್ಕಾಗಿ ತನ್ನ ಹೆಂಡಿರನ್ನು ದರದರ ಎಳಿಸಿ ಬೆಂಕಿಯಲ್ಲಿ ಕೆಡವಿಸಿ ಸುಟ್ಟಿದ್ದ ಅಶೋಕನು, ಮುಂದೆ ಶಾಂತನಾದ ಬಳಿಕ ತನ್ನ ತಿಷ್ಯರಕ್ಷಿತೆಯೆಂಬ ಹೆಂಡತಿಯು, ತಾನು ಧ್ಯಾನಸ್ಥನಾಗಿ ಕುಳಿತು ಕೊಳ್ಳುತ್ತಿದ್ದ ಬೋಧಿವೃಕ್ಷವನ್ನು ಕಡಿಸಿದಾಗ ಹೆಂಡತಿಯ ಹೆಸರು ತೆಗೆಯ ಲಿಲ್ಲ! ಅಶೋಕನು ಬೌದ್ಧಧರ್ಮದ ಅಭಿವೃದ್ಧ್ಯರ್ಥವಾಗಿ ಹಲವು ಪ್ರಯತ್ನಗ ಳನ್ನು ಮಾಡಿದನು. ಆತನ ಧರ್ಮೋಪದೇಶಕರು ಭರತಖಂಡದ ಹೊರಗಿನ ದೂರದೂರದ ದೇಶಗಳಿಗೂ ಹೋಗಿದ್ದರು.

ಅಶೋಕನಿಗೆ ಸಂಸಾರಸುಖವು ಪ್ರಾಪ್ತನಾಗಲಿಲ್ಲೆಂದು ಹೇಳಬಹುದು. ಆತನಿಗೆ ಬೇರೆಬೇರೆ ಹೆಂಡಿರಲ್ಲಿ ಕೆಲವು ಗಂಡುಮಕ್ಕಳೂ, ಹೆಣ್ಣುಮಕ್ಕಳೂ ಇದ್ದರು. ಅವರಲ್ಲಿ ಮಹಿಂದ, ಕುನಾಲರೆಂಬ ಗಂಡುಮಕ್ಕಳೂ, ಸಂಗಮಿ ತ್ರಾಯೆಂಬ ಹೆಣ್ಣುಮಗಳೂ ಪ್ರಸಿದ್ಧರಾದವರು. ಮಹಿಂದನೂ, ಸಂಗಮಿ ತ್ರೆಯೂ ತಾರುಣ್ಯದಲ್ಲಿಯೇ ಭಿಕ್ಷು-ಭಿಕ್ಷುಣಿಯರಾಗಿ, ಸಿಂಹಲದ್ವೀಪದಲ್ಲಿ ಬೌದ್ಧಧರ್ಮವನ್ನು ಬೆಳಿಸಿ ಶಾಶ್ವತಕೀರ್ತಿಯನ್ನು ಸಂಪಾದಿಸಿದರು. ಆಗಿನ ಸಿಂಹಲದ್ವೀಪದ ಅರಸನು ತಿಷ್ಯನೆಂಬವನು ಇದ್ದನು. ಆತನು ಅಶೋಕನ ಕೀರ್ತಿಯನ್ನು ಕೇಳಿ, ತಾನೂ ಅವನಂತೆ ಆಗಬೇಕೆಂಬ ಈರ್ಷೆಯಿಂದ, ತನ್ನನ್ನು " ದೇವಾನಾಂಪ್ರಿಯ " ಅಥವಾ " ಪ್ರಿಯದರ್ಶಿ " ಎಂದು ಅನ್ನಿಸಿ ಕೊಳ್ಳುತ್ತಿದ್ದನು. ಅಶೋಕನು ಸಿಂಹಲದ್ವೀಪದಲ್ಲಿ ಬೌದ್ಧಧರ್ಮವನ್ನು ಹಬ್ಬಿಸುವದಕ್ಕಾಗಿ ಮಹಿಂದನನ್ನು ಕಳಿಸಿದನೆಂದು ಹೇಳಿದೆಯಷ್ಟೇ? ಅಶೋ ಕನ ವಿಷಯವಾಗಿಯೂ, ಬೌದ್ಧಧರ್ಮದ ವಿಷಯವಾಗಿಯೂ ತುಂಬಾ

ಭಕ್ತಿಯುಳ್ಳ ತಿಷ್ಯನು, ಮಹಿಂದನನ್ನು ತುಂಬಾ ಪ್ರೀತಿಸಿ, ಆತನಿಂದ ಬೌದ್ಧ ಧರ್ಮದ ದೀಕ್ಷೆಯನ್ನು ಹೊಂದಿದನು. ಆಗ ಆತನ ಹೆಂಡತಿಯಾದ ಅನುಲೆಯೂ, ಆಕೆಯ ಸಖಿಯೂ ತಮಗೆ ಬೌದ್ಧ ಧರ್ಮದ ದೀಕ್ಷೆಯನ್ನು ಕೊಡಿರೆಂದು ಕೇಳಿದರು. ಅದಕ್ಕೆ ಮಹಿಂದನು ಸ್ತ್ರೀಯರಿಗೆ ದೀಕ್ಷೆಕೊಡುವ ಅಧಿಕಾರವು ತನಗಿಲ್ಲೆಂದು ಹೇಳಿ, ತನ್ನ ತಂಗಿಯಾದ ಸಂಗಮಿತ್ರೆಯನ್ನು ಕರಿಸಿಕೊಂಡು, ಆಕೆಯಿಂದ ಅವರಿಬ್ಬರು ಸ್ತ್ರೀಯರಿಗೆ ಭಿಕ್ಷುಣಿಯರ ದೀಕ್ಷೆಯನ್ನು ಕೊಡಿಸಿದನು. ಬರಬರುತ್ತ ಸಿಂಹಲದ್ವೀಪದಲ್ಲಿ ಬೌದ್ಧ ಧರ್ಮವು ಭರದಿಂದ ಹಬ್ಬಹತ್ತಿತು. ಮಹಿಂದನ ಪ್ರಯತ್ನದಿಂದ ಸಿಂಹಲದ್ವೀಪದಲ್ಲಿ ಇಷ್ಟು ಯಶಸ್ಸು ಪ್ರಾಪ್ತವಾಗಲಿಕ್ಕೆ, ಸಿಂಹಲದ್ವೀಪದ ರಾಜನಾದ ತಿಷ್ಯನ ಪ್ರೀತಿಯು ಅಶೋಕನ ಮೇಲೆ ಇದ್ದದ್ದೇ ಕಾರಣವೆಂದು ತಿಳಿಯಲಾಗದು. ಮಹಿಂದನು ತಾನು ರಾಜಪುತ್ರನಿದ್ದು ಧರ್ಮದ ವಿಷಯವಾಗಿ ವ್ಯಕ್ತಮಾಡಿದ ಪೂಜ್ಯಬುದ್ಧಿಯೂ, ಸ್ವಾರ್ಥತ್ಯಾಗವೂ, ಆತನ ಶಾಂತವೂ, ಗಂಭೀರವೂ ಆದವೃತ್ತಿಯೂ, ವಿಲಕ್ಷಣವಾದ ಬುದ್ಧಿಸಾಮರ್ಥ್ಯವೂ, ಆಲೌಕಿಕ ಸ್ಮರಣಶಕ್ತಿಯೂ, ಜ್ಞಾನಲಾಲಸೆಯೂ, ಸದಾಚರಣತತ್ಪರತೆಯೂ ಜನರ ಹೃದಯದಲ್ಲಿ ಬೌದ್ಧ ಧರ್ಮದ ತತ್ವಗಳನ್ನು ಸ್ಥಿರವಾಗಿ ಬಿಂಬಿಸಲಿಕ್ಕೆ ಕಾರಣವಾದವು. ಅನುಕ್ರಮವಾಗಿ ಇಪ್ಪತ್ತು ಹತ್ತೊಂಬತ್ತು ವರ್ಷದ ವಯಸ್ಸುಳ್ಳ ಆ ಅಣ್ಣತಂಗಿಯರಿಬ್ಬರ ಮುಖದಿಂದ ಹೊರಡುವ ಶೀತಲವೂ, ಮಧುರವೂ, ಭಕ್ತಿರಸಪರಿಪ್ಲುತವೂ ಆದ ಉಪದೇಶಾಮೃತವನ್ನು ಆಕಂಠಪಾನ ಮಾಡಿ ತೃಪ್ತರಾಗಬೇಕೆಂದು ಯಾರು ಇಚ್ಛಿಸಲಿಕ್ಕಿಲ್ಲ? ಈ ಇಬ್ಬರು ಅಣ್ಣತಂಗಿಯರನ್ನು ನೋಡಿ, ಜನರು ಸಾಕ್ಷಾತ್ ಪರಮೇಶ್ವರನು ಮನುಷ್ಯಜಾತಿಯ ಉದ್ಧಾರಕ್ಕಾಗಿ ತನ್ನ ದೂತರನ್ನು ಕಳುಸಿರಬಹುದೋ, ಎಂದು ಭಾವಿಸಿದ್ದು ಆಶ್ಚರ್ಯವಲ್ಲ.

ಈಮೇರೆಗೆ ಅಶೋಕನ ಇಬ್ಬರು ಸದ್ಗುಣಿಗಳಾದ ಮಕ್ಕಳು, ಭಿಕ್ಷು-ಭಿಕ್ಷುಣಿಯರಾಗಿ ಧರ್ಮೋಪದೇಶಮಾಡಹತ್ತಿದ್ದಲ್ಲದೆ, ಕುನಾಲನೆಂಬ ಮತ್ತೊಬ್ಬ ಚಲುವಮಗನು ಸಂಸಾರಸುಖವನ್ನು ಭೋಗಿಸದೆ, ಭಯಂಕರ ದುಃಖಭೋಗಿಸಿದ್ದನ್ನು ಅಶೋಕನು ಕಣ್ಣುಮುಟ್ಟಿ ನೋಡಬೇಕಾಯಿತು.

ಕುನಾಲನು ಬಹು ರೂಪಸಂಪನ್ನನಾದದ್ದರಿಂದ, ಅಶೋಕನ ಹೆಂಡತಿಯಾದ ತಿಷ್ಯರಕ್ಷಿತೆಯ ದೃಷ್ಟಿಯು ಆತನ ಮೇಲೆ ಕೂತಿತು; ಆದರೆ ಕುನಾಲನು ಮಹಾ ಪಾಪಭೀರುವೂ, ಸದಾಚಾರಿಯೂ ಇದ್ದನು. ಆತನು ತಿಷ್ಯರಕ್ಷಿತೆಯ ದುರಾಲೋಚನೆಗೆ ಕಿವಿಗೊಡಲಿಲ್ಲ. ಅದರಿಂದ ಆ ದುಷ್ಟರಾಣಿಯು ಗಂಡನಮುಂದೆ ಇಲ್ಲದ್ದೊಂದು ಹೇಳಿ, ಕುನಾಲನನ್ನು ತಕ್ಷಶಿಲೆಯ ಸುಬೇದಾರಿಕೆಯಮೇಲೆ ಕಳಿಸಿಕೊಟ್ಟಳು. ಮುಂದೆ ಆ ಮತ್ಸರ ಸ್ವಭಾವದ ರಾಣಿಯು ಯುಕ್ತಿಯಿಂದ ಚಕ್ರವರ್ತಿಯ ಮುದ್ರೆಯನ್ನು ಸಂಪಾದಿಸಿ, ಕುನಾಲನ ಕಣ್ಣುಕಿತ್ತಿಸಿ ಹೊರಹೊರಡಿಸಲಿಕ್ಕೆ ಚಕ್ರವರ್ತಿಯೇ ಇಜ್ಞಾಪಿಸಿದಂತೆ ತಕ್ಷಶಿಲೆಯ ಒಬ್ಬ ಅಧಿಕಾರಿಗೆ ಆಜ್ಞಾಪತ್ರವನ್ನು ಕಳಿಸಿದಳು. ಕುನಾಲನು ಮಹಾ ಸದ್ಗುಣಿಯು, ಲೋಕಪ್ರಿಯನು. ಆತನ ಕಣ್ಣುಕಿತ್ತಲಿಕ್ಕೆ ಯಾರೂ ಒಪ್ಪದಾದರು. ಆಗ ಪಿತೃಭಕ್ತನಾದ ಕುನಾಲನು ತನ್ನ ಕಣ್ಣುಕಿತ್ತಿದವರಿಗೆ ಇಂತಿಷ್ಟು ಇನಾಮುಕೊಡುವೆನೆಂದು ಪ್ರಸಿದ್ಧಮಾಡಿದನು. ಇದನ್ನರಿತು ಒಬ್ಬ ಚಾಂಡಾಲನು ಕುನಾಲನ ಒಂದು ಕಣ್ಣುಕಿತ್ತಿ ಕುನಾಲನ ಕೈಯಲ್ಲಿ ಕೊಡಲು, ಆ ರಾಜಪುತ್ರನು ಅದನ್ನು ಕೈಯಲ್ಲಿ ಹಿಡಕೊಂಡು—ಎಲೈ ಹತಭಾಗ್ಯನಾದ ಮಾಂಸಪಿಂಡವೇ, ನೀನು ಇಲ್ಲಿಯವರೆಗೆ, ಸುಂದರಮೂರ್ತಿಗಳನ್ನು ನೋಡುತ್ತಿದ್ದೆಯಲ್ಲ, ಇನ್ನು ಅವು ನಿನಗೆ ಕಾಣುವವೋ? ನಿನ್ನನ್ನು ನಾನು "ನನ್ನದು ನನ್ನದು" ಎಂದು ತಿಳಿಯುತ್ತಿದ್ದೆನು, ಹಾಯ್ ಹಾಯ್! ಎಂಥ ತಪ್ಪುತಿವಳಿಕೆಯಿದು! ಎಂದುನುಡಿಯುತ್ತಿರಲು, ಎರಡನೆಯ ಕಣ್ಣನ್ನೂ ಚಾಂಡಾಲನು ಕಿತ್ತಿದನು. ಆಗ ಕುನಾಲನು—ಎಲ್ಲ ಪಾಪಗಳು ಕಣ್ಣಿನಿಂದಲೇ ಆಗುತ್ತಿದ್ದದ್ದರಿಂದ, ಅವು ಹೋದದ್ದಕ್ಕಾಗಿ ನಾನು ಸಮಾಧಾನವನ್ನು ಪಡತಕ್ಕದ್ದು. ಚರ್ಮಚಕ್ಷುಗಳು ಹೋಗಿ ಜ್ಞಾನಚಕ್ಷುಗಳು ಪ್ರಾಪ್ತವಾದದ್ದೇನು ಸಾಮಾನ್ಯಲಾಭವೇ? ರಾಜನು ನನ್ನ ತ್ಯಾಗಮಾಡಿದರೂ, ಧರ್ಮರಾಜನು ನನ್ನನ್ನು ಮಗನೆಂದು ಅಪ್ಪಿಕೊಂಡಿರುವನು. ಈ ಕಷ್ಟಮಯ ರಾಜ್ಯದೊಳಗಿನ ಉಚ್ಚಪದವಿಯಿಂದ ನಾನು ಭ್ರಷ್ಟನಾದದ್ದು ನಿಜವು; ಆದರೆ ಆನಂದಮಯವಾದ ಧರ್ಮರಾಜ್ಯದಲ್ಲಿ ನನ್ನ ಪ್ರವೇಶವಾಗಿರುತ್ತದೆ.

ಆಮೇಲೆ ಕುನಾಲನು ಹೆಂಡತಿಯೊಡನೆ ಮನೆಯಿಂದ ಹೊರಟು ಭಿಕ್ಷೆ

ಬೇಡುತ್ತ ಪಾಟಲಿಪುತ್ರರಾಜಧಾನಿಗೆ ಬಂದನು. ವೀಣಾನಾದದೊಡನೆ ಮಿಲಿತವಾದ ಆತನ ಕಂಠಧ್ವನಿಯನ್ನು ಕೇಳಿ, ಅಶೋಕನು ಆತನನ್ನು ತಾನಿದ್ದಲ್ಲಿಗೆ ಕರಿಸಿಕೊಂಡು ಆತನ ವೃತ್ತಾಂತವನ್ನು ಕೇಳಿದನು. ಆಗ ಸತ್ಯವಾದಿಯಾದ ಕುನಾಲನು ಎಲ್ಲ ವೃತ್ತಾಂತವನ್ನು ಹೇಳಲು, ಅರಸನು ದುಃಖಪಟ್ಟು ರಾಣಿಯ ಮೇಲೆ ಸಿಟ್ಟಾಗಿ ಆಕೆಯ ತಲೆಹೊಡಿಸಬೇಕೆಂದು ಮಾಡಿದನು. ಆಗ ಕುನಾಲನು ತಂದೆಗೆ ಸಾಷ್ಟಾಂಗನಮಸ್ಕಾರವನ್ನುಮಾಡಿ ಆತನನ್ನು ಕುರಿತು—ಮಹಾರಾಜ, ಸ್ತ್ರೀವಧವು ಎಂದಿಗೂ ನ್ಯಾಯವಾಗದು. ಸ್ತ್ರೀಹತ್ಯವು ಮಹತ್ಪಾಪದಲ್ಲಿ ಗಣಿಸಲ್ಪಟ್ಟಿರುವದು. ಅಪರಾಧಿಗಳಮೇಲೆ ದಯಮಾಡುವದಕ್ಕಿಂತ ಹೆಚ್ಚಿನ ಔದಾರ್ಯವಿಲ್ಲೆಂದು ತಥಾಗತವರ್ಯನ ವಚನವಿರುವದು, ಎಂದು ತಂದೆಯ ಚರಣಗಳಮೇಲೆ ಪುನಃ ಮಸ್ತಕವನ್ನಿಟ್ಟು—ಪ್ರಭುಗಳೇ, ಕಣ್ಣುಗಳು ಹೋದಬಗ್ಗೆ ನನಗೆ ಸ್ವಲ್ಪವಾದರೂ ವಿಷಾದವಾಗುವದಿಲ್ಲ; ಅದರ ಯೋಗದಿಂದ ನನಗೆ ಯಾತನೆಯೂ ಆಗುವದಿಲ್ಲ; ಆದ್ದರಿಂದ ಕೃಪೆಮಾಡಿ ಮಾತುಃಶ್ರೀಯವರ ಮೇಲೆ ನನ್ನ ಸಲುವಾಗಿ ಸಿಟ್ಟಾಗಬಾರದು. ಈ ಭೋಗವು ನನ್ನ ಪ್ರಾರಬ್ಧದಲ್ಲಿತ್ತು. ಅದು ನನ್ನ ಪ್ರಾಕ್ತನದ ದೋಷವು. ಪೂರ್ವಜನ್ಮದಲ್ಲಿ ಪಾಪಮಾಡಿದ್ದರಿಂದ ಈ ಜನ್ಮದಲ್ಲಿ ಅದನ್ನು ನಾನು ಭೋಗಿಸುತ್ತೇನೆ. ನಾನು ಸತ್ಯವನ್ನು ನುಡಿಯುವೆನು. ನನ್ನ ಮಾತಿನಮೇಲೆ ನಿಮ್ಮ ವಿಶ್ವಾಸವಾಗದಿದ್ದರೆ, ಎಲೈ ಕಣ್ಣುಗಳೇ, ನೀವು ಮೊದಲಿನ ಹಾಗೆ ಆಗಿರಿ, ಎಂದು ನುಡಿದಕೂಡಲೆ ಕಣ್ಣುಗಳು ಮೊದಲಿನಂತೆ ಆದವು!

ಈಮೇರೆಗೆ ಅಶೋಕನು ಮಕ್ಕಳಿಂದ ದುಃಖಪಟ್ಟದ್ದಲ್ಲದೆ, ತನ್ನ ಪ್ರಿತಿಯ ತಮ್ಮನಾದ ವೀತಾಶೋಕನಿಂದಲೂ ಅಗಾಧವಾದ ದುಃಖವನ್ನು ಭೋಗಿಸಿದನು. ವೀತಾಶೋಕನು ಭಿಕ್ಷುವಾದದ್ದನ್ನು ವಾಚಕರು ಬಲ್ಲರಷ್ಟೆ? ಈ ಕಾಲದಲ್ಲಿ ನಿಗ್ರಂಥ ಎಂಬ ಬೇರೊಂದು ಧರ್ಮಪಂಥವು ಪ್ರಚಾರದಲ್ಲಿತ್ತು. ಆಧರ್ಮದೊಳಗಿನವನೊಬ್ಬನು ಬೌದ್ಧಧರ್ಮವನ್ನು ನಿಂದಿಸಹತ್ತಿದನು. ಆತನು ತಾನು ಒಂದು ಉಚ್ಚಾಸನದ ಮೇಲೆ ಕುಳಿತುಕೊಂಡು, ತನ್ನ ಚರಣಗಳ ಮೇಲೆ ಬುದ್ಧನು ಉರುಳಾಡುವಂತೆ ಚಿತ್ರಗಳನ್ನು ಬರೆಸಿ ಪಂಡುವರ್ಧನ ಪ್ರಾಂತದಲ್ಲಿ ಅವನ್ನು ಹಂಚಿಸಿದ್ದನು. ಇದರಿಂದ ಅಶೋಕನಿಗೆ ತ್ವೇಷವು

ಉತ್ಪನ್ನವಾಗಿ, ಆತನು ಆ ದುಷ್ಟನಿಂದಕನ ಶಿರಚ್ಛೇದಮಾಡಲಿಕ್ಕೆ ದೊಡ್ಡ ಇನಾಮುಇಟ್ಟನು. ಆಗ ಒಬ್ಬ ಅಮೀರನು ಇನಾಮಿನ ಆಶೆಯಿಂದ ವೀತಾಶೋಕನನ್ನೇ ನಿಗ್ರಂಥಿಯೆಂದು ತಿಳಿದು ಆತನ ಕುತ್ತಿಗೆಯನ್ನು ಕೊಯ್ದು ಚಕ್ರವರ್ತಿಗೆ ಒಪ್ಪಿಸಿದನು. ಅದನ್ನು ನೋಡಿ ಅಶೋಕನಿಗೆ ಪರಮಾವಧಿ ದುಃಖವಾಯಿತು. ಆತನು ಹೃದ್ರೋಗವನ್ನು ಹಚ್ಚಿಕೊಂಡಂತೆ ಮಾಡಲು, ಉಪಗುಪ್ತಾಚಾರ್ಯರು ಬೋಧದಿಂದ ಆತನನ್ನು ಶಾಂತಗೊಳಿಸಿದರು.

ಅಶೋಕನಿಗೆ ವೃದ್ಧಾಪ್ಯಕಾಲವು ಪ್ರಾಪ್ತವಾಯಿತು ಮೇಲೆ ಹೇಳಿದ ಅನಂತದುಃಖಗಳ ಯೋಗದಿಂದ ಆತನ ಶರೀರವು ಕ್ಷೀಣವಾಯಿತು. ಆತನಿಗೆ ಪಟ್ಟರಾಣಿಯ ಹೊಟ್ಟೆಯಲ್ಲಿ ಮಕ್ಕಳಿದ್ದಿಲ್ಲ. ಕುನಾಲನ ಮಗನಾದ ಸಂಪದಿಯೆಂಬವನೊಬ್ಬನು ಉಳಿದಿದ್ದನು. ಮುಪ್ಪಿನಕಾಲದಲ್ಲಿ ತನ್ನವರೆನ್ನುವವರು ಚಕ್ರವರ್ತಿಗೆ ಯಾರೂ ಇಲ್ಲದಂತಾಗಿತ್ತು. ಇಂಥ ದೊಡ್ಡ ಚಕ್ರವರ್ತಿಯು ಅವಸಾನಗೆಟ್ಟನು. ಆತನಲ್ಲಿ ಸಂಸಾರಸಂಬಂಧದ ವೈರಾಗ್ಯವು ಉತ್ಪನ್ನವಾಯಿತು. ಕಡೆಗೆ ಆತನು ಭಿಕ್ಷುವ್ರತವನ್ನು ಸ್ವೀಕರಿಸಿದನು. ಒಂದು ದಿನ ಉಪಗುಪ್ತಾಚಾರ್ಯರನ್ನು ಕುರಿತು—ಸ್ವಾಮಿ, ಈವರೆಗೆ ಬೌದ್ಧರಲ್ಲಿ ಎಲ್ಲಕ್ಕೂ ಹೆಚ್ಚಿಗೆ ದಾನಧರ್ಮವನ್ನು ಯಾರು ಮಾಡಿದರು, ಎಂದು ಕೇಳಲು, ಉಪಗುಪ್ತನು—ಭಗವನ್, ಅನಾಥ ಪಿಂಡಿಕನೆಂಬ ಹೆಸರಿನ ಗೃಹಸ್ಥನು ಹೆಚ್ಚುದಾನಮಾಡಿದ್ದಾನೆ. ಈತನು ಸ್ರವಸ್ತಿ ಎಂಬ ನಗರದಲ್ಲಿರುತ್ತಿರುವಾಗ, ಅಲ್ಲಿಗೆ ಶ್ರೀಬುದ್ಧದೇವನು ದಯಮಾಡಿಸಿದನು. ಆತನಿಗೆ ಇರುವದಕ್ಕಾಗಿ ಅನಾಥಪಿಂಡಿಕನು ಜೇವವನವೆಂಬ ಹೆಸರಿನ ತನ್ನ ವಿಸ್ತಾರವಾದ ಸುಂದರ ಉದ್ಯಾನವನ್ನೇ ಕೊಟ್ಟನು. ಬುದ್ಧದೇವನು ಚಾತುರ್ಮಾಸದಲ್ಲಿ ಇದೇ ಉದ್ಯಾನದೊಳಗೆ ತನ್ನ ಶಿಷ್ಯಪರಿವಾರದೊಡನೆ ಇರುತ್ತಿದ್ದನು. ಅನಾಥಪಿಂಡಿಕನು ಒಟ್ಟಿಗೆ ಇಂದಿಗೆ ನೂರುಕೋಟಿ ಸುವರ್ಣಮುದ್ರಿಕೆಗಳನ್ನು ದಾನಮಾಡಿದ್ದಾನೆ, ಎಂದು ಹೇಳಿದನು. ಅದನ್ನು ಕೇಳಿ ಅಶೋಕನು ಗುರುಗಳನ್ನು ಕುರಿತು—ಸರಿಸರಿ. ನಾನಾದರೂ ನೂರು ಕೋಟಿ ಸುವರ್ಣಮುದ್ರಿಕೆಗಳ ದಾನಮಾಡುತ್ತೇನೆ, ಸ್ವೀಕರಿಸಬೇಕು. ನಾನು ಈವೊತ್ತಿನವರೆಗೆ ೮೪೦೦೦ ಸ್ತೂಪಗಳನ್ನೂ, ವಿಹಾರಗಳನ್ನೂ ಕಟ್ಟಿಸಿದೆನು.

ಆ ಪ್ರತಿಒಂದು ಸ್ತೂಪದ ಪ್ರೀತ್ಯರ್ಥವಾಗಿ ಒಂದೊಂದುಲಕ್ಷ ಸುವರ್ಣಮುದ್ರಿಕೆಗಳನ್ನು ನಾನು ಕೊಡುವೆನು. ಅದರಂತೆ, ಶಾಕ್ಯಗೌತುಮನು ಹುಟ್ಟಿದ ಸ್ಥಳದ ಸಲುವಾಗಿಯೂ, ಆತನು ಬುದ್ಧನಾದ ಸ್ಥಳದ ಸಲುವಾಗಿಯೂ, ಆತನು ಧರ್ಮೋಪದೇಶಮಾಡಿದ ಸ್ಥಳದ ಸಲುವಾಗಿಯೂ, ಕಡೆಗೆ ಆತನು ನಿರ್ವಾಣವನ್ನು ಹೊಂದಿದ ಸ್ಥಳದಸಲುವಾಗಿಯೂ, ಒಂದೊಂದುಲಕ್ಷ ಸುವರ್ಣಮುದ್ರಿಕೆಗಳನ್ನು ಕೊಡುವೆನು. ಯಾವತ್ತು ಭಿಕ್ಷು-ಭಿಕ್ಷುಣಿಗಳು ಚಾತುರ್ಮಾಸ್ಯದಲ್ಲಿ ನನ್ನ ಬಳಿಗೆಬಂದು, ನನ್ನ ಆತಿಥ್ಯವನ್ನು ಸ್ವೀಕರಿಸಬೇಕೆಂದು ನಾನು ಪ್ರಾರ್ಥಿಸುವೆನು. ಅದರ ವೆಚ್ಚಕ್ಕಾಗಿ ನಾನು ನಾಲ್ಕುಲಕ್ಷ ಮುದ್ರಿಕೆಗಳನ್ನು ತೆಗೆದಿಡುವೆನು. ಅದರಂತೆ ಮೂರು ಸಾವಿರ ಭಿಕ್ಷುಗಳ ಪರಿಪಾಲನವು ಯಾವಾಗಲೂ ಆಗುವಂತೆ ವ್ಯವಸ್ಥೆಮಾಡಿ ಇಡುವೆನು. ಮತ್ತು ನನ್ನ, ಹಾಗು ನನ್ನ ಹೆಂಡಿರುಮಕ್ಕಳ ಸ್ವಂತದ ಭೂಮಿಯ ಆಸ್ತಿಯನ್ನೆಲ್ಲ ನಾನು ದಾನಮಾಡಿರುವೆನೆಂದು ತಿಳಿಯಬೇಕು; ಯಾಕಂದರೆ, ರೋಖ ಮುದ್ರಿಕೆಗಳ ಮೇಲೆ ಮಾತ್ರ ನನ್ನ ಹಕ್ಕು ಇರುವದು. ಆ ದಾನಮಾಡಿದ ಭೂಮಿಯನ್ನು ನಾಲ್ಕುಲಕ್ಷ ರೂಪಾಯಿಕೊಟ್ಟು ಪುನಃ ಕೊಂಡುಕೊಂಡಿದ್ದೇನೆ. ಒಟ್ಟಿಗೆ, ಇಲ್ಲಿಯವರೆಗೆ ನಾನು ೯೬ ಕೋಟಿ ಸುವರ್ಣಮುದ್ರಿಕೆಗಳ ದಾನಮಾಡಿರುವೆನು.

ಈಮೇರೆಗೆ ಅಶೋಕನು ತಾನು ದಾನಮಾಡಿದ್ದನ್ನೆಲ್ಲ ವರ್ಣಿಸಿ ಹೇಳುವಾಗ ಅವಸಾನಗೆಟ್ಟಂತಾಗಿ ಆತನಿಗೆ ಗ್ಲಾನಿಯು ಬಂದಿತು. ಆತನು ಕೆಲವು ಹೊತ್ತು ಸುಮ್ಮನೆ ಕುಳಿತುಕೊಂಡನು. ಇನ್ನು ನಾನು ಬಹಳ ದಿವಸ ಬದುಕುವದಿಲ್ಲೆಂದು ಆಗಲೇ ಆತನು ಉಪಗುಪ್ತಾಚಾರ್ಯರಿಗೆ ಹೇಳಿದನು. ಈ ವರ್ತಮಾನವನ್ನು ಕೇಳಿದಕೂಡಲೆ ರಾಧಾಗುಪ್ತಮಂತ್ರಿಯು ಅವಸರದಿಂದ ಚಕ್ರವರ್ತಿಯ ಬಳಿಗೆ ಬಂದನು. ಆಗ ಚಕ್ರವರ್ತಿಯ ಕಣ್ಣೊಳಗಿಂದ ನೀರುಗಳು ಧಾರೆಯಿಟ್ಟು ಸುರಿಯುತ್ತಿದ್ದವು. ಅದನ್ನು ನೋಡಿ ರಾಧಾಗುಪ್ತನು ಸಾಷ್ಟಾಂಗವಾಗಿ ವಂದಿಸಿ ಇದೇನೆಂದು ಚಕ್ರವರ್ತಿಯನ್ನು ಕೇಳಿದನು. ಅದಕ್ಕೆ ಚಕ್ರವರ್ತಿಯು—ರಾಧಾಗುಪ್ತ, ಧನ-ರಾಜ್ಯ—ಸಂಸಾರಗಳನ್ನು ಬಿಟ್ಟು ಹೋಗಬೇಕಾಗುವದೆಂದು ಈಗ ನನಗೆ ವ್ಯಸನವಾಗುವದಿಲ್ಲ

ನಾನು ಸ್ಥಾಪಿಸಿರುವ ಆರ್ಯಸಂಘದ ಚಿರಕಾಲವಿಯೋಗವಾಗುತ್ತದೆಂಬದ ಕ್ಕಾಗಿ ನನಗೆ ವ್ಯಸನವಾಗುತ್ತದೆ. ಆ ಸಂಘಕ್ಕೆ ಸಲ್ಲುತ್ತಿದ್ದ ಜೀವನಾಂಶವು ಇನ್ನುಮೇಲೆ ನನ್ನ ಕೈಯಿಂದ ಸಲ್ಲುವಹಾಗಿಲ್ಲ. ರಾಧಾಗುಪ್ತ, ಬುದ್ಧ ಪ್ರಭುವಿನ ಧರ್ಮಪ್ರಸಾರಾರ್ಥವಾಗಿ ನೂರುಕೋಟಿ ಸುವರ್ಣಮುದ್ರಿಕೆಗಳ ದಾನಮಾಡುವೆನೆಂದು ನಾನು ಸಂಕಲ್ಪಮಾಡಿದ್ದನ್ನು ನೀವು ಬಲ್ಲಿರಷ್ಟೇ?ಆದರೆ ಆ ಸಂಕಲ್ಪವನ್ನು ಪೂರ್ಣಮಾಡುವದು ಇನ್ನೂ ನನ್ನ ಕೈಯಿಂದಾಗಿರುವ ದಿಲ್ಲೆಂಬಬಗ್ಗೆ ನನಗೆ ಬಹಳ ಅಸಮಾಧಾನವಾಗುತ್ತದೆ. ೯೬ಕೋಟಿ ಸುವರ್ಣ ಮುದ್ರಿಕೆಗಳ ದಾನವನ್ನಂತು ನಾನು ಮಾಡಿಯೇ ಇರುವೆನು. ಇನ್ನು ನಾಲ್ಕು ಕೋಟಿ ಮುದ್ರಿಕೆಗಳು ಬೇಕಾಗಿರುವವು.

ಚಕ್ರವರ್ತಿಯ ಈ ಮಾತುಗಳನ್ನು ಕೇಳಿ, ರಾಧಾಗುಪ್ತನು ಬೆದ ರಿದನು. ಚಕ್ರವರ್ತಿಯ ತರುವಾಯ ಪಾಟಲಿಪುತ್ರದ ಸಿಂಹಾಸನಕ್ಕೆ ಕುನಾಲಪುತ್ರನಾದ ಸಂಪದಿಯು ಹಕ್ಕುದಾರನಾಗಿದ್ದನು. ಸಿಂಹಾಸನದ ಅಭಿಮಾನಿಯಾದ ರಾಧಾಗುಪ್ತನು ಅವಸರದಿಂದ ಸಂಪದಿಯಬಳಿಗೆ ಹೋಗಿ—ಧರ್ಮಾವತಾರವಾದ ಭಗವಾನ್ ಚಕ್ರವರ್ತಿಗಳವರು ಇನ್ನು ಬಾಳಲಾರರು. ಅವರ ತರುವಾಯ ತಾವು ಬಹುಕಾಲ ರಾಜ್ಯವಾಳತಕ್ಕ ವರು. ಈಗ ಚಕ್ರವರ್ತಿಗಳವರು ಯಾವತ್ತು ಭಾಂಡಾರವನ್ನು ಉಪಗು ಪ್ತಾಚಾರ್ಯರವರಿಗೆ ದಾನಮಾಡಿ ತೆರವು ಮಾಡುವದರಿಂದ, ನಿಮ್ಮ ರಾಜ್ಯದಾಡಳಿತಕ್ಕೆ ತೊಂದರೆಯಾಗಬಹುದು; ಆದ್ದರಿಂದ ನೀವು ಬೇಗನೆ ಎಚ್ಚತ್ತು ಚಕ್ರವರ್ತಿಗಳವರ ದಾನಕ್ಕೆ ವಿಘ್ನವನ್ನುಂಟುಮಾಡುವದು ಉಚಿತವಾಗಿ ತೋರುತ್ತದೆ, ಎಂದು ಹೇಳಿದನು. ಇದನ್ನು ಕೇಳಿ ಸಂಪ ದಿಯು ಮನಸ್ಸು ತಿರುಗಿತು. ಇನ್ನು ಚಕ್ರವರ್ತಿಗೆ ದ್ರವ್ಯವನ್ನು ಕೊಡ ಬಾರದೆಂದು ಆತನು ಮಂತ್ರಿಗಳಿಗೆ ಆಜ್ಞಾಪಿಸಿದನು. ಅಶೋಕನು ದಿನಾಲು ಸುವರ್ಣದ ಪಾತ್ರದಲ್ಲಿ ಊಟಮಾಡುತ್ತಿದ್ದನು. ಊಟವಾದ ಬಳಿಕ ಆ ಪಾತ್ರವು ಉಪಗುಪ್ತಾಚಾರ್ಯರಕಡೆಗೆ ವೇಚುವದಕ್ಕೆ ಕಳಿಸ ಲ್ಪಡುತ್ತಿತ್ತು. ಮುಂದೆ ಬರಬರುತ್ತ ಚಕ್ರವರ್ತಿಯ ಊಟಕ್ಕೆ ಭಂಗಾರದ ಪಾತ್ರದ ಬದಲು ಬೆಳ್ಳಿಯಪಾತ್ರವು ಬರತೊಡಗಿತು. ಚಕ್ರವರ್ತಿಯು

ಭೋಜನೋತ್ತರ ಅದನ್ನೇ ಗುರುಗಳ ಕಡೆಗೆ ಕಳಿಸಹತ್ತಿದನು. ಮುಂದೆ ಬೆಳ್ಳಿಯ ಪಾತ್ರಗಳೂ ಕಟ್ಟಾಗಿ ಚಕ್ರವರ್ತಿಯು ಮಣ್ಣಿನ ಪರಿವಾಣದಲ್ಲಿ ಉಣ್ಣಬೇಕಾಯಿತು. ಒಂದು ದಿನ ಮಂತ್ರಿಜನರು ಆತನ ಸಮಾಚಾರಕ್ಕಾಗಿ ಬಂದಿರಲು, ಚಕ್ರವರ್ತಿಯು ನೆಲ್ಲಿಯಕಾಯಿಯ ಅರ್ಧಹೋಳನ್ನು ಕೈಯಲ್ಲಿ ಹಿಡಕೊಂಡು ಅವರನ್ನು ಕುರಿತು—"ಮಂತ್ರಿಗಳೇ, ಈ ದೇಶದ ಅರಸನು ಯಾರು" ಎಂದು ಕೇಳಲು, ಅದಕ್ಕೆ ಮಂತ್ರಿಗಳು ವಿಸ್ಮಿತರಾಗಿ ಚಕ್ರವರ್ತಿಗೆ—"ಮಹಾರಾಜ, ಎಂಥ ಪ್ರಶ್ನವಿದು? ಈ ರಾಜ್ಯವು ತಮ್ಮದೇ ಇರುವದು" ಎಂದು ಉತ್ತರ ಕೊಟ್ಟರು. ಅದನ್ನು ಕೇಳಿ ಚಕ್ರವರ್ತಿಯ ನೇತ್ರಗಳು ಅಶ್ರುಪೂರ್ಣವಾದವು. ಆತನು ಮಂತ್ರಿಗಳನ್ನು ಕುರಿತು—ನೀವು ಸತ್ಯವನ್ನೇ ನುಡಿಯುವಿರೋ? ನಾನು ರಾಜ್ಯಭ್ರಷ್ಟನಾಗಿರುವದಿಲ್ಲವೆ? ಇಲ್ಲಿ ನೋಡಿರಿ, ನೆಲ್ಲಿಯಕಾಯಿಯ ಈ ಅರ್ಧಹೋಳಿನ ಹೊರತು ನನ್ನದೆಂಬ ಅಭಿಮಾನಕ್ಕೆ ಪಾತ್ರವಾದ ಒಂದೂ ವಸ್ತುವು ಈಗ ನನ್ನ ಬಳಿಯಲ್ಲಿ ಉಳಿದಿರುವದಿಲ್ಲ. ಸಾರ್ವಭೌಮನೆನಿಸುವ ನನ್ನ ಕೈಯಲ್ಲಿ ಮಂದಿಗೆ ಕೊಡಬೇಕೆಂದರೆ ಏನಿರುತ್ತದೆ? ಈ ಐಹಿಕಸಾಮ್ರಾಜ್ಯಕ್ಕೆ ಧಿಕ್ಕಾರವಿರಲಿ! ನೀರಿನ ಮೇಲಿನ ತರಂಗದಂತೆ ಅಸ್ಥಿರವಾಗಿದ್ದ ಈ ಪ್ರಭುತ್ವಕ್ಕೂ ಧಿಕ್ಕಾರವಿರಲಿ! ನಾನು ಜನರ ಚಕ್ರವರ್ತಿಯು; ಆದರೆ ದುಃಖವು ನನ್ನ ಮೇಲೆಯೂ ತನ್ನ ಸಾಮ್ರಾಜ್ಯವನ್ನು ನಡಿಸಿತು. ಪೃಥ್ವಿಯ ಏಕಛತ್ರ ಪ್ರಭುತ್ವವನ್ನು ಸಂಪಾದಿಸಿದವನೂ, ಹಲವು ಯುದ್ಧಗಳಲ್ಲಿ ಜಯವನ್ನು ದೊರಕಿಸಿದವನೂ, ಹಲವು ಪುಂಡಾಟಿಕೆಗಳನ್ನು ಮುರಿದವನೂ, ನಾನು ನಾನೆಂದು ಎದೆತಟ್ಟಿಕೊಳ್ಳುವ ಸಾವಿರಾರು ಜನಶೂರರನ್ನು ಜಯಿಸಿದವನೂ, ಬಡವರ ಸಂರಕ್ಷಣ ಮಾಡಿದವನೂ ಆದ ಅಶೋಕಸಾರ್ವಭೌಮನು, ರಾಜ್ಯಭ್ರಷ್ಟನಾಗಿ ದುಃಖದಿಂದ ಕಾಲಹರಣ ಮಾಡುತ್ತಿರುವನೆಂದಬಳಿಕ, ಇದಕ್ಕೂ ಹೆಚ್ಚಿನ ದೈವದುರ್ವಿಪಾಕದ ಒಡೆದುಕಾಣುವ ಉದಾಹರಣವು ಎರಡನೆಯದೆಲ್ಲಿ ದೊರೆಯಬಹುದು? ಗಿಡದ ಎಲೆಗಳೂ, ಹೂಗಳೂ ಗಿಡವನ್ನು ಹೊಂದಿರುವವರೆಗೆ ತೇಜಸ್ವಿತೆಯನ್ನು ಪಡೆದಿರುತ್ತವೆ; ಅವೇ ನೆಲಕ್ಕೆ ಬಿದ್ದರೆ ಬಾಡಿ ಅವುಗಳ ಶೋಭೆಯು

ನಷ್ಟವಾಗಿ ಹೋಗುವದು. ಅದರಂತೆಯೇ ನಮ್ಮಂಥ ಅರಸರ ಸ್ಥಿತಿಯು ಇರುತ್ತದೆಂದು ತಿಳಿಯಬೇಕು. ಗಿಡದಿಂದ ಉದುರಿಬಿದ್ದ ಪುಷ್ಪವು ಸುಗಂಧಹೀನವೂ, ಸೌಂದರ್ಯಹೀನವೂ ಆಗಿರುವಂತೆ, ರಾಜ್ಯಭ್ರಷ್ಟನಾದ ನಾನು ಶುಷ್ಕನೂ, ತೇಜೋಹೀನನೂ ಆಗಿ, ಕಾಲಹರಣ ಮಾಡುತ್ತಿರುವೆನು."

ಈ ಮೇರೆಗೆ ನುಡಿದು ಅಶೋಕನು ಬಳಿಯಲ್ಲಿದ್ದ ಮತ್ತೊಬ್ಬನನ್ನು ಕರೆದು—ಎಲೈಬಂಧುವೆ, ನಿನ್ನನ್ನು ಆಜ್ಞಾಪಿಸುವ ಅಧಿಕಾರವು ನನ್ನ ಕೈಯಲ್ಲಿರದಿದ್ದರೂ, ವಿಜ್ಞಾಪಿಸುವದಕ್ಕೆ ಪ್ರತಿಬಂಧವಿಲ್ಲ. ನನ್ನ ಈ ಕಟ್ಟಕಡೆಯ ವಿಜ್ಞಾಪನೆಯನ್ನು ಮನ್ನಿಸು. ನೀನು ವೇಣುವನಕ್ಕೆ ಹೋಗಿ ನನ್ನ ಹೆಸರಿನಿಂದ ಗುರುಗಳನ್ನು ವಂದಿಸಿ, ಈ ನೆಲ್ಲಿಯಕಾಯಿಯ ಹೋಳನ್ನು ಕೊಟ್ಟು ಅವರ ಮುಂದೆ—"ರಾಜಾಧಿರಾಜನಾದ ಅಶೋಕನ ಸಂಪತ್ತಿಯ ಇಷ್ಟೇ ಭಾಗವು ಉಳಿದಿರುತ್ತದೆ; ಅದನ್ನು ಈಗ ಆತನು ಚರಣಕ್ಕೆ ಅರ್ಪಿಸುತ್ತಾನೆ. ಈ ಹೋಳಿನ ಅಂಶವು ಸಂಘದೊಳಗಿನ ಯಾವತ್ತು ಜನರಿಗೆ ಮುಟ್ಟುವಂತೆ ಮಾಡುವ ಭಾರವು ತಮ್ಮನ್ನೇ ಕೂಡಿಯದೆ" ಎಂದು ವಿಜ್ಞಾಪಿಸು, ಎಂದು ನುಡಿದು, ಚಕ್ರವರ್ತಿಯು ರಾಧಾಗುಪ್ತನನ್ನು ಕುರಿತು—ಮಂತ್ರಿಶ್ರೇಷ್ಠನೇ, ಈ ರಾಜ್ಯದ ಸಿಂಹಾಸನದಮೇಲೆ ಈಗ ಅರಸರು ಯಾರು ಇರುವರು? ಎಂದು ಪ್ರಶ್ನೆ ಮಾಡಲು, ರಾಧಾಗುಪ್ತನು ಮೊದಲಿನಂತೆ—ಭಗವನ್, ತಾವೇ ನಮ್ಮ ಸ್ವಾಮಿಯಾಗಿದ್ದೀರಿ, ಎಂದು ಉತ್ತರಕೊಟ್ಟನು. ಅದನ್ನು ಕೇಳಿದಕೂಡಲೆ ಅಶೋಕನು ತನ್ನ ಆಸನದಿಂದ ಚಟ್ಟನೆ ಎದ್ದು ನಿಂತು ಆಕಾಶವನ್ನು ನಾಲ್ಕೂದಿಕ್ಕಿಗೆ ನೋಡಿ ಉಚ್ಚಸ್ವರದಿಂದ—ಇಂದು ನಾನು ದ್ರವ್ಯಭಾಂಡಾರವೊಂದನ್ನುಳಿದು, ಉಳಿದ ಬಹುರತ್ನಾವಸುಂಧರೆಯನ್ನು ಬುದ್ಧಸಂಘಕ್ಕೆ ಅರ್ಪಿಸಿದ್ದೇನೆ. ಈ ಪುಣ್ಯಕರ್ಮದ ಫಲವು ನನಗೆ ಪ್ರಾಪ್ತವಾಗಬೇಕೆಂದಾಗಲಿ, ಮುಂದಿನಜನ್ಮಕ್ಕೆ ರಾಜ್ಯಸುಖವು ದೊರೆಯಬೇಕೆಂದಾಗಲಿ, ಇಂಧ್ರಪದವಿಯು ಸಿಗಬೇಕೆಂದಾಗಲಿ, ಬ್ರಹ್ಮಲೋಕವು ಕೈಸೇರಬೇಕೆಂದಾಗಲಿ ನಾನು ಇಚ್ಛಿಸುವದಿಲ್ಲ.

ಇವೆಲ್ಲ ಸಂಗತಿಗಳು ನೀರಮೇಲಿನ ಗುಳ್ಳೆಯಂತೆ, ಕ್ಷಣಮಾತ್ರತೋರಿ ಅಡಗುವಂಥವು, ಅರ್ಥಾತ್‌ನಶ್ವರವಾಗಿರುತ್ತವೆ. ನನ್ನಲ್ಲಿರುವ ಧರ್ಮಶ್ರದ್ಧೆಗೆ ಪ್ರತಿಫಲವು ದೊರೆಯಬೇಕಾಗಿದ್ದರೆ, ಆತ್ಮಸಂಯಮನಮಾಡುವ ಸಾಮರ್ಥ್ಯವು ಮಾತ್ರ ನನಗೆ ಬರಲಿ. ಪೃಥ್ವಿಯ ಸಾಮ್ರಾಜ್ಯವು ಕ್ಷಣಭಂಗುರವು; ಆದರೆ ಆತ್ಮನ ಮೇಲಿನ ಸಾಮ್ರಾಜ್ಯವು ಸ್ಥಿರವಾಗಿರುತ್ತದೆ, ಎಂದು ನುಡಿದು, ಯಾವತ್ತು ಪೃಥ್ವಿಯ ದಾನಪತ್ರವನ್ನು ಬರಕೊಂಡು ಬಾರೆಂದು ರಾಧಾಗುಪ್ತನಿಗೆ ಹೇಳಿದನು. ಮರುದಿನ ರಾಧಾಗುಪ್ತನು ದಾನಪತ್ರವನ್ನು ಬರಕೊಂಡು ಬಂದನಂತರ, ಚಕ್ರವರ್ತಿಯು ತನ್ನ ಕೈಮುಟ್ಟಿ ಅದಕ್ಕೆ ಮುದ್ರೆಯನ್ನೊತ್ತಿ, ಲೇಖನಪತ್ರವನ್ನು ವೇಣುವನಕ್ಕೆ (ಕುಕ್ಕುಟಾರಾಮಕ್ಕೆ) ಕಳಿಸಿದನು. ಆ ಪತ್ರವು ಉಪಗುಪ್ತಾಚಾರ್ಯರ ಕೈಯಲ್ಲಿ ಬಿದ್ದ ಕೂಡಲೆ, ಇತ್ತ ಅಶೋಕನಪ್ರಾಣೋತ್ಕ್ರಮಣವಾಯಿತು.

ಅಶೋಕನ ಉತ್ತರಕ್ರಿಯೆಗಳು ಮುಗಿದಮೇಲೆ ರಾಧಾಗುಪ್ತನು ಮಂತ್ರಿವರ್ಗವನ್ನು ಒಟ್ಟುಗೂಡಿಸಿ ಅವರನ್ನು ಕುರಿತು—ಅಶೋಕಮಹಾರಾಜರು ನೂರು ಕೋಟಿ ಸುವರ್ಣಮುದ್ರಿಕೆಗಳನ್ನು ದಾನಮಾಡಲು ಸಂಕಲ್ಪಮಾಡಿದ್ದರು. ಆ ಮುದ್ರಿಕೆಗಳಲ್ಲಿ ೯೬ಕೋಟಿ ಮುದ್ರಿಕೆಗಳು ದಾನಮಾಡಲ್ಪಟ್ಟವು; ಇನ್ನು ನಾಲ್ಕು ಕೋಟಿ ಮುದ್ರಿಕೆಗಳು ದಾನಮಾಡಲ್ಪಡಬೇಕಾಗಿವೆ; ಆದರೆ ಯುವರಾಜರಿಂದ ತಮ್ಮ ಸಂಕಲ್ಪವು ಪೂರ್ಣವಾದೀತೆಂದು ತೋರದ್ದರಿಂದ, ಚಕ್ರವರ್ತಿಗಳವರು ಸಂಪೂರ್ಣಪೃಥ್ವಿಯನ್ನು ಗುರುಗಳಿಗೆ ದಾನಮಾಡಿಬಿಟ್ಟರು. ಈಗ ನಾವು ಸಂಘಕ್ಕೆ ನಾಲ್ಕುಕೋಟಿ ರೂಪಾಯಿಗಳನ್ನು ಕೊಟ್ಟು ಪುನಃ ರಾಜ್ಯವನ್ನು ಕೊಂಡುಕೊಳ್ಳಬೇಕು, ಎಂದು ಹೇಳಲು, ರಾಧಾಗುಪ್ತನ ಈ ಮಾತನ್ನು ಎಲ್ಲರೂ ಒಪ್ಪಿಕೊಂಡು, ರಾಜ್ಯವನ್ನು ಬಿಡಿಸಿಕೊಂಡರು. ಅದನ್ನು ಸಂಪದಿಯು ಆಳಹತ್ತಿದನು.



**ಸಮಾಪ್ತ.**

# (ಪುಸ್ತಕಗಳ ಹೆಸರು ಮತ್ತು ಕ್ರಯದ ಪಟ್ಟಿ.)



| | | |
|---|---|---|
| ೧ | ಮಾಧವ ಕರುಣಾವಿಲಾಸ | ೩-೧೨-೦ |
| ೨ | ಮಹಾಭಾರತಾಮೃತ (ಆದಿಪರ್ವ) | ೩-೮-೦ |
| ೩ | ಶೈವಸುಧಾರ್ಣವ | ೩-೮-೦ |
| ೪ | ಭಾಗವತಾಮೃತ | ೩-೮-೦ |
| ೫ | ಶ್ರೀ ತುಲಸೀ ರಾಮಾಯಣ | ೩-೦-೦ |
| ೬ | ಧಾರ್ಮಿಕತೇಜ | ೧-೮-೦ |
| ೭ | ಕರ್ಮಕಥೆ | ೧-೮-೦ |
| ೮ | ಈಶ್ವರೀ ಸೂತ್ರ | ೧-೦-೦ |
| ೯ | ಕುರುಕ್ಷೇತ್ರ | ೧-೦-೦ |
| ೧೦ | ವೇಂಕಟೇಶ ಮಹಾತ್ಮ್ಯ | ೧-೦-೦ |
| ೧೧ | ರಾಣಾ—ರಾಜಸಿಂಹ | ೦-೧೨-೦ |
| ೧೨ | ಗುರುಪ್ರಸಾದ | ೦-೧೨-೦ |
| ೧೩ | ಸದ್ಗುರು ಪ್ರಭಾವ | ೦-೧೨-೦ |
| ೧೪ | ಸುಂದರಲೇಖ ಸಮುಚ್ಚಯ | ೦-೮-೦ |
| ೧೫ | ಭಗವತೀ ಕಾತ್ಯಾಯನೀ | ೧-೮-೦ |
| ೧೬ | ನಿರ್ಯಾಣ ಮಹೋತ್ಸವ | ೦-೮-೦ |

ಕುಮುದಿನಿ, ಮರಾಟರ ಅಭ್ಯುದಯ, ಛತ್ರಪತಿ, ಗೃಹಕಲಹ, ಶಿವಪ್ರಭುವಿನಪುಣ್ಯ, ವೈಭವ, ಸತ್ವಸಾರ, ತಿಲೋತ್ತಮೆ, ಲಕ್ಷ್ಮೀಬಾಯಿ, ಕ್ಷಾತ್ರತೇಜ, ಚಿದಂಬರಚರಿತ್ರ, ಶುಕಸಂಜೀವಿನಿ, ಕುಟುಂಬ, ರಾಣೀ—ಮೃಣಾಲಿನಿ- ಇವು ಮುದ್ರಣದಲ್ಲಿವೆ.

## ೧೯೩೩ನೇ ಇಸ್ವಿಯಲ್ಲಿ ತಯಾರಾದ ಪುಸ್ತಕಗಳು.

| | | |
|---|---|---|
| ೧ | ಕಮಲಕುಮಾರಿ | ೧-೦-೦ |
| ೨ | ಧರ್ಮರಹಸ್ಯ | ೧-೦-೦ |
| ೩ | ವಿಕಾರವಿನಾಶ | ೦-೧೦-೦ |
| ೪ | ಪ್ರಬುದ್ಧ ಪದ್ಮನಯನೆ | ೧-೦-೦ |
| ೫ | ಸಭಾಪರ್ವದ ರಹಸ್ಯಗಳು | ೦-೧೦-೦ |
| ೬ | ಮಹಾಭಾರತಾಮೃತ (ಸಭಾಪರ್ವಪೂರ್ಣ,ವನಪರ್ವಅರ್ಧ) | ೩-೦-೦ |

## ಪುಸ್ತಕದೊರೆಯುವಸ್ಥಳ.

ಮ್ಯಾನೇಜರ “ಸದ್ಗುರು ಸುರಸಗ್ರಂಥಮಾಲಾ” ಆಫೀಸ ಹಾವೇರಿ,

ಪೋ. ಹಾವೇರಿ.
ಜಿ. ಧಾರವಾಡ.

ಇದು ಶ್ರೀ. ವೇಂಕಟೇಶ ಪ್ರಿಂಟಿಂಗಪ್ರೇಸಿನಲ್ಲಿ ವೇಂಕಟೇಶ ತಿರಕೋ
ಕುಲಕರಣಿ ಇವರಿಂದ ಛಾಪಿಸಲ್ಪಟ್ಟು ಅವರ " ಸದ್ಗುರು "
ಆಫೀಸಿನಲ್ಲಿ ಅವರಿಂದ ಪ್ರಸಿದ್ಧಮಾಡಲ್ಪಟ್ಟಿತು.